# ಬಿನ್ನಹ

ಶ್ರೀನಿವಾಸ

"ಬಿನ್ನಹಕೆ ಬಾಯ್ ಇಲ್ಲವಯ್ಯ"

—ಪುರಂದರದಾಸರು

ಜೀವನ ಕಾರ್ಯಾಲಯ
ಬಸವನಗುಡಿ
ಬೆಂಗಳೂರು

# ಬಿನ್ನಹ

ಯದುಕುಲ ಕಾಂಭೋಜ

ಬಿನ್ನಹವನಿದನು ಲಾಲಿಪುದು :
ಚೆನ್ನಕೇಶವ ನಿನ್ನ ಪದತಳದಿ ಮಾಡುವೀ
ಬಿನ್ನಹವನಿದನು ಲಾಲಿಪುದು.

ಮುನ್ನ ಭಕ್ತಾಗ್ರಣಿ ಅನಂತ ಅಪರಾಧ
ತನ್ನಲ್ಲಿ ಇರಲಾಗಿ ಬಾಯಿ ಇಲ್ಲ
ಬಿನ್ನಹಕೆ ಎಂದನೈ; ಗುರುವರನೆ ಅಂತೆನಲು
ಎನ್ನ ಮಾತೇನು ಹರಿಯೇ, ಆದೊಡೆಯು
ಬಿನ್ನಹವನಿದನು ಲಾಲಿಪುದು.

ನಿನ್ನ ಸೃಷ್ಟಿಯ ವಿಶಾಲಾವರಣದೊಳು ಹರಿ
ಎನ್ನನೂ ಗಣಿಸಿ ನಿಲಿಸುತೆ ಲೀಲೆ ತೋರಿ
ನಿನ್ನವನು ಎಂದೆಯಲೆ; ಮುಗುಳುನಗೆಯಿಂದಿಂದು
ಬಿನ್ನಹವ ಕಂದನದು ಎಂದು ದೊರೆಯೇ
ಬಿನ್ನಹವನಿದನು ಲಾಲಿಪುದು.

ಎನ್ನ ನಲ್ಮೆಯನೆಣಿಸಿ ಕರುಣೆಯನು ತೋರುವರೆ
ಇನ್ನೆವರಮಿಂತು ಪೊರೆದುದು ಎಂತುಟು ?
ನಿನ್ನ ಕರುಣೆ ಅಪರಿಮಿತವಾದಕಾರಣ
ಬಿನ್ನಹವ ಗೆಯ್ವೆನಿದ ಧೈರ್ಯದಿಂದೆ.

# ಹಾರಯಿಕೆ

ಪೂರ್ವಕಲ್ಯಾಣಿ

ಮಾಡು ಇದನು ಕರುಣಾಕರಾ
ಬೇಡುವೆನಿನಿತನು ಮಾಡು.

ವೀಣೆಯಾಗದಿರೆ ಮಧುರ ನಿನಾದದಿ,
ವಾಣಿಯಂದುಗೆಯ ದನಿಯ ಸಿತಾರು,
ರಾಣಿ ನುಡಿಸುವ ಕೊಳಲು ಆಗದಿರೆ,
ಊಣೆಯವಿಲ್ಲದ ಏಕನಾದವ
ಮಾಡು ಇದನು ಕರುಣಾಕರಾ

ಪಂಚಮದ ಕಲಕಂಠದಿಂದೆ ಪ್ರ
ಪಂಚವ ನಲಿಸುವ ಕೋಗಿಲೆ ಬೇಡ;
ಅಂಚಿನೊಳಿರಲಹ ಕಾಗೆಯೆ ಆದರೂ
ವಂಚನೆಯಿಲ್ಲದ ದನಿಯನು ನೀಡು.

ನೀನು ನುಡಿಸಲು ಏಕನಾದವೂ
ವೀಣೆಯಾಗದೆಯೆ ಚೆಂದವಪ್ಪುದು;
ಕಾನನ ಗೀತದೆ ಕಾಗೆಯ ದನಿಯನು
ಲೀನಮಾಡಿ ನೀ ಅಂದವಿದೆನಿಸುವೆ.

# ಕವಿಗಳ ಕವಿ

ಕಾನಡ

ಕವಿ ಕುಲದ ಕವಿಯು ನೀನು; ನಿನ್ನ
ಸವಿಯಾದ ಕವಿತೆಯಿದರರ್ಥವನು ತಿಳಿಸೈಯ.

ವನವ ವರ್ಣಿಸುವ ಮಾತೆರಡ ಜೋಡಿಸುವವನ
ಕೊನೆದು ಕೊಂಡಾಡಿ ಕವಿಯೆನ್ನುವುದು ಜಗವು:
ವನಸಹಸ್ರವ ಪೊತ್ತ ತಿರೆಯ ರಚಿಸಿದೆ ದೇವ
ವನಮಾಲಿ ನಿನ್ನ ಕವಿತೆಯ ಜಾಣ್ಮೆ ಅದ್ಭುತವು.

ರಂಗದಲಿ ಕೆಲಬರನು ನಿಲಿಸಿ ವೇಷದ ನಾಲ್ಕು
ಸಂಗತಿಯ ನಡೆಯಿಸುವ ಸೂತ್ರಧಾರನು ಜಾಣ:
ಜಂಗಮದಿ ಸ್ಥಾವರದಿ ನಿಂದು ಎಲ್ಲವ ನಡೆಪ
ರಂಗಧಾಮ ನಿನ್ನ ಸೂತ್ರ ನುಡಿಗಸದಳವು.

ಸರವಿದನು ಪೊಕ್ಕ ದಾರವ ಹವಳ ಕಾಣದಿದೆ;
ಮರೆಯು ಅರ್ಥ ಮನವ ಮರುಳು ಮಾಡುವುದು;
ಸರಳನಾಗುತೆ ಇದರ ಅರ್ಥವನು ತಿಳಿಸದಿರೆ
ಕರುಣಾಳು ನಿನ್ನ ಈ ಕವಿತೆ ಎಲ್ಲವು ವ್ಯರ್ಥ.

# ಚೆನ್ನಕೇಶವ

ಬೇಗಡೆ

ನಿನ್ನ ನೋಡದ ಈ ಜನ್ಮ ವ್ಯರ್ಥ
ಪನ್ನತಾಂಗ ಶ್ರೀಚೆನ್ನಕೇಶವ.

ಲೋಕೈಕನಾಥ ಸರ್ವಾಂತರ್ಯಾಮಿ
ನಾಕಾಧಿಪರಿಗೆ ದುರ್ಲಭನು ನೀ ನಿ
ರಾಕಾರ ನಿರ್ಗುಣ ನಿರ್ವಿಕಾರ
ಸಾಕಾರನಾಗಿ ಎದುರಿನಲಿ ನಿಲಲು
ನಿನ್ನ ನೋಡದ ಈ ಜನ್ಮ ವ್ಯರ್ಥ.

ಭಾವದಲಿ ನಿನ್ನ ಅರಿವೆನೆಂಬರುಂಟೆ?
ಭಾವನಾತೀತ ಗಹನಾ ಗಭೀರ?
ದೇವಾಧಿದೇವ ಪಾವನ ಸ್ವರೂಪ
ಸೇವೆಯನು ಕೊಳಲು ನೀನಿಲ್ಲಿ ತೋರೆ,
ನಿನ್ನ ನೋಡದ ಈ ಜನ್ಮ ವ್ಯರ್ಥ.

ಮನದೊಳಗೆ ನಿನ್ನ ಪದತಲವ ಧರಿಸಿ
ಜನುಮವನು ಸಫಲಗೊಳಿಸುವುದ ನೀಡು;
ವನಜಾಕ್ಷ ನೀ ಧರಿಸಿರುವ ರೂ
ಪಿನ ಸಾಸಿರಗಳನರಿಯುವುದ ನೀಡು.

# ಎಚ್ಚರ

ಕಾನಡ

ಎಚ್ಚತ್ತು ಆದುದು ಏನು ?
ನಿಚ್ಚವು ನಿನ್ನನು ನಿದ್ದೆಯಲಿ ಕಾಂಬರೆ
ಎಚ್ಚತ್ತು ಆದುದು ಏನು ?

ಎಚ್ಚರದಲಿ ಮನೆ ಮಠ ಮಂದಿ ಜನ
ನೆಚ್ಚಿದ ಹೆಂಡಿರು ಮಕ್ಕಳು ಬಳಗ
ಹೆಚ್ಚಿದ ಆಸೆ ಬಿಡದೆ ಬಾಧಿಸಲು,
ಸಚ್ಚಿದಾನಂದ ನಿನ್ನ ನೋಡಲಿಲ್ಲ.
ಎಚ್ಚತ್ತು ಆದುದು ಏನು ?

ದೂರದೇಶಕೆ ಐದಿದಿನಿಯನನು
ಸೇರಲೆಂದು ಮತ್ತೆ ಮತ್ತೆ ಸುಯ್ವ ಸತಿ
ಸಾರಲಾರದೆ ಹಗಲ ನೀಗುತೆ
ಸೇರಿದಂತವನ ಸ್ವಪ್ನದಿ ಕಾಂಬಳು.
ಎಚ್ಚತ್ತು ಆದುದು ಏನು ?

ಎದ್ದಾಗ ಬರುವೆಯಾದೊಡೆ ಕೊಡು ಎಚ್ಚರ;
ನಿದ್ದೆಯಲಿ ಬರುವೊಡೆ ನಿದ್ದೆಯ ಕೊಡು ದೇವ;
ಮೊದ್ದನಾಗಿ ನಿನ್ನ ಕಾಣದೆ ಬಾಳ್ವುದು
ಇದ್ದರೂ ಇಲ್ಲದ ಇರವು ಶ್ರೀನಿವಾಸ.

# ಪ್ರಾರ್ಥನೆ

ಶ್ರೀರಾಗ

ನಿನ್ನ ರೂಪನು ತೋರಿಸೈ; ಶ್ರೀ
ಚೆನ್ನಕೇಶವ ಸಕಲ ಜಗಕೆ ರೂಪವನಿತ್ತ
ನಿನ್ನ ರೂಪನು ತೋರಿಸೈ.

ತಾಯಗರ್ಭದ ಕೂಸು ತಾಯನರಿಯುವುದೆಂತು
ಕಾಯವೆರಡಾಗದೆ? ಅದರಿಂದೆ ಎನ್ನ
ನ್ಯಾಯ ಇಲ್ಲಿಗೆ ಕಳುಹಿಸಿದುದು: ಆದೊಡೆ ಇಲ್ಲಿ
ಮಾಯದಿಂ ಮರೆದಿರುವೆ, ನಿನ್ನನರಿಯುವೆನೆಂತು?
ನಿನ್ನ ರೂಪನು ತೋರಿಸೈ.

ಭಕ್ತನಲ್ಲದವ ತೋರಿದ ಕಂಬದೊಳಗಂದು
ವ್ಯಕ್ತನಾದೆಯಂತೆ ಅಮಿತ ಕರುಣಾ;
ಶಕ್ತಿ ಇಲ್ಲವು ನಿನ್ನನರಸುವೊಡೆ; ನೋಳ್ಪ ಆ
ಸಕ್ತಿ ಮಾತ್ರ ಉಂಟು; ಇದನರಿತು ಪರಮಾತ್ಮ,
ನಿನ್ನ ರೂಪನು ತೋರಿಸೈ.

ಉಪವನದ ಶೋಭೆಯ ತರಂಗಮಾಲೆಯ ಧರಿಸಿ
ನೆಪ ಮಾತ್ರ ಕಂಡು ಮರಗಳ ನಡುವೆ ಮರೆಯಾದ
ವಿಪಿನ ಮೋಹಿನಿಯ ಲಾವಣ್ಯದಿನಿಸನು ನೆನೆದು
ತಪಿಪಂತೆ ಇಹುದು ಮನ, ಕಂಡು ಕಾಣದೆ ನಿನ್ನ,
ನಿನ್ನ ರೂಪನು ತೋರಿಸೈ.

# ಸಂದೇಹ

ತೋಡಿ

ಸಂದೇಹವ ತಾಳಲಾರೆ:
ತಂದೆ ನಿನ್ನ ಕೃಪೆ ಇಲ್ಲವೋ ಎಂಬ
ಸಂದೇಹವ ತಾಳಲಾರೆ.

ಸಂದೇಹವ ತಾಳಲಾರೆ;
ದಂದುಗಕೆ ಈಡಾಗಲಾರೆ;
ಪಂದೆಯಾಗಿ ಜನ್ಮವನು ಪೊತ್ತು ನೀ
ಕಂದನೆಂಬೆಯೋ ಇಲ್ಲವೋ ಎನ್ನುವ
ಸಂದೇಹವ ತಾಳಲಾರೆ.

ಕರುಣೆ ಕಾಣದೆ ಮರುಗಿದೆ ಮನವು;
ಅರೆಕಳೆಯೆ ಚೈತ್ರ ಮಳೆಹನಿಯೊಂದೂ
ಕರೆಯದೆ ಎವೆಯಿಕ್ಕದೆ ಇಹ ಬಿಸಿಲಲಿ
ಮರುಭೂಮಿ ಮಧ್ಯದೆಲರಿನವೊಲು ಇದೆ.

ಕಳುಹಿಸು ಹರಿಯೇ ಮೋಡಗಳನು:
ಮಳೆ ಬರುವುದೋ ಸಿಡಿಲೆ ಎರಗುವುದೊ
ತಿಳಿಯೆ ನಾನು; ಅದು ಆದುದಾಗಲಿ;
ಕಳುಹಿಸಯ್ಯ ಹರಿ ಮಳೆಯ ಚಿಹ್ನೆಯನು.

# ನಿದ್ದೆ

ಭೈರವಿ

ಇಂತು ಬಂದು ಪೋಪರೇ ?
ಸಂತತ ನಿನಗೆಂದು ಕಾದಿರೆ ನಾನು
ಇಂತು ಬಂದು ಪೋಪರೇ ?

ಅರೆನಿದ್ದೆಯಲಿ ಮೆಯ್ಯಮರೆದಿಹ ಸಮಯದಿ
ಹರಿ ನೀ ಬಂದೆನ್ನ ಕೆಲದೊಳು ಕುಳಿತು
ಕರುಣದಿ ನಿನ್ನ ಕಳೆಯನೆನ್ನೊಳಿಟ್ಟು ಕಣ್
ತೆರೆವ ಮುನ್ನ ಮರೆಯಾಗುತೆ ಇಂತು,
ಇಂತು ಬಂದು ಪೋಪರೇ ?

ಯಾರೋ ಬಂದರೆಂದುದು ಮನ ತನ್ನೊಳು ;
ಯಾರೂ ಇಲ್ಲ, ಕನಸು, ಎಂದುದು ಮತ್ತೆ ;
ಸಾರಿಬಂದು ಎನ್ನ ಬಳಿಯಲಿ ಕುಳ್ಳಿರ್ದು
ವಾರಿಜನಾಭ ಎನ್ನನೆಚ್ಚರಿಸದೆ,
ಇಂತು ಬಂದು ಪೋಪರೇ ?

ಬೇರೆ ಲೋಕವನು ಸೇರಿದ ತಾಯಿ ಕು
ಮಾರನ ನಿದ್ದೆಯಲಿ ಮುದ್ದಿಪ ತೆರದಲಿ,
ತೋರದೆ ಮರೆಯಿಂದೆ ಪೊರೆಯುವೆ. ನಾ ಕಾಣ
ಲಾರೆನೆ ಇಲ್ಲಿ ನಿನ್ನನು ಕರುಣಾಕರ ?

# ಆರ್ತ

ಮುಖಾರಿ

ನಿನ್ನ ಮಕ್ಕಳು ನಿನ್ನ ಕರೆವ ದನಿ ಯಾವುದೋ
ಚೆನ್ನಕೇಶವ ಎನಗೆ ಆ ದನಿಯ ನೀಡು;
ಸನ್ನುತನೆ ಎನಗಿದನು ದಯೆಗೆಯ್ಯೆ ನೀನು
ಇನ್ನೆನಿತು ಗಹನನಾದರು ನಾನು ಭಯಪಡೆನು.

ಖೇಚರದೆ ಸಾವಧಾನದಿ ಸಿಡಿಲ ಹಿಡಿಯಂತೆ
ತಾ ಚರಿಸುತಿರ್ದು, ಕಿಚಪಿಚ ನೆಲದೆ ಸುಳಿಯುತಿಹ
ಹೀಚು ಮರಿಕೋಳಿಗಳ ಕೊಲ್ಲಲೆರಗುವ ಗೃಧ್ರ,
ಕೀಚೆಂದು ತನ್ನ ಮರಿ ದೂರದಿಂ ಮೊರೆಯೆ,
ಹಿಂತಿರುಗಿ ಬಂದು ಗೂಡನು ಸೇರಿ ಮರಿಗಳನು,
ಚಿಂತಿಸದೆ ಇರಿ ಇಲ್ಲಿ ನಾನಿಹೆನು ಎಂದೆನುತೆ
ಸಂತಯಿಸಿ, ಕನಿಕರವತೋರಿ ಪೊರೆಯುವುದಯ್ಯ:
ಇಂತು ನಿನ್ನನು ಕರೆವ ದನಿಯ ನೀಡೆನಗೆ.

ಚೀರಿಡಲು ಸವತಿಯ ಕೂಸು, ಅದನೋಡದೆ,
ಕಾರುಕಾರೆಂದೇಕೆ ಬಡಿದುಕೊಳ್ಳುವುದೆಂದು
ಕ್ರೂರ ವಚನವ ನುಡಿದು ಕೋಪಿಸುವ ಬಲತಾಯಿ
ಹಾರಿಬರುವಳು ತನ್ನ ಕೂಸಳುವ ಮುನ್ನ;
ಎನ್ನಯ್ಯ ಅಳಬೇಡವೆಂದೆತ್ತಿಕೊಂಬಳು,
ಚಿನ್ನ ನಿನಗೀವೆ ಪಾಲ್ಸಕ್ಕರೆಯನೆಂಬಳು,
ಇನ್ನು ಅಳಬೇಡ ಕಂದಾ ಎಂದು ಬೇಡುವಳು:
ನಿನ್ನ ನಾನಂತು ಕರೆಯಲು ದನಿಯ ಕೊಡು ದೇವ.

# ವ್ಯಾಕುಲ

ಮೋಹನ

ಅರಸನೀದಾರಿಯಲಿ ಬರುವನೆಂದರು ಅವರು;
ಬರಲಿಲ್ಲವೇಕೆ ಇನ್ನೂ?
ಬರಿಯಮಾತನು ಹೇಳಿ ಮರುಳುಮಾಡಿದರೇನೋ?
ಬರಲಿಲ್ಲವೇಕೆ ಇನ್ನೂ?

ನಡುವಗಲ ವೇಳೆಯಲಿ ಪೊಂದೇರನೇರಿ ತಾ
ಕಡುವೇಗದಿಂ ಬಂದು ಕಾಯ್ದುವರ ಪಿಡಿದೆತ್ತಿ
ತೊಡೆಯಮೇಲಿರಿಸಿ ಪ್ರೇಮದ ಕಂಗಳಿಂ ನೋಡಿ
ಪೊಡವಿಪತಿ ಪಾಲಿಸುವನೆಂದು ಪೇಳ್ದರು ಅವರು;
ಬರಲಿಲ್ಲವೇಕೆ ಇನ್ನೂ?

ಬಿಸಿಲೇರಿ ತಗ್ಗಿತು; ಬೇಗೆಯಿಂ ಬಾಡಿದೀ
ಕಿಸಲಯದ ಸಂಚಯದವೊಲು ಇಹುದು ಮನವು;
ಕುಸುಮ ಸಂಕುಲವೆಲ್ಲ ತಿರೆಯ ಸೇರಿತು; ಇನ್ನೂ
ಬಿಸಜಾಕ್ಷ ಬರಲಿಲ್ಲವೇಕೆ ನಮ್ಮೊಡೆಯಾ?
ಬರಲಿಲ್ಲವೇಕೆ ಇನ್ನೂ?

ಪರವೆಗಳ ಝೇಂಕೃತಿಯ ರವದಿಂದೆ ಬಿಸುಗಾಳಿ,
ದೊರೆಯನೋಳ್ಪಾಸೆಯಿಂದೆನ್ನ ಮನದಂತೆ,
ಪರಿಪೂರ್ಣವಾಗಿರ್ದು ಬರಿದಾಗುತಿದೆ ಈಗ;
ದೊರೆ ಇಹನೊ ಇಲ್ಲವೋ? ಅವರೇನಪೇಳ್ದರೋ?
ಬರಲಿಲ್ಲವೇಕೆ ಇನ್ನೂ?

# ನಿರೀಕ್ಷೆ

ಹಿಂದೂಸ್ತಾನಿ ತೋಡಿ

ನಿನ್ನನಿದಿರುನೋಡುತಾ ಇನ್ನೂ ಇಲ್ಲಿ ಕಾದಿಹೆವು;
ಚಿನ್ನ ನೀನು ಬರದೆ ಇರಲು ಕಾರಣವ ಕಾಣೆವು.

ಮಾಮರನ ಎಳೆದಳಿರಿನ ಮರೆಯಿಂದಲಿ ಮೊರೆಯುತಾ
ಭಾಮೆಯರಾ ಬನ್ನಿರೆಂದು ಕರೆಯುತಿಹುದು ಕೋಕಿಲಾ;
ಕಾಮಸೂತ್ರವೆಲ್ಲವನೂ ಒಂದೇ ಸ್ವರದಿ ಪೇಳ್ವುದಂತೆ,
ಪಾಮರೆಯರನೊಂದು ಕ್ಷಣದಿ ಪಂಡಿತೆಯರ ಮಾಳ್ಪುದಂತೆ

ದೂರದಿಂದ ಬೀಸಿ ಬರುತ ತೆಂಗಾಳಿ ಪ್ರೇಮದಿಂ
ದಾರಿಯೊಳಿಹ ವನವ ತೂರಿ ಜಲಪಾತವ ಸೇರುತಂ
ಸಾರಿತಂದು ಶೀಕರವನು ಪುಷ್ಪಗಳೊಡನಾಡುತಂ
ಸೂರೆಗೊಂಡು ಸೌಗಂಧವ ಸೂಸುತಿಹುದು ಸುಖವನಿಲ್ಲಿ.

ಸುರಯಿಯು ಪಾದರಿಯು ನಾಗಲಿಂಗ ನಾಗಸಂಪಿಗೆಯು
ಅರೆಯರಳಿದ ಇರವಂತಿಯು ಬಿರಿಮುಗುಳಿನ ಮಲ್ಲಿಗೆಯು
ತಿರಿದು ತಂದು ಸೊರಗಿ ನಿಂದು ಬರುವೆಯೆಂದು ಕಾದೆವು;
ಬರದೆ ನೀನು ನಿಲಲು ಹೂವು ಮನದವೋಲು ಮರುಗಿತು.

ಕಾಳರಕ್ಕಸಿಯರ ಕರಿಯುಸೇಲೆಯಂತೆ ಕಳ್ತಲು
ಬೀಳುತಿಹುದು ವನದಮೇಲೆ; ಮನವನಂತೆ ಮುಸುಕಿತು;
ಆಳವಾಯ್ತು ಕಾಳಿಂದಿಯ ಕರಿಯುನೀರ ಮಡುವಿನಂತೆ;
ತಾಳ್ವೆವೆಂತು ಈ ವಿರಹವ? ಬಾಳು ಬರಿದು ನಿನ್ನನುಳಿದು.

## ಬೇಸರ

ಖರಹರಪ್ರಿಯ

ಸೋತು ಸಾರಿದರು ಮನೆಗೆ: ಹರಿ
ಏತಕೆ ಬರನೋ ಎಂದು ಸಖಿಯರು
ಸೋತು ಸಾರಿದರು ಮನೆಗೆ.

ಆತುರದೊಳು ನಿನ್ನನಿದಿರುನೋಡುತಾ
ಕಾತರರಾಗುತೆ, ನೀ ಬರದಿರೆ, ಮನ
ಸೋತು ಬೇಸರದೆ ಎಲ್ಲರು ನಾ ಬರಿ
ವಾತ ಹೇಳಿದೆನು ಎನ್ನುತೆ ಹಳಿದು
ಸೋತು ಸಾರಿದರು ಮನೆಗೆ.

ದೂರದಿ ನೀನು ಬರುತಿರೆ ನೋಡಲು
ಆರುವೆವೆನ್ನುತೆ, ಕಣ್ಗೆ ಕೈಹಿಡಿದು,
ಮೀರಿದ ಜತನದಿ ನೋಡಿ ನೋಡಿ,
ಬಾರನು ಮುರರಿಪು ಎನ್ನುತೆ ಕೋಪದಿ
ಸೋತು ಸಾರಿದರು ಮನೆಗೆ.

ತ್ವರೆಯಿಂದೆ ಎಮ್ಮ ಸೇರಲೆಂದು ನೀ
ಬರುತಿರೆ ಕಾಡೊಳು, ಜೊತೆಗಾತಿಯರು,
ಪುರಕೆ ಪೋಗುವ, ಬರುತಿಹನಪ್ಪೊಡೆ
ಅರೆದಾರಿಯೊಳೇ ಕಾಣುವೆವೆಂದು
ಸೋತು ಸಾರಿದರು ಮನೆಗೆ.

ಮರೆಯೊಳು ಬರುತಿರೆ ಕಾಣನು ಎಂದೆನು;
ಬರುವುದೇ ದಿಟ, ಎಲರಲಿ ನೋಡಿರಿ,
ಸಿರಿಕಂಡದ ಕತ್ತುರಿಯ ಲೇಪನದ
ಪರಿಮಳವನೆಂದೆ: ಆದರು ಕೇಳದೆ
ಸೋತು ಸಾರಿದರು ಮನೆಗೆ.

# ಬೆಳವಣಿಗೆ

ಕಾಂಭೋಜಿ

ಬೆಳೆದು ಫಲವೇನು ಹರಿಯೇ ?
ಇಳೆಯ ತುಂಬಿದ ನಿನ್ನ ಕಳೆಯನರಿವುದ ಮರೆಯೆ
ಬೆಳೆದು ಫಲವೇನು ಹರಿಯೇ ?

ಎಳೆಯ ದಿನದಲಿ ಒಂದು ಕೊಳವ ನೋಡಿದೆನಂದು
ಪಳುಕ ಸೋಪಾನ ಪಳುಕಿನ ಅಚ್ಚಾದ
ತಿಳಿನೀರ ಕೊಳವಾಗಿ ಕಂಡುದಿಂದದ ನೋಡೆ
ಕಳೆದ ಸೋಪಾನ ಕೊಳೆನೀರಬೆಂಚೆ.
ಬೆಳೆದು ಫಲವೇನು ಹರಿಯೇ ?

ಮೊಲೆಯೂಡಿ ಸಾಕಿದ ತಾಯ ನೋಡಿದರಂದು
ಪಲವಿಧದೆ ಕೊನೆಯುತಿರ್ದೆನ್ನ ಮನಸು
ಸಲಿಗೆಯಿಂದಾತಾಯ ನುಡಿಸಲಾರದೆ ಇಹುದು ;
ಮಲೆಯಂತೆ ಮೈಬೆಳೆದು ಮನಸುಮೊಲದಂತಾಗೆ
ಬೆಳೆದು ಫಲವೇನು ಹರಿಯೇ ?

ಸುತ್ತು ಹತ್ತಿರದಿ ಸುಳಿದಾಡಿ ಕುಣಿಯುತೆ ಚಿಗಿದು
ಮತ್ತೆ ತಾಯಬಳಿಗೆ ಬಂದು ಚಿಮ್ಮಿ,
ಎತ್ತಿಕೊಳ್ಳುವ ಎಂದು ನೋಡುವರಿಗೆನಿಪ, ಎಳೆ
ಕತ್ತೆವರಿ ಬಲಿದಂತೆ ಬಲಿದುದೀ ಮನವು.

ಸುಮತಿ ಇದು ವಯಸಿಂದ ಬರುವುದೆನೆ, ಹರಿ, ಎನಗೆ
ಕುಮತಿ ಇರಲಯ್ಯ, ಈ ಸುಮತಿ ಬೇಡ ;
ಅಮಿತವಾದಾ ಸೊಬಗನಂದು ನೋಡಿದ ದೃಷ್ಟಿ
ಮಮತೆ ಇರಲಯ್ಯ, ನಿನ್ನನು ಕಾಣ್ಬರೆ.

# ಲೀಲೆ

ರೀತಿಗೌಳ

ಏನು ಆಟ ಇದು ಹರಿಯೇ? ಅರಿಯಲು
ಜ್ಞಾನವನೀಡೆನ್ನ ದೊರೆಯೇ.

ದಾನವ ಗುಣಗಳ ಮಾಡಿ, ಅವುಗಳ
ಮಾನವ ಹೃದಯದೊಳಿಟ್ಟು,
ದಾನವಾರಿ ಎಂಬ ಬಿರುದಿಗೆ ಅನುಸಂ
ಧಾನವ ಮಾಡಿರುವಂತಿದೆ ನೋಡಲು.

ಗೃಧ್ರವ ಮಾಡಿಹೆ ನೀನು; ಅಂತೆ
ಕ್ಷುದ್ರಜೀವಿ ವಾಯಸವ;
ರುದ್ರವಾಗಿ ಅವು ಒಂದಕೆ ಒಂದು ಉ
ಪದ್ರವ ಮಾಡಲು ನೋಡುತಲಿರುವೆ.

ಎಲ್ಲವು ನಿನ್ನಯ ಮಾಯಾ; ಇದು
ಎಲ್ಲವು ಚೆನ್ನಿಗರಾಯಾ;
ಎಲ್ಲವು ನಿನ್ನಯ ಛದ್ಮನಿಕಾಯಾ;
ಎಲ್ಲವನರಿಯಲು ನೀನೇ ಉಪಾಯಾ.

# ನಂಬಿಕೆ

ಖರಹರಪ್ರಿಯ

ನಂಬಿಕೆಯನು ನೀಡು; ನಿನ್ನೊಳು
ನಂಬಿಕೆಯನು ನೀಡು.

ಒಳ್ಳಿದು ನಿನ್ನೊಳನಂತವಾಗುತೆ
ಪಲ್ಲವ ಪುಷ್ಪಕೆ ಬೆಳೆಯುವುದೆಂದೂ,
ಸಲ್ಲದುದೆಲ್ಲವು ನಿನ್ನ ಪಾದ
ಪಲ್ಲವದಡಿಯಲಿ ಮುರಿಯುವುದೆಂದೂ
ನಂಬಿಕೆಯನು ನೀಡು.

ಅಳಿಲು ನಾನು; ಅಣು ಮಾತ್ರನು ನಾನು;
ಮಲೆಯ ಮಹತ್ವವು ನಿನ್ನದು; ಎನ್ನ
ತಿಳಿವಿನಿಂದ ಸರಿ ತಪ್ಪು ಎಂದು
ಅಳೆಯದಂತೆ ನಿನ್ನಯ ವ್ಯಾಪಾರವ
ನಂಬಿಕೆಯನು ನೀಡು.

ಬಲ್ಲವರೊಳು ನೀ ಬಲ್ಲವ ಹರಿಯೇ;
ಬಲ್ಲಿದರೊಳು ನೀ ಬಲ್ಲಿದನಯ್ಯ;
ಸೊಲ್ಲು ಯೋಚನೆಗೆ ಮೀರಿದ ನಿನ್ನೊಳು
ಎಲ್ಲವು ಒಳ್ಳಿಯದಾಗುವುದೆಂದು
ನಂಬಿಕೆಯನು ನೀಡು.

# ಆಡಂಬರ

ಭೈರವಿ

ಆಡಂಬರದಿ ಬರಲು ಮನವು ಒಪ್ಪುವುದಯ್ಯ;
ಆಡಂಬರವನ ಳಿಯೆ ನೀ ಬೇಡವು.

ರೇಶಿಮೆಯ ವಸ್ತ್ರಗಳು ಮೂರನಾದರು ಹೊದ್ದು
ಕಾಶಿಪೀತಾಂಬರವ ಸೊಗಸಾಗಿ ಉಟ್ಟು
ದೇಶ ದೇಶದ ಒಡವೆ ತೊಡವನೆಲ್ಲವ ಧರಿಸೆ
ಆಶೆಯಿಂದಿದಿಗೊಂಡು ಬರುವುದಯ್ಯ.

ಮನದಿನಿಯನಾಗುವೊಡೆ, ಹರಿ, ಇಂತು ಬರಬೇಕು;
ಇನಿತು ತಿಳಿಯದೆ ನಿನಗೆ? ಹರಿಯೆ, ಇನಿತು?
ವನಜಾಕ್ಷ, ಬರಿಮೆಯ್ಯಿ ಬರಿಯ ಕೈಯಲಿ ಬರಲು,
ಅನುಮಾನಬರದೆ ನೀನಲ್ಲವೆಂದು?

ಒಳ್ಳಿದನು ಅರಿವೆನೆಂಬುದು ಸುಖವ ತರಲಾಗಿ;
ಸಲ್ಲದುದನರಿಯುವುದು ಅಸುಖದಿಂದೆ;
ಒಳ್ಳಿತಸುಖವತಂದು ಸಲ್ಲದದು ಸುಖ ತರಲು
ಸಲ್ಲದೊಳಿತೆನ್ನುವುದು ಬರಿಯ ಮಾತಾಗದೇ?

# ಆಸೆ

ಭೋಪಾಳಿ

ಆಸೆ ಕೆಟ್ಟಿದು ಎಂದೆನಯ್ಯ;
ದಾಸನ ಕರೆವ ವಿಲಾಸವನರಿಯದೆ
ಆಸೆ ಕೆಟ್ಟಿದು ಎಂದೆನಯ್ಯ.

ಆಸೆ ಕೆಟ್ಟದು ಎಂದೆ; ಪಾಶಬಂಧವಿದೆಂದೆ;
ಕೇಶವಾ ನಿನ್ನ ಸೇರೆ ತೊಡಕು ಇದೆಂದೆ;
ಮೋಸಹೋಗದೆ ಶ್ರೀನಿವಾಸ ನಿನ್ನನು ಕಾಣ
ಲಾಶಿಸುತಿಲ್ಲವ ಬಿಡಲು ನೋಡಿದೆನಯ್ಯ.

ತಪ್ಪುಹೆಜ್ಜೆಯ ಕೂಸ ಆಟಕೆ ಮರೆಯಿಂದ
ಚಪ್ಪಾಳೆಗುಟ್ಟುತೆ ಕರೆಯಲು ತಾಯಿ,
ನೆಪ್ಪುತಪ್ಪಿ ಅಣುಗ, ಒಲ್ಲೆನು ನಾನೆಂದು,
ತೆಪ್ಪನೆ ನಿಂತಲ್ಲೆ ನಿಲುವಂತೆ ಮೂರ್ಖದಿ
ಆಸೆ ಕೆಟ್ಟದು ಎಂದೆನಯ್ಯ.

ಮಲೆಯಮೇಲೆ ನಿಂದ ನೀರು ವಾರಿಧಿಯನು
ಮಲೆಯಿಂದ ಇಳಿಯದೆ ಸೇರುವುದೆಂತು?
ಇಳಿವರೆ ಕಾಡು ಕಲ್ಲು ತಗ್ಗು ಎನ್ನುತೆ
ತಲೆಯಲಿ ನಿಂದ ನೀರಂದದಿ ನಿಲ್ಲುತೆ
ಆಸೆ ಕೆಟ್ಟದು ಎಂದೆನಯ್ಯ.

# ದೇಹ

**ಚಕ್ರವಾಕ**

ದೇಹವನು ಜರೆಯಬೇಡ, ತವಸೀ ;
ದೇಹವಿದ ಜರೆಯಬೇಡ.

ದೇಹದೊಳಗೀಡಾಡಿ ಮುಗಿಯದಿರು ಎನು ; ಸರಿಯೆ.
ದೇಹವೇ ಸರ್ವಸ್ವವೆನಬೇಡವೆನು ; ಸರಿಯೆ.
ಬಾಹ್ಯದಂತಿಹುದು ಆಂತರ್ಯವೂ: ಆದೊಡೆ
ಬಾಹ್ಯವನು ಬಿಡು ಎಂಬರೇ, ತವಸೀ ?

ಬಾಹ್ಯವನು ಹೊದೆದಿರುವ ಸೊಬಗ ಸಾಗರವನವ
ಗಾಹಿಸದೆ ನೆನೆಯಲಹುದೇ ಅನಂತ
ಮೋಹನನ ಸೌಂದರ್ಯದಣುಮಾತ್ರದಂಶವನು ?
ದೇಹದೊಳು ನೋಳ್ಪೆ ಆ ಸೌಂದರ್ಯವ.

ದೇಹ ಬೇಡದ ಜೀವ ದೇಹಿಯಾಗುವುದೇಕೆ ?
ಸಾಹಸ ಅದ ತುಳಿದು ಕಾಣ್ಬುದವನ
ದೇಹ ದೇಹ ಎಂದು ಮುಳಿವೇಕೆ ? ದೇವನಿಗೆ
ದೇಹವಿದ ದೇಗುಲವ ಮಾಡಬಹುದು.

# ಮೋಹ

ಶಾಹನ

ಕರಣಗಳೆಲ್ಲವು ಆಶಿಸುತಿಹವಯ್ಯ:
ಹರಿಯೇ ನಿನ್ನ ಸೇರಲೆಂದು
ಕರಣಗಳೆಲ್ಲವು ಆಶಿಸುತಿಹವಯ್ಯ.

ಅಣ್ಣಯ್ಯ ನೀ ಬಾ ಅಣ್ಣ ನೀ ಬಾ
ಕಣ್ಣಮಣಿಯೆ ಮಲರ್ಗಣ್ಣಾ ಬಾರೈ
ಬೆಣ್ಣೆಯನೀವೆವು ಎಂದು ಗೋಪಿಯರು
ಕಣ್ಣನ ಕರೆದಂತೆ ಮೊರೆಯುತೆ ನಿನಗೆ
ಕರಣಗಳೆಲ್ಲವು ಆಶಿಸುತಿಹವಯ್ಯ.

ಮನೆಕೆಲಸವ ಬಿಟ್ಟು ಬಾಗಿಲಿಗೆ ಬಂದು
ಮನೆ ಮನೆಯವರೆಲ್ಲ ಮೋಹನನ ನೋಡಿ
ತನಿವಣ್ಣನೀವೆವು ಇನಿವಾಲನೀವೆವು
ಎನುತೆ ಕಣ್ಣನ ಕರೆದಂತೆ ಕರೆದು
ಕರಣಗಳೆಲ್ಲವು ಆಶಿಸುತಿಹವಯ್ಯ.

ಚೆನ್ನಕೇಶವ ಜಗದೊಳೆಲ್ಲೆಡೆ
ನಿನ್ನ ಸೊಬಗನು ನೋಡಿ ನೋಡಿ
ಇನ್ನೊಮ್ಮೆ ನೋಡುವ ಚೆನ್ನಾಗಿ ನೋಡುವ
ಎನ್ನುವಾಸೆಯಿಂದೆ ತೀವಿ ಎನ್ನ ಮನ
ಕರಣಗಳೆಲ್ಲವು ಆಶಿಸುತಿಹವಯ್ಯ.

# ದೀನ

ನಾಟಕುರಂಜಿ

ಸ್ವೀಕರಿಪುದು ಎನ್ನ, ಕರು
ಣಾಕರ ಬಲಿದೀ ಆಸೆಯನೆಣಿಸಿ
ಸ್ವೀಕರಿಪುದು ಎನ್ನ.

ಆಸೆಯಿಂದೆ ನೀ ಸಾರಿಬರಲು, ಹರಿ,
ಹಾಸದಿ ಎದುರಲಿ ಬರುತ ಅತಿಶಯ ವಿ
ಲಾಸದಿ ಒಯ್ದು ಆಟದಿ ಹೃದಯ ವಿ
ಕಾಸವ ಗೆಯ್ವುದನರಿಯೆನಾದರೂ
ಸ್ವೀಕರಿಪುದು ಎನ್ನ.

ಉಜ್ಜುಗಿಸಲು ನೀ ರಕ್ಷಣ ಕಾರ್ಯದಿ
ಸಜ್ಜು ಆಗಿ ನಿನ್ನೊಡನೆಯೆ ನಿಂದು
ಕಜ್ಜದಿ ನೆರವಹ ಧೀರ ಸತೀತ್ವದ
ಪಜ್ಜಳಿವ ತೇಜ ಇರದೆ ಹೋದರೂ
ಸ್ವೀಕರಿಪುದು ಎನ್ನ.

ಆಯಾಸದಿಂದೆ ಹಿಂದಿರುಗೆ ನೀನು
ತಾಯ ತೆರದ ಬಹುಮುರುಕವ ತೋರಿ
ಕಾಯದ ಬಳಲನು ಜೀವದಳಲನು
ಮಾಯಿಪುಪಾಯವನರಿಯೆನಾದರೂ
ಸ್ವೀಕರಿಪುದು ಎನ್ನ.

ಏತಕೆ ಸ್ವೀಕರಿಪುದು ಎನೆ ಹರಿಯೇ
ಏತಕೆ ಎಂದೂ ಹೇಳಲರಿಯೆ;
ಸೋತುದು ಮನ ನಿನಗೆ, ನೀನು ತೊರೆಯೆ
ಚೇತನವಳಿವುದು ಎನ್ನ ದೊರೆಯೇ.

# ಮುಗ್ಧೆ

**ಶಂಕರಾಭರಣ**

ಪೊರೆವುದಿವಳ ಹರಿಯೇ: ಮುಗುದೆ
ಪೊರೆವುದಿವಳ ಹರಿಯೇ.

ದೂರದೆ ನಿಂದು ನೋಡುತೆ ನಿನ್ನ ಅ
ಪಾರವಾದ ಸೊಬಗಿಗೆ ಮನಸೋತು
ಭೀರು ಸಾರಿಬರಲಾರದಿರ್ದು ನಿನ್ನ
ಓರೆನೋಟವನು ನೋಡಿ ಬಂದಿಹಳು.

ಬಳುಕುತೆ ಬಂದು ಬಳಿಯೊಳು ನಿಂದು
ಸೆಳೆಮಿಂಚಿನವೊಲು ಚಂಚಲಳಾಗಿ
ಉಳಿದು ಭಯವ ಮೆಲುಮೆಲನೆ ಬಿರಿಯುವ ವ
ಕುಳದ ಮುಗುಳಿನೊಲು ಮನವ ತೋರಿಹಳು.

ಅರಳಲೆಳಸುವ ಮುಗುಳುಗಳ ನಾಣನು
ಮರೆಯಿಸಿ ಸರಸದಿ ಅರಳಿಸುವರಸಾ
ಸರಳನಾಗು; ಅರಿಯದ ಇವಳನು ಆ
ವರಿಸು ಕೃಪಾಪರಿಪೂರಿತ ನಯನದಿ.

# ಬೇರೆ

ಭೈರವಿ

ದೂರ ಸರಿಯುದಿರೋ
ಆರಿವಳಿನುತೆ ಹಾಸವ ಮರೆಯಿಸಿ
ದೂರ ಸರಿಯುದಿರೋ.

ಲತೆವನೆಯಲಿ ವಿಹರಿಸುವ ಆವಸರದ
ವಿತರಣೆಯಲಿ ನೀ ಸಖಿಯನು ಕುರಿತು
ಜತನದಿ ಉಸುರಿದೆ, ಬರುವುದು ಮರೆಯದೆ
ಜತನದಿ ಇಲ್ಲಿಗೆ ಇಂದು, ಎಂದು.

ಮೆಲುನುಡಿಯ ಕೇಳಿ ಹರಿಯೇ, ಒಂದು
ಸಲ, ಒಂದು ನಿಮಿಷ, ಬಳಿಯೊಳು ಕುಳಿತು
ಸಲಿಗೆಯಿಂದ ನಿನ್ನನು ನೋಡಲೆಂದು
ಒಲುಮೆ ಮನದೊಳು ಮೊಳೆದುದು ಬಲಿದುದು.

ಸಖಿ ಬರುವ ಮುನ್ನ ಬಂದು ಕಾದಿಹೆನು :
ಅಖಿಳ ಗೋಕುಲವ ನಲಿಯಿಪನೇ ನಗು
ಮುಖದಿಂದ ಒಮ್ಮೆ ನೋಡಯ್ಯ ಎನ್ನ,
ಸಖಿಯನೆಂತಂತೆ ನೋಡೆನ್ನನೊಮ್ಮೆ.

# ಇಷ್ಟು

ಶಂಕರಾಭರಣ

ನೀನೇ ಬೇಕೆನಗೆ:
ನೀನು ಬೇಕು ನಿನ್ನ ಪ್ರೇಮ ಸಾಲದು.

ಎಳೆಯುಳಾಗಿರಲು ಆಟಕೆ ಗೊಂಬೆ
ಥಳಥಳಿಸುವ ನಗನಟ್ಟು ಬೇಕಾದುದು;
ಕಳೆದುವು ಎಳೆಯ ದಿನ: ಈಗ ನೀನು
ಇಳೆಯನೆಲ್ಲವನು ಕೊಡಲೂ ಸಾಲದು.

ಒಡವೆ ಉಡುಪಿನಿಂದ ಸಂತಸ ಹರೆಯದಿ:
ತೊಡವು ತಂಗು ಇಂದು ಬೇಡ ಎನಗೆ.
ಕಡುವೇಗದಿ ದೂರದಿಂದೆ ಬಂದು ಎನ್ನ
ಸಡಗರದಿಂದೆ ಅಪ್ಪಲು ಅದು ಸಾಲದು.

ಸಾಲದು ಗೊಂಬೆ; ಸಾಲದು ನಗನಟ್ಟು;
ಸಾಲದು ಒಡವೆ; ಸಾಲದು ತೊಡವು;
ಸಾಲದು ಪ್ರೇಮ; ಸಾಕು ನೀನೆ: ಗೋ
ಪಾಲ ಬಂದನಿಶ ಬಳಿಯೊಳು ಕುಳ್ಳಿರು.

# ಕೆಲಸ

ನೀಲಾಂಬರಿ

ಬಿಡುವಿಲ್ಲವೆಂದೊರೆದನೇ, ಸಖೀ ;
ಒಡೆಯನೊಲಿದು ಬಂದು ಆಟಕೆ ಕರೆಯಲು
ಬಿಡುವಿಲ್ಲವೆಂದೊರೆದೆನೇ.

ಸಡಗರದಿ ಬಂದು ಕೆಲದೊಳು ನಿಂದು ಮನವ ಸೆರೆ
ಹಿಡಿವ ಹಾಸವ ಬೀರಿ ಬಾರೆಂದನು :
ಒಡಲು ಮನಗಳನವನ ಪದತಲದೊಳರ್ಪಿಸದೆ
ಬಿಡುವಿಲ್ಲವೆಂದೊರೆದೆನೇ ಸಖೀ.

ಅನುದಿನವು ಇಹುದು ಈ ಕೆಲಸ ಮತ್ತೆ ಕೆಲಸ:
ಜನವು ಜಗಳವು ಇಹುದು ಅನುದಿನದೊಳು ;
ಅನಿಶವೂ ಇಹವು ಈ ಜಗದ ವ್ಯಾಪಾರಗಳು :
ಅನಿಶ ಒಲಿದಿಹನೇ ಹರಿ ಸಖೀ ?

ಒಲಿದು ಒಡೆಯ ಒಮ್ಮೆ ಪಿಡಿಯೆ ದೇಹವಿದಮರ;
ನಲಿಯಲವನೊಂದುಕ್ಷಣ ಹೃದಯತಲದಿ
ಮಳೆಯಂತೆ ಪಿರಿದೆನಿಪ ನೂರು ಕೆಲಸದಿ ಬರದ
ಫಲವನರಿಯದೆ ಜೀವನು, ಸಖೀ ?

# ಮಾತು

**ಕಲ್ಯಾಣಿ**

ದೇವ, ಮಾತೆಮಗೆ ಬೇಡ:
ಜೀವವಿಹ ಮಾತುಂಟು, ಜೀವವಿಲ್ಲದದುಂಟು,
ದೇವ, ಮಾತೆಮಗೆ ಬೇಡ.

ಮಾತು ನಿಜವಿರಬಹುದು ಅಲ್ಲದೆಯು ಇರಬಹುದು:
ಮಾತು ಬೇಡ ಎಮಗೆ ಭಾವವಿರಲಿ.
ಜೀತ ಮಾಡುವುದು ಭಾವಕೆ ಮಾತು ಹರಿಯೆ;
ಜೀತಕೊಡೆಯನ ಶ್ರದ್ಧೆ ಬಹುದೆ ಎಂತೂ?

ಅತಿಯಾಗುವುದು ಒಮ್ಮೆ; ಸಾಲದಿಹುದೊಮ್ಮೆ; ಅಭಿ
ಮತವಿದುವೆ ಎಂದು ಹೇಳಲು ಕಾಣದು.
ಪತನ ಆತುಮಕೆ ದೇಹವನು ಕೊಳ್ವುದು ಹರಿಯೆ:
ಪತನ ಭಾವಕೆ ಮಾತನೊಳಹುಗುವುದು.

ಭಾವ ಒಂದೇ ಆಗಿ ಜೀವ ನಿನ್ನೊಳು ನಿಲಲಿ,
ಪಾವಕನೊಳುರಿವ ಇಂಧನದ ತೆರದಿ.
ದೇವ ಎಮ್ಮ ಮನ ಒಂದು ಒಂದನು ಅರಿಯೆ
ಆವ ದೂತನು ಬೇಡ ಸಂದೇಶಕೆ.

# ಗಾನ

**ಕೇತಾರಗೌಳ**

ನಿನ್ನ ಗಾನದೊಳು ಎಲ್ಲಾ ದನಿಗಳೂ ಸೇರಿ
ಚೆನ್ನವಾಗುವುವು ಗಾನವಿಶಾರದಾ.

ಉದಯವಾಗುತಲಿರಲು ಕೇಳುತಿದೆ ದನಿಯೊಂದು
ಮೆದುವಾಗಿ ಮನವನಿದು ಕೊಳಲರಿಯುದು ;
ಹೃದಯವನು ಭೇದಿಸುವ ಕರ್ಕಶ ಧ್ವನಿಯಲ್ಲ ;
ಇದು ಆವ ದನಿಯೊ ತಿಳಿಯುದು ಎನಗಿದು.

ವೀಣೆಯಿಂದುಗುವ ಸವಿನಿನದಕೆಂತಂತಿದಕೆ
ಜಾಣರಾಡಿಸರು ಸಂತಸದಿ ತಲೆಯ ;
ಮೇಣು ಕರ್ಕಶವಾದ ಕಷ್ಟದ ಧ್ವನಿ ಇದು
ಮಾಣದೇತಕೆ ಎಂದು ಪೇಳರಾರೂ.

ಜಾಣಕಣಿಯೇ ನಿನ್ನ ಪ್ರತ್ಯೂಷ ಗಾನದಲಿ
ಕೇಣವಿಲ್ಲ ವೀಣೆ ಅಲ್ಲ ಆಹುದೆಂದು.
ಕಾಣದೇನೀದನಿಯು ? ಕೇಳಿಹೆನು ದಿನದಿನ :
ಗಾಣದ ಧ್ವನಿಯ ಜೋಡಿಸಿಹೆ ಶ್ರುತಿಗೆ.

# ಕೋಗಿಲೆ

ಆಠಾಣ

ದನಿಯಿದನು ಕೇಳು ಕೆಳದೀ: ವಿರಹ
ಘನಿಸಿ ಮನಗಳ ಮುರಿಯೆ ಕುಲಿಶಮಾದವೊಲಿರುವ
ದನಿಯಿದನು ಕೇಳು ಕೆಳದೀ.

ಚಲನವನಿತನು ಉಳಿದು ಹರಿ ಬರುವನೆನುತೆ ವನ
ದೆಲರು ನಿಲುವಿನಲಿದಿರುನೋಡುತಿರಲು,
ಒಲಿದಿಹನು ಬರುತಿಹನು ಬಾರದಿರನೆನುತೆ ಮನ
ಒಲಿದ ಆಸೆಯ ಭರದಿ ಬೀಗುತಿರಲು,
ದನಿಯಿದನು ಕೇಳು ಕೆಳದೀ.

ನಿಲುವಿನೆಲರನು ಮುಳಿದ ಅಲಗ ಕರವಾಳದೊಲು
ಛಲದಿ ಸೀಳುತೆ ಮನದ ಬಲಿದಾಸೆಯ
ಸುಲಿದು ಕಳೆಯುತೆ ಉಸಿರ ಚೆದರಿಸುತೆ ಬರುತಿರುವ
ಕಲಕಂಠ ನಿನದವಿದ ಕೇಳು ಕೆಳದೀ.

ಭೇದಿಸುತೆ ಬರುವುದಿದು ಬೇರೊಂದು ದನಿಯೊ? ಮೇಣ್
ಬಾಧೆಯಿಂ ಬೀಗಿದೆನ್ನಯ ಹೃದಯದ
ಖೇದ ಜೀವದ ಮೇರೆ ಮೀರಿ ಕೇಳ್ವುದೊ ವನದಿ?
ಮಾಧವನು ಬರಲಿದರ ಪರಿ ತಿಳಿವುದು.

# ಉಲ್ಲಾಸ

**ಕಾಂಭೋಜಿ**

ರಂಗನಾಥ ಏನು ಇಂತುಬ್ಬುತಿದೆ ಹೃದಯ
ರಂಗದಲಿ ಸಂತಸ ಈ ಉದಯದಿ?

ಧನಕನಕ ಸೌಭಾಗ್ಯ ನೂರುಮಡಿ ಬರಲಿಲ್ಲ;
ಮನೆ ಮಂದಿ ಇಹುದು ಅದು ಎಂದಿನಂತೆ;
ಅನುಕೂಲೆಯಾದ ರಮಣಿ ಬಂದು ನೀನೆನ್ನ
ಮನದಿನಿಯನೆಂದೆನ್ನನಪ್ಪಲಿಲ್ಲ.

ಆನೆಯನು ಏರಿಲ್ಲ; ಎನಗಿನ್ನು ಜಗದೊಳು ಸ
ಮಾನರಿಲ್ಲೆಂದೆನ್ನ ಜನ ಹೊಗಳಲಿಲ್ಲ;
ಮಾನವರ ಅರಸಾಗಲಿಲ್ಲ; ಅಮೃತದ ರಸವ
ಪಾನಮಾಡುತೆ ಅಮರನಾಗಲಿಲ್ಲ.

ಎಲರು ಮೆಲುಮೆಲನೆ ಎಲೆಗಳ ನಡುವೆ ಮರ್ಮರಿಸಿ
ಅಲುಗಿಸುತೆ ಲತೆಗಳನು ಮಲೆಯಿಂದೆ ಬರಲು,
ಮಲೆಯ ಹೊದೆದಿರೆ ಪೀತವಸನದೊಲು ಹೊಂಬೆಳಗು,
ನಲಿವುದೇತಕೆ ಇಂತು ಮರುಳಾಗಿ ಮನವು?

# ವೈಶಾಖದಲ್ಲಿ

ಶಃಹನ

ಏನು ಮೋಹ ಏನು ಮಾಯ ಏನು ಸೊಬಗು ಸೌಂದರ್ಯ ಇ
ದೇನು ಹಾಸ ವಿಲಾಸವಿದೇನಿದು ಹರಿಯೇ ?

ವೈಶಾಖದ ಈ ಉದಯ ನಿಶಿಯ ಮಳೆಯನುಳಿದು ಸುಪ್ರ
ಕಾಶವಾದ ಹಾಸದಿಂದೆ ರಂಜಿಸುತಿದೆ ಜಗವನು ;
ಆಶಾಕುವರಿಯರು ಶುಭ್ರ ತೇಜರಾಗಿ ಮೆರೆಯಲು ಆ
ಕಾಶ ಪಿತನು ಉತ್ಸಾಹದಿ ಉಲ್ಲಾಸದಿ ತೀವಿ ಇಹನು.

ಸವಿ ಸ್ವರಗಳ ಸಾರಸಂಗ್ರಹವಿದೆಂಬಂತಿಹ ವಿಹಗ
ಕವನ ಚತುರನೀ ಮರದಲಿ ಎಲೆಗಳ ಮರೆಯಲಿ ಕುಳಿತು
ನವವಾಗಲು ಒಮ್ಮೊಮ್ಮೆಗೆ ಸವಿಯುಸರಿಯ ಸುರಿಯುುತಿಹುದು ;
ಸವಿಯುುತಿಹುದು ಆಸೆಯಿಂದೆ ಸರಿಯ ರಸವ ಮೆಲ್ಲೆಲರು.

ಸಾರವಳಿಯೆ ಸ್ಫಟಿಕದಂತೆ ನಿರ್ಮಲವಾದಾಕಾಶದೆ
ನೀರಿದೆಂಬ ಉದ್ಭ್ರಮೆಯಿಂ ಸರಸಿಯನುಳಿದೀ
ಸಾರಸ ಸಂಕುಲವಿದು ಉಲ್ಲಾಸದಿಂದೆ ವಿಹರಿಸುತಿದೆ :
ಸಾರವಿದೆಲ್ಲಾ ಉದಯದ ಸೊಬಗ ಸುಖದ ಸೌಂದರ್ಯದ.

# ದನಕಾಯುವ ಹುಡುಗರು

ಜಃಜೂಟಿ

ಕಳುಹಿಸು ಗೋಪಮ್ಮ; ಕಳುಹಿಸು ಕೃಷ್ಣನ;
ದನಕಾಯುವುದನು ಕಲಿಸುವೆವು.

ಯಮುನೆಯ ತೀರದ ಹಸುರುಗಾವಲಿನ
ಸಮನಾದ ಸ್ಥಳವ ತೋರುವೆವು;
ಸಮನಾಗಿ ಮೆರೆವ ತಳಿರಿನ ಹೂವಿನ
ರಮಣೀಯ ವನವ ತೋರುವೆವು.

ಹೊಳೆಯ ತೀರದಲಿ ಬಿಳುಪಾಗಿ ಹೊಳೆವ
ಪಳುಕುವಾಸರೆಯ ತೋರುವೆವು;
ಪಳುಕುಗೋಡುಗಳ ನಡುವೆ ಹುಲ್ಲಿಗಳು
ಸುಳಿವ ದಾರಿಗಳ ತೋರುವೆವು.

ದೂರ ಹೋದ ದನ ಬರುವಂತೆ ಕರುವಂತೆ
ಸಾರಿ ಕೂಗುವುದ ಕಲಿಸುವೆವು;
ಸಾರಿ ಗೋವು ಬರೆ ಕರುವಂತೆ ಮೊಲೆಯ
ಹೀರಿ ಊಡುವುದ ಕಲಿಸುವೆವು.

ಮರಗಳ ಮರೆಯಲಿ ಹುಡುಗಿಯರ ಕಂಡರೆ
ಸೆರಗ ಹಿಡಿಯುವುದ ಕಲಿಸುವೆವು;
ಸೆರಗ ಬಿಡಿಸಿಕೊಂಬ ಸಿಡುಕಿಗೆ ಹೆದರದೆ
ಮರಿಯಾದೆ ಮಾಳ್ಪುದ ಕಲಿಸುವೆವು.

ತೊಳಲುವ ಬಿಸಿಲಲಿ ದನಕರು ಎಲ್ಲವ
ನೆಳಲಿಗೆ ತರುವುದ ಕಲಿಸುವೆವು;
ನೆಳಲಲಿ ನಡುವೆ ಶ್ರೀಕೃಷ್ಣನ ಕೂರಿಸಿ
ಕೊಳಲ ಗಾನವನು ಕೇಳುವೆವು.

# ಒಂದು ಪಕ್ಷಿ

**ಚಿಲಾಪು**

ನೀನು ಯಾರು? ಏನು ಗಾನವಿದು?
ಏನು ನಿನ್ನ ಹೆಸರು ಎನ್ನ ಪಕ್ಷೀ?

ಸಣ್ಣವನಲೆ ನೀ; ಬಹು ಸಣ್ಣವನು;
ಕಣ್ಣಿಗೆ ಕಾಣದೆ ತಳಿರ ಮರೆಯಿಂ
ಬಣ್ಣಿಸಲಾಗದ ನವ್ಯಗಾನವನು
ಸಣ್ಣ ಒಂದು ಸ್ವರದಿಂದಲೆ ಪೇಳುವೆ.

ಅಂದಿನ ದಿನ ಗೋವಿಂದನು ಹರುಷದಿ
ಬೃಂದಾವನದ ವಿಹಾರದಿ ನುಡಿಸಿ
ಸುಂದರಿಯರ ಗೋವೃಂದವ ನಲಿಸಿದ
ಚಂದದ ಕೊಳಲಿನ ಒಂದು ಕಣ್ಣೊ?
ನೀನು ಯಾರು?

ವಾದನ ಚತುರನು ಬರುವ ಜಗಕೆ ಪ್ರತಿ
ಪಾದನಗೆಯ್ಯಲು ತನ್ನ ಗಾನವ
ಆ ದಿನ ಕಳೆಯಿಂ ತುಂಬಿ ನಿನ್ನನು
ಈ ದಿನ ಈ ಸವಿ ಸರಿಯನು ಸುರಿವನೊ?

# ರಾಣಿಯ ಮನೆ

ನಾದನಾಮಕ್ರಿಯೆ

ರಾಣಿಯ ಮನೆ ಇದು ಎಂದರು; ಬಂದೆನು
ರಾಣಿಯ ನೋಡುವ ಎಂದು;
ರಾಣಿಯ ನೋಡುವ ಎಂದು ಬಂದರೆ
ರಾಣಿ ಕಾಣಿಸಳು ಇಂದು.

ಚೆಂದದ ಕಟ್ಟಡ; ಚೆಂದದ ಗೋಪುರ;
ಚೆಂದದ ಬಾಗಿಲು;
ಅಂದದ ಸಜ್ಜೆ; ಅಂದದ ಕೋಣೆ;
ಅಂದವು ಮನೆಯೆಲ್ಲ.

ಠೀಕು ಠೀಕಿನ ಉಡುಪನು ಹಾಕಿ
ನಾಕು ಬಾಗಿಲಲ್ಲಿ
ಜೋಕೆ ಹೇಳುತ ಬರಹೋಗುವರಿಗೆ
ಚಾಕರರಿವರಿಹರು.

ಉಂಟು ಇಲ್ಲಿ ದರಬಾರಿಗೆ ಮಿಸುನಿಯ
ಮಂಟಪ: ಅದರಲ್ಲಿ
ಜಂಟಿಸಿ ವೀಣೆ ಪಿಟೀಲನು ನುಡಿಸುತ
ಎಂಟು ಜನ ಹುಡುಗಿಯರು.

ಮಂಚದ ಮನೆಯಲಿ ಕರಿಯಮರದ ಗಡ
ಗಂಚಿಯು ತುಂಬ ಒಡವೆ;
ಮಿಂಚಿನ ದಾರದ ಮೆರುಗುಸೀರೆ; ಅದ
ರಂಚಿನ ತುಂಬ ಮುತ್ತು.

ಹೊನ್ನ ಪೀಠದಲಿ ಏರಿಸಿ ನಿಲಿಸಿದ
ರನ್ನದ ಕನ್ನಡಿಯು ;
ಕನ್ನಡಿ ಮುಂದೆ ಹಣಿಗೆ ಕಾಡಿಗೆ
ಚೆನ್ನ ಗಂಧದೆಣ್ಣೆ.

ರಾಣಿಯ ಮನೆಯಂತಿದೆ ಇದು ನೋಡಲ್ ;
ರಾಣಿ ಕಾಣಿಸಳು.
ರಾಣಿ ಎಲ್ಲಿ ಎನೆ ಉಸಿರೆತ್ತದೆ ಬಿ
ನ್ನಾಣಿಯರಿವರಿಹರು.

ಕನ್ನಡಿಯಲಿ ಒಮ್ಮೊಮ್ಮೆ ತೋರುತೆ,
ಇನ್ನೊಮ್ಮೆ ನೋಡುವ ಎಂಬ
ಮುನ್ನವೆ ಮರೆಯಾಗುತೆ, ಕಾಣ್ಬುದೊರ್ವ
ಚೆನ್ನೆಯ ನಗುಮೊಗವು.

ಸುಮ್ಮನೆ ಎನ್ನೊಡನಾಟವೇತಕೆ,
ಅಮ್ಮಾ ರಾಣಿಯಮ್ಮಾ?
ಒಮ್ಮೆ ಬಂದು ಬಳಿಯಲಿ ನಿಲು ತಾಯಿ ;
ದಮ್ಮಯ್ಯ ಬೇಡುವೆ ತಾಯಿ.

# ಮಾಯೆ

**ದೇವಗಾಂಧಾರಿ**

ದಯೆಯ ತೋರ‍್ಯೆಯ ಎನಗೆ: ಹರಿಯೇ
ದಯೆಯ ತೋರ‍್ಯೆಯ ಎನಗೆ.

ಮಕ್ಕಳಾಟದಲಿ ಹಿಡಿಬಾ ಎಂದು ತಮ್ಮನನು
ಅಕ್ಕ ಕರೆವಳು: ಹುಡುಗ ಹಿಡಿಯಹೋಗೆ
ಸಿಕ್ಕಿದಂತೆಯೆ ತೋರಿ ಮುಂದೆ ಒಂದೆರಡಡಿಯ
ಇಕ್ಕಿ ಆಡಿಸುತ ಮರೆಯಹಳು ಕೊನೆಗೆ.
ಸಿಕ್ಕಲಿಲ್ಲೆಂಬ ದುಃಖಕೆ ಹುಡುಗ ನಿಂತಲ್ಲಿ
ಬಿಕ್ಕಿ ಅಳುತಿರೆ ತಾಯಿ ಬಂದು ಎತ್ತಿ,
ಅಕ್ಕನಿಗೆ ತಿಳಿಯದಲೆ ನಾನಿಹೆನು ಬಾ, ಎಂದು
ಅಕ್ಕರೆಯ ನುಡಿದು ಸಂತಯಿಸುವಳು. ಅಂತೆ
ದಯೆಯ ತೋರ‍್ಯೆಯ ಎನಗೆ.

ಚೆನ್ನಕೇಶವ, ಜಗವನೆಲ್ಲವನು ತುಂಬಿರುವ
ನಿನ್ನ ಮಾಯೆಯ ಪರಿಯನರಿಯಲೆಳಸಿ
ಎನ್ನ ಮನ ತಾರಾಡಿ ತಿಳಿಯಲಾರದೆ ಇಹುದು;
ಇನ್ನಿದನು ಅರಸಲಾರೆನು ಎಂಬದು;
ಮಾಯೆ ಬೇಡ ನಾನು ಇಹೆನೆಂದು ಬಾರಯ್ಯ;
ಕಾಯ ಮನವನು ಕರುಣೆಯಿಂದ ಸಂತಯಿಸಿ, ಅ
ನ್ಯಾಯ ನಿನ್ನನು ಅಳಲಿಸಿದುದೆಂದು, ಚೆನ್ನಿಗ
ರಾಯ ನೀನೆನ್ನನಕ್ಕರೆಯಿಂದ ಪೊರೆಯಯ್ಯ.

# ದೂತ

ಹಂಸಧ್ವನಿ

ದೂತನೊರ್ವನು ಬಂದನು: ಒಡೆಯನ
ಮಾತಹೇಳುವ ಭರದಿ ಬೇಗದಿಂದ
ದೂತನೊರ್ವನು ಬಂದನು.

ದೂತನಿವ ಬಂದಿಹನು; ಸಡಗರದಿ ನಿಂದು ಮೆಲು
ವಾತ ಹೇಳುತಲಿಹನು; ಕೇಳದದನು
ಆತುರದಿ ಅವನ ಸುಮ್ಮನೆ ನೋಡುತಿಹುದು ಜನ:
ಈತನಿಂತಿರಲು ದೊರೆ ಎಂತಿರುವನೋ!

ಸೆರೆಹಿಡಿದುದೀ ರೂಪು ನೋಡುವರ ನೋಟವನು;
ಮರುಳುಮಾಡುತೆ ನೆರೆದ ಜನದ ಮನವ
ಕರಣವನು ಸೋಲಿಸಿತು: ದೂತನಿಂತಿರಲಿವನ
ದೊರೆಯ ರೂಪದು ಇನ್ನು ಎಂತಿರುವುದೋ!

ಬರದೆ ದೊರೆ ಬಹುಪೊಳ್ತು ಮರೆಯೊಳೇ ಇರಲಾಗಿ
ಮರೆಯುವುದು ಜನ ದೊರೆ ಇಹನೆಂಬುದ:
ಸರಿಯಾರು ದೂತನಿಗೆ! ಈತನೇ ದೊರೆ: ಎಂದು
ವರಿಸುವುದು ದೊರೆಯ ನೆನೆಯದೆ ಇವನನೇ.

# ವ್ಯಾಪನ

ಸಾವೇರಿ

ನೀನು ಎಲ್ಲದರೊಳಿಹೆ ಎಂಬುದರ ಅರ್ಥವನು
ನಾನು ಇಂದರಿದೆ ಕೃಷ್ಣಾ.

ಚೆನ್ನಾದ ಹೂವು ಚೆನ್ನಾದ ಫಲವನು ನೋಡಿ
ಚೆನ್ನಾದ ಯಾವುದನೆ ನೋಡಿ ಜನವು
ಮುನ್ನ ನೀ ಸವಿಯ ಬೆಣ್ಣೆಯ ಕದ್ದೆ ಎಂತಂತೆ
ತನ್ನದೆಂದೆನಿಸೆ ಯತ್ನವ ಮಾಳ್ಪುದು.

ಹಾದಿಯನು ಹಿಡಿದು ಹೋಗುತಲಿರುವ ಹುಡುಗಿಯರ
ಬೀದಿಯವರಾಬಾಲವೃದ್ಧರೆಲ್ಲ
ಹೋದಹಾಗೆಯೆ ತಿರುಗಿ ಇನ್ನೊಮ್ಮೆ ನೋಡುವರು:
ಯಾದವಾ ಇದು ನೀನು ಎಳೆದ ದಾರಿ.

ಯಾವ ಕಾರಣದಿ ಈ ಮರುಳುತನವನು ಜಗದಿ
ಜೀವರಾಶಿಯೊಳು ನೀನಿರಿಸಿರುವೆಯೋ,
ಯಾವ ರೀತಿಯೊಳು ಇದು ಸರಿಯುಹುದೊ ನಿನ್ನೊಳು,
ಪಾವನಾ ನೀನಿದನು ಅರಿದೆ ಇರುವೆ.

# ಅಭೀಷ್ಟ

**ಕಲ್ಯಾಣಿ**

ಏನನೆಳಸುವೆಯೊ ಜೀವ, ನೀನು
ಏನನೆಳಸುತಲಿರುವೆಯೋ ?

ಹೂವ ಹಿಡಿಯುತೆ ಅದರ ಬಣ್ಣವನು ಗಂಧವನು
ಕಾವು ದಳಗಳ ಕಟ್ಟಡವನು ನೋಡಿ
ಭಾವದಲಿ ನೆನೆ ನೆನೆದು ಎಳಸುತ್ತಲಿಹೆ ನೀನು,
ಆವುದೋ ವಿಧದಲದನನುಭವಿಸಲು.

ಹಿಡಿಯೆ ತಣಿಯದು ಮನವು; ಕಣ್ಣಿಗೊತ್ತಲು; ಮತ್ತೆ
ಮುಡಿಯೆ ತಣಿಯದು; ಮುಡಿದವರ ನೋಡಲು;
ಕಡಿದಗಿದು ತಿನ್ನಲು; ಕೊಡಕೆಯೊಳು ಇರಿಸಲು;
ಪಡುವ ಹಾಸಿನಲಿ ಹರಡಲು ತಣಿಯದು.

ಹೂವಾಗಲೆಳಸುವೆಯ ? ಕಾವಾಗಲೆಳಸುವೆಯ ?
ಸೋವಲದನುಳಿಯದಲರುಣಿಯಾಗಲೋ ?
ಭಾವದಲಿ ಅದನನಿಶ ಹಿಡಿದು ನಿಲಿಸಲು ಎಂದೊ ?
ಜೀವ ನೀನೆಂತದನು ಎಳಸುತಿರುವೆ ?

ಕನಸಿನಲಿ ಕಂಡ ಸುಖ ನಿಲುಕದಿರೆ ಅಲೆಯುತ್ತೆ,
ಕನವರಿಸಿ ಅಸುಖಿಯಾಗುವೆಯಲ್ತೆ ನೀ ?
ಮನಕೆ ಸೌಖ್ಯದ ತೆರವನರಿಯಿಸಲು ಹೂ ಬರಲು
ಕೊನೆದದಕೆ ಮನ ಮರೆದು ಮರುಗುತಿರುವೆ.

# ಅಂಕುರ

ಜಂಜೂಟಿ

ಪ್ರೇಮವಂಕುರಿಸಿದಂತಿಹುದೆನ್ನ ಮನದೊಳು :
ಪ್ರೇಮವಲ್ಲದೆ ಇದಿನ್ನೇನಪ್ಪುದು ?

ಮುನ್ನ, ಒಡೆಯಾ, ನೀನು ಬರುವೆ ಕರೆದೊಯ್ಯಲೆನೆ
ಎನ್ನ ಮನ ಮನೆ ಮಠವ ಹೆತ್ತವರನು
ಅಣ್ಣತಮ್ಮಂದಿರನು ಬಿಡಲು ಭಯಪಟ್ಟುದು :
ಚೆನ್ನ ನೀನಿಂದು ಬರೆ ಭಯಪಡದದು.

ಬರಲಿಲ್ಲ ಹರಿ ನೀನು ಕರೆದೊಯ್ಯಲೆನ್ನನು ;
ಮರೆದೆಯೋ ? ಮನವು ನಿನ್ನನು ಆಶಿಸಿ
ತಿರುಗಲೆಂದೆನುತೆ ನಿಂದೆಯೊ ? ಅರಿಯೆನಲೆ. ಇಂದು
ಬರೆಯೇಕೆ ಎಂದು ಮನನುಲಿಯುತಿಹುದು.

ಸಾರಿಬಹ ಗಾಳಿಯೊಳು ಸುದ್ದಿ ಬಹುದೋ ಎಂದು
ಕೋರಿ ಕಾಯುತಲಿರುವವೊಲು ತೋರ್ಪುದು ;
ದೂರದಲಿ ನೀ ಬರುತಲಿಹುದ ನೋಡುವ ಎಂದು
ಬಾರಿ ಬಾರಿಗೆ ದಾರಿಯನು ನೋಳ್ಪುದು.

## ಒತ್ತಾಯ

ಶ್ರೀರಂಜಿನಿ

ದೂಡುತಿರುವೆ ಎನ್ನ; ಕೈ
ನೀಡಿ ಮತ್ತೆ ಮತ್ತೆ ಮುಂದಕೆ ಎಳೆಯುತೆ
ದೂಡುತಿರುವೆ ಎನ್ನ.

ಇಂದಿನ ಕಾರ್ಯ ಮುಗಿಯಿತು ಎಂದು
ಒಂದು ತಾಸು ನಾ ಸುಮ್ಮನೆ ಇರಲು,
ನಿಂದು ಆಯಸವ ಹರಿಸಿಕೊಂಬುದು
ಮುಂದಿನ ಕಾರ್ಯವ ಮಾಡಲಿಕೆಂದು
ದೂಡುತಿರುವೆ ಎನ್ನ.

ಈಸಿ ಈಸಿ ತನ್ನ ನಾಯಿಮರಿ ಆ
ಯಾಸದಿ ತಡಿಯನು ಸೇರಲು ಮತ್ತೆ
ಘಾಸಿ ಆರಿತು ಎನ್ನುವ ಮುನ್ನವೆ
ಈಸಬಿಡುವ ಬಾಲಕನೊಲು, ಒಡೆಯ,
ದೂಡುತಿರುವೆ ಎನ್ನ.

ಕಾಯುವ ಮನವ ಬಳಲಿಸಿ ಇಂತು
ಜೀಯ ಲೀಲೆಗೆನ್ನ ಕರೆವುದ ನೋಡೆ
ನಾಯಿ ಬಾಲಕನಿಗೆಂತು ಅಂತೆ ನಾ
ಪ್ರೀಯನು ನಿನಗೆ ಎಂದು ತೋರುವುದು.

# ಸದ್ಯ

ತೋಡಿ

ಮುಂದೆ ಬರುವುದು ಬರಲಿ ನಿನ್ನ ಕೃಪೆ ಇರುವಂತೆ:
ಇಂದೆಸಗಲಿರುವ ಕಜ್ಜಕೆ ಬಲವ ನೀಡು.

ಮುಂದೆ ಬರಬಹುದು ಸುಖಸಾಮಗ್ರಿ ಸೌಭಾಗ್ಯ;
ಮುಂದೆ ಬರಬಹುದು ಶಾಂತಿಯು ಸಂಪದ;
ಮುಂದೆ ನಿನ್ನನನಂತ ಸೇರುವುದು ಈ ಜೀವ;
ಸಂದೇಹವಿಲ್ಲ ಇದನರಿದೆ ನಾನು.
    ಸಂದೇಹವಿಲ್ಲ; ಈ ಕಜ್ಜವನು ಎಸಗಿದೊಡೆ.
    ಮಂದಬಲನಾಗಿ ಎಸಗದೆ ನಿಲ್ವರೆ,
    ತಂದೆ, ನಿನ್ನನು ಸೇರಿ ಸುಖಿಪೆನೆಂಬಾಸೆಯದು
    ಎಂದಿನಂತೆಯೆ ದೂರದಲಿ ನಿಲ್ವುದು.

ಆಗಸದಿನಿಳಿದ ಈ ನೀರ್ ಈ ಕಲ್ಲುಗಳ
ನೀಗೆ ಮಳಲಿನ ಹಾಸಿನಲಿ ಹರಿಯುತೆ
ಸಾಗಿ ಹೊಳೆಯನು ಸೇರಿ ನಗರ ವನಗಳನುಳಿದು
ಸಾಗರವ ಸೇರುವುದು ಕೊನೆಗೆ ದಿಟವು.
    ಸಾಗರವ ಸೇರುವುದು: ತಡೆವ ಈ ಕಲ್ಲುಗಳ
    ವೇಗದಿಂದುರುಳಿಸುತೆ ದೂಡಿ ಹರಿದು
    ಸಾಗುವರೆ; ದಾರಿಯನು ಕಂಡು ಮುಂದಕೆ ಹರಿಯೆ;
    ಆಗದೊಡೆ ನಿಲ್ಗುಮದು ನಿಂತೆಡೆಯೊಳೇ.

# ಮೊಗ್ಗು

ಕೇತಾರಗೌಳ

ಅರಳಿ ಆಗುವುದೇನು ಎಂದೆಂಬರೇ ಮುಗುಳೆ?
ಅರಳಲಾರೆನು ಎಂಬರೇ?

ಮರುಗದೆಲೆ ಜವನದೆಲೆ ಹಸುರತೆನೆಯೊಲು ನಾನು
ಪರಿಮಳಿಸಲರಿಯೆ, ಇರವಂತಿಯವೊಲು
ಭರದ ಸೌಗಂಧವನು ಸುರಿಯಲರಿಯೆ, ಇನ್ನು
ಅರಳಲೇತಕೆ ಎಂಬರೇ ಮರುಳೆ?

ಹರಿಯ ಮನವನು ತಣಿಸಿ ಒಲಿಸುವರೆ ಎನ್ನೊಳು
ಇರುವ ಗುಣವೇನೆಂದು ಮರುಗುತಿಹರೇ?
ಅರಿಯ ಬಲ್ಲೆಯ ಹರಿಯ ಒಲುಮೆ ಬಹ ರೀತಿಯನು?
ಅರಳುವುದ ಬಲ್ಲೆ ಮುಗುಳೇ, ಅರಳು.

ಅಳಿಯಲೆಂದವನು ಗಂಧವ ನಿನಗೆ ನೀಡಿದನೆ?
ಹಳಿವ ಅಭಿಮಾನವೇತಕೆ ನಿನಗೆ ಮರುಳೆ?
ಉಳಿಸಿಕೊಳ್ಳದೆ ಇನಿಸ ಎಲ್ಲವನು ಹರಿಯ ಪದ
ತಳದೊಳಿರಿಸುವುದೆ ಲೇಸು, ಮುಗುಳೆ.

# ಸೇವೆ

**ದೇವಗಾಂಧಾರಿ**

ಗುರುವರ್ಯ ಕುಲಶೇಖರಾಣ್ಮ ಬೇಡಿದ ವರವ
ಹರಿಯೆ ದೈನ್ಯದಿ ಬೇಡುವೆನು ಎನಗೆ ನೀಡು.

ದೇವ ನಿನ್ನನು ಸೇವಿಸುವರಾರು ಅಂತವರ
ಸೇವಕರ ಸೇವಕರ ಸೇವಿಸುವರ
ಸೇವಿಪರ ಚಾಕರರ ಊಳಿಗದುದಾಗಿ ಈ
ಜೀವನವು ಸಫಲವಾಗಲಿ ಎನ್ನ ಒಡೆಯ.

ನಿನ್ನ ಬಳಿಯೊಳು ನಿಂದು ನಿನ್ನ ಮುಖವನು ನೋಡಿ
ನಿನ್ನ ಮಾತನು ಕೇಳಿ ಅದಕೆ ಮರುಮಾತಾಡಿ
ಸನ್ನಿಧಿಯ ಸೇವಕನು ಎಂದು ಜನರಿಂದ ಬಹು
ಮನ್ನಣೆಯ ಪಡೆವಾಸೆ ಇಹುದಾದರೂ
ಗುರುವರ್ಯ ಕುಲಶೇಖರಾಣ್ಮ ಬೇಡಿದ ವರವ
ಹರಿಯೆ ದೈನ್ಯದಿ ಬೇಡುವೆನು ಎನಗೆ ನೀಡು.

ಅರಿಯೆನ್ನೆ ಅಪ್ರಮೇಯಾ ಸೇವಿಸುವ ಪರಿಯ;
ಅರಿದೊಡೆಯುಮೆಸಗೆ ದುಸ್ತರವಪ್ಪುದೋ ಎಂತೊ?
ಪರಿಜನರ ಬಹುದೂರ ಸಂಪರ್ಕವಿನಿಸಿರಲು
ಸರಿಯೆನಲು ಸರಿ: ಇಲ್ಲದಿರಲಿದೆಂತಹ ಬಾಳು?

# ವೇಷ

ಮೋಹನ

ವೇಷವಿದು ಬಿಡದು ಜೀವನವ;
ವೇಷದಾಸೆ ಬಿಡದೆ ಇಹುದು ಮನವ.

ವೇಷವೆಂದರೆ ಮನವು ಕನಲುವುದು; ಸಟೆಯಲ್ಲ;
ದೋಷವಿದು ಎಂದು ಅರಿದಿಹುದು ದಿಟವು;
ದ್ವೇಷದಿಂ ಕಾಣ್ಬನದ; ಆದೊಡೆಯು, ಎನ್ನೊಡೆಯ
ವೇಷದಾಸೆ ಮನವ ಬಿಡದೆ ಇಹುದು.

ಮಾಡುವವ ನೀನು; ನಾ ಗಾಡಿಯನು ತೋರುವವ;
ಪಾಡುವವ ನೀನು; ನಾ ಸುಮ್ಮನೆಯೆ ತಲೆಯ
ಆಡಿಸುವನೆಂದು ಅರಿದೂ ಅರಿದು, ನಾನೆಂಬ
ಮೂಢತನವನು ಬಿಡದೆ ಇಹುದು ಮನವು.

ಬೇಡಿದ ಮಳೆಯನು ನಿಶೀಥದೊಳು ಧರಣಿಗೆ
ಮೋಡಗಳು ಕರೆದು ಉದಯದಿ ಮರೆಯಲು,
ನೋಡೆ ಮಳೆ ಕರೆದ ಮೋಡವಿದೆನಲು ಆಗಸವೆ
ಓಡಾಡುತಿಹ ಬರಿಯ ಹೊಗೆಯ ತೆರದೆ
ವೇಷವಿದು ಬಿಡದು ಜೀವನವ.

# ಬರುತಲಿಹನು

**ಕೇದಾರ**

ಬರುತಲಿಹನು ಬರುತಲಿಹನು ಬರುತಲಿರುವನು;
ಬರುತಲಿಹನು ಮೆಲುನಡೆಯಲಿ ಬರುತಲಿರುವನು.

ದಿನದ ಮೊದಲ ಆಗಸದಲಿ ಎಳನೇಸರು ನಗುತೆ ಇರಲು,
ಇನಿಸಾದರು ಮುಗಿಲು ಇರದೆ ಎಲ್ಲ ದೆಸೆಯು ಬೆಳಗುತಿರಲು,
ಅನುವಾಗುತೆ ಬೈಗುವೊಳ್ತು ಬರಲು ನೆರೆವ ಮರೆಯ ಮಳೆಯ
ಹನಿಯ ತೆರದ ಮರೆಯ ಮೆದುವ ಗಮನದಿಂದಲೀ
ಬರುತಲಿಹನು ಬರುತಲಿಹನು ಬರುತಲಿರುವನು.

ನಿಡುಬಿಸಿಲಿನ ನಡುವಗಲಲಿ ಸುಡುತಲಿರಲು ಮಾರ್ತಾಂಡನು
ಅಡಿಗೈಯುಗಲದ ಮುಗಿಲಿನ ಕಲೆ ಇಲ್ಲಿ ಅಲ್ಲಿ ಇರ್ದು
ಪಡೆಗೂಡುತೆ ಕಡೆಗೆ ತಣುವ ಪೊಡವಿಗೀಯೆ ಬರುವ ತೆರದೆ
ಅಡಿಯನಿಡುತ ಬಳಿಗೆ ನಾವು ಅರಿಯದಂತೆಯೇ
ಬರುತಲಿಹನು ಬರುತಲಿಹನು ಬರುತಲಿರುವನು.

ಚಲಿಸದಖಿಲ ಜಗವು ಮಳೆಯ ಬರವನಿದಿರು ನೋಡುತಿರಲು
ಎಲರು ಸಕಲ ರವವನುಳಿದು ಘನಿಸೆ ದೂರದ
ಎಲೆಯತಳದೊಳಡಿಯನಿಡುತೆ ಮಗುವನಡೆಯೊಳುಗುವ ಸೊಗದ
ಕಲನಾದದಿ ಕಾರಹನಿ ಸಾರಿಬಹವೊಲೆಮ್ಮ ಹರಿ
ಬರುತಲಿಹನು ಬರುತಲಿಹನು ಬರುತಲಿರುವನು.

# ಅದು

ಯದುಕುಲ ಕಾಂಭೋಜಿ

ಹರಿ ನೀನು ಇಂತೆಂದು ತಿಳಿದೆನಿಂದು :
ಅರಸಿ ಅರಸಿ ಇಂದು ತಿಳಿದೆನಿದನು.

ಇರುಳು ಹಗಲೊಳು ಕುಳಿತು ಮಾತುಗಳ ಹೊಸೆದು ಕವಿ
ಬರೆಯೆ ಸೊಗಸಾಗದದು; ಅವನರಿಯದೆ
ಕಿರಿದೊಂದು ಮಾತು ಕವನದಿ ಬಂದು ಸೇರಿ ಅದ
ಮಿರುಗಿಸುವುದಯ್ಯ; ಆ ಮಾತು ನೀನು.

ವಾಣಿಯೇ ಬಂದಂತೆ ವೈಣಿಕನು ನಿಕ್ವಣವ
ವೀಣೆಯಿಂ ನುಡಿಸಿ ಚೆನ್ನಾಗದಿರಲು,
ಕಾಣದವನನೆ ಗಾನವನು ಸ್ವರ್ಗಕೊಂದು ಸ್ವರ
ರೇಣು ಎತ್ತುವುದು; ಆ ರೇಣು ನೀನು.

ಅನವರತ ಅರಸಿ ಸುಖವೊಂದ ಜೀವನದಿ ಜನ
ಮನ ಮರುಗುತಿರೆ, ತೆಳುವ ಹೊನ್ನ ಗೆರೆಯಂತೆ,
ಕನಸಂತೆ ಹಗುರಾಗಿ, ತ್ವರೆಯಿಂದೆ ಮರೆದು, ಜೀ
ವನವನಿನಿದೆನಿಪುದದು; ಅದುವೆ ನೀನು.

# ಸಂಜೆ

**ಧನ್ಯಾಸಿ**

ಎನ್ನ ಜೀವನ ಕರಣವೆಲ್ಲ ತಿರುಗಲಿ, ಮೃತ್ಯು,
ಸನ್ನಿಹಿತವಾಗುತಿರೆ, ನಿನ್ನ ಕಡೆಗೆ.

ಜೀವನದ ಮೊದಲಿಂದ ಕೆಲಸ ಇದಕದಕೆಂದು
ಸಾವಿರಾರು ಕಡೆಗೆ ಪೊರಮಟ್ಟು ಸೇರಿ
ಸಾವಿರಾರು ವಿಧದೆ ಕ್ಷೋಭೆಯಲಿ ಅಲೆಯುತ್ತೆ
ಯಾವ ಕ್ಷಣದೊಳು ನಿನ್ನ ನೆನೆಯದಿಹ ಕರಣಗಳ
ಸಾಕುಮಾಡುತೆ ಸಾವ ಮುನ್ನೆಲ್ಲ ಕಾರ್ಯಗಳ
ಹಾಕಿ ಭಾರವನೆಲ್ಲ ನಿನ್ನ ಮೇಲೆ
ಲೋಕೈಕನಾಥನೆಮಗಾಶ್ರಯನು ತಾನೆಂದು
ಏಕಾಗ್ರವಾಗಿ ನಿನ್ನೆಡೆಗೆ ತೆರಳಲಿ ದೇವ.

ಸಂಜೆಯಲಿ ಮೃದುವಾಗಿ ತಂಬೆಲರು ಬೀಸುತಿರೆ
ರಂಜಿಸುತೆ ಆಗಸವ ಹೊಂಬೆಳಗು ತೀವಿ ಇರೆ
ಮಂಜು ಕವಿಯುವ ಮುನ್ನ ನೂರೆಡೆಯ ಹಕ್ಕಿಗಳು
ಮುಂಜಾನೆ ಹೋಗಿರ್ದ ತಾಣಗಳನುಳಿದು
ಬಂದೊಂದು ಕಡೆಗೆ ಎಲ್ಲವು ಒಟ್ಟುಗೂಡಿ
ಹಿಂದುಳಿದ ಹಕ್ಕಿಗಳ ಕರೆದು ಕೂಗುತ್ತೆ
ಒಂದು ಮುಖವಾಗಿ ಗೂಡಿಗೆ ಸೇರಿಪೋಪಂತೆ
ಒಂದು ಮುಖವಾಗಿ ಜೀವನು ನಿನ್ನ ಸೇರಲಿ.

## ವಿಬುಧರಲ್ಲಿ

ಆರಭಿ

ಮನ್ನಿಸಿ ಕೇಳುವುದಿದನು, ವಿಬುಧರು;
ಮನ್ನಿಸಿ ಕೇಳುವುದಿದನು.

ಕನಕ ಪುರಂದರ ಚಂಡಿ ನಾನಕರ
ವಿನುತ ಕಬೀರ ರವೀಂದ್ರ ಕವೀಂದ್ರರ
ಮನೆಯೊಳಿಗದೊರ್ವ ಬಾಲನವರ
ಇನಿನುಡಿಯ ತೆರದಿ ನುಡಿಯಲು ತೊಡಗಿದೆ.

ಗಾನಲೋಲ ಕರುಣಾಕರನೆಮ್ಮ
ಶ್ರೀನಿವಾಸನೊಲಿದೆನ್ನೊಳು ನಿಂದು
ತಾನೆ ಇಂತು ಪಾಡಿಸುತಲಿಹುದನು ನಿ
ದಾನಿಸಿ ಅರಿದು ಲಾಲಿಸಿ ವಿಬುಧರು
ಮನ್ನಿಸಿ ಕೇಳುವುದಿದನು.

ಇಳೆಯೊಳಿಹುದು ಒಂದೇ ಮನ; ಅದರೊಳು
ಸುಳಿಯುತೆ ಕೊಳಲನು ಹರಿ ನುಡಿಸುವನು;
ತಿಳಿವುದೊಮ್ಮೆ ಅದು, ತಿಳಿಯದಿನ್ನೊಮ್ಮೆ;
ತಿಳಿಯಲೆನ್ನ ನುಡಿ ಎಲ್ಲರ ನುಡಿಯು.

# ಪೂಜೆ

ಯದುಕುಲ ಕಾಂಭೋಜಿ

ಯಾವ ರೂಪದೊಳು ನಿನ್ನನು ಪೂಜಿಸಿದೊಡೇನು?
ಯಾವ ನಾಮದಿ ನಿನ್ನ ಕರೆದರೇನು?

ಚೆನ್ನಕೇಶವ ನೀನು; ಶ್ರೀನಿವಾಸನು ನೀನು;
ಸನ್ನುತ ಪಿತಾಮಹ ಮಹೇಶ್ವರನು ನೀನು;
ಪೊನ್ನವೆಟ್ಟನಮೇಲೆ ವಿಹರಿಸುವರೆಂದೆನುವ
ಮುನ್ನೂರಮೂವತ್ತುಕೋಟಿ ದೇವರು ನೀನು.

ದೇಶಾಂತರಂಗಳಲಿ ನೂರಾರು ಕಾಲದಲಿ
ಸಾಸಿರಾರು ಹೆಸರನಿಟ್ಟು ಕರೆದು
ದೇಶದೇಶದ ಜನರು ಗೆಯ್ದ ಪೂಜೆಗಳು ಜಗ
ದೀಶ ನಿನ್ನಡಿಗಳನು ಸೇರಿದವಲೇ?

ಜೀವಕೋಟಿಗಳ ಮನದಾಸೆಗಳನನುಸರಿಸಿ
ಭಾವ ಭೇದಕೆ ತಕ್ಕ ರೂಪಗಳ ತಳೆದು
ಸಾವಿರಾರು ನಾಮಗಳನು ಪೊತ್ತೆಲ್ಲರ
ಸೇವೆಯನು ಕೊಳುವವನು ಒರ್ವ ನೀನು.

# ಪ್ರಣಾಮ

**ಮಧ್ಯಮಾವತಿ**

ನಿನ್ನಯ ತಾವರೆ ತೆರನಡಿಗಳಲಿ
ಎನ್ನವೆಂಬ ಈ ತನು ಮನಗಳನು
ಚೆನ್ನಕೇಶವಾ ಇರಿಸುತೆ ಒಂದು
ಬಿನ್ನಹ ಕುಸುಮವನಿದನೀಡಿರುವೆನು.

ಹರಿ ನೀ ನೋಡುತೆ ಸೊಬಗಿಗೆ ಮೆಚ್ಚಿ
ಕರದೊಳು ಹಿಡಿದಾಘ್ರಾಣಿಸಿ ಸುಖಿಸಿ
ಶಿರದಲಿ ಧರಿಸಲು ಸರಿಯೆನೆ ಮೆರೆಯುವ
ಪರಿಮಳಪೂರಿತ ಪುಷ್ಪವಿದಲ್ಲ.

ದೊರೆಯೇ ನಿನ್ನಡಿ ಸುಳಿವೆಡೆಗಳಲಿ
ಇರುತಲಿ ನಿನ್ನಯ ಪದಗಳ ಅಮರ
ಸ್ಪರುಶದ ಸುಖವನು ಅರಿವುವು ಪರಿಪರಿ
ತೆರನ ವಸ್ತು ಆ ಸುಖವಿದಕಿರಲಿ.

ಬಿನ್ನಹವಿದು ನಿನ್ನಡಿಗಳಲಿರಲಿ ;
ಎನ್ನಯ ತನು ಮನ ನಿನ್ನ ಅರಿಯಲಿ ;
ಎನ್ನದು ಎನ್ನುವುದೆಲ್ಲವು ಸಂತತ
ಚೆನ್ನಕೇಶವಾ ನಿನ್ನೊಳು ನಿಲಲಿ.

2—47. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರು ಮುದ್ರಿಸಿರುವರು

# ಶ್ರೀನಿವಾಸ ರಚಿತ

ಕೆಲವು ಸಣ್ಣ ಕತೆಗಳು
ಬಿನ್ನಹ (ಗೀತೆಗಳು)
ಶಾಂತಾ (ಸಣ್ಣ ದೃಶ್ಯ)
ಸಾವಿತ್ರಿ ( ,, )
ಸಣ್ಣ ಕತೆಗಳು
ಸಾಹಿತ್ಯ (ಉಪನ್ಯಾಸ)
ಅರುಣ (ಪದ್ಯಗಳು)
ವಿಮರ್ಶೆ ೧ (ಲೇಖನಗಳು)
ಉಷಾ (ಸಣ್ಣ ದೃಶ್ಯ)
ಸುಬ್ಬಣ್ಣ (ಕತೆ)
ತಾಳೀಕೋಟೆ (ಐತಿಹಾಸಿಕ ದೃಶ್ಯ)
ವಿಮರ್ಶೆ ೨ (ಲೇಖನಗಳು)
ನಾಲ್ಕು ಸಣ್ಣ ಕತೆಗಳು
ಕನ್ನಡದ ಸೇವೆ (ಭಾಷಣ)
ಮಂಜುಳಾ (ಸಾಮಾಜಿಕ ದೃಶ್ಯ)
ತಾವರೆ (ಪದ್ಯಗಳು)
ಕರ್ನಾಟಕದ ಜನತೆಯ ಸಂಸ್ಕೃತಿ
ಚೆಲುವು (ಪದ್ಯಗಳು)
ಶಿವ ಛತ್ರಪತಿ (ಐತಿಹಾಸಿಕ ದೃಶ್ಯ)
ವಿಮರ್ಶೆ ೩ (ಲೇಖನಗಳು)

ಯಶೋಧರಾ (ನಾಟಕ)
ಮಲಾರ (ಪದ್ಯಗಳು)
ಸಣ್ಣ ಕತೆಗಳು ೪
ರವೀಂದ್ರನಾಥ ಠಾಕೂರರು
ಸಣ್ಣ ಕತೆಗಳು ೫
ಶ್ರೀ ರಾಮಕೃಷ್ಣ
ತಿರುಪಾಣಿ (ಗೀತಪ್ರಧಾನ ನಾಟಕ)
ಕರ್ಣಾಟಕದ ಜನಪದ ಸಾಹಿತ್ಯ
ಕಾಕನಕೋಟೆ (ದೃಶ್ಯ)
ಆದಿಕವಿ ವಾಲ್ಮೀಕಿ
ವಿಮರ್ಶೆ ೪ (ಲೇಖನಗಳು)
ಸಣ್ಣ ಕತೆಗಳು ೬
ಗೌಡರ ಮಲ್ಲಿ (ಪದ್ಯ ಕಥೆ)
ರಾಮನವಮಿ ,,
ಮೂಕನ ಮಕ್ಕಳು ,,
ತಾಯ್ನುಡಿಯು ತಮ್ಮಡಿ (ಭಾಷಣ)
ನವರಾತ್ರಿ ೨, ೪ (ಕಥನ ಕವನ)
ಚಿತ್ರಾಂಗದಾ (ಭಾಷಾಂತರ)
ಸುನೀತ (ಪದ್ಯಗಳು)
ನವರಾತ್ರಿ ೩
ಪ್ರಸಂಗ

(ಇಂಗ್ಲೀಷಿನಲ್ಲಿ)

Popular Culture in Karnataka
The Poetry of Valmiki
Short Stories (4 Vols.)
Subbanna (Story)
Rabindranath Tagore.

---

ಈ ಪುಸ್ತಕಗಳು ದೊರೆಯುವ ಸ್ಥಳಗಳು :—

ಸತ್ಯಶೋಧನ ಪುಸ್ತಕ ಭಂಡಾರ, ಕೋಟೆ, ಬೆಂಗಳೂರು ಸಿಟಿ
ಬೆಂಗಳೂರು ಪ್ರೆಸ್, ಮೈಸೂರು ರೋಡ್, ಬೆಂಗಳೂರು ಸಿಟಿ
ಜೀವನ ಕಾರ್ಯಾಲಯ, ಬಸವನಗುಡಿ, ಬೆಂಗಳೂರು
ಸಾಹಿತ್ಯ ಭಾಂಡಾರ, ಹುಬ್ಬಳ್ಳಿ

# ಮೊದಲ ಮುದ್ರಣದ ಮುನ್ನುಡಿ

ಸಿರಿಯರಸನ ಕೃಪೆಯಿಂದಾಂ
ವಿರಚಿಸಿದೀ ಕಿರಿಯ ಕಾವ್ಯಮಾಲೆಯನೀಗಳ್
ಸರಸಿಗಳೆ ನಿಮ್ಮ ಮುಂಗಡೆ
ಯಿರಿಸಿರುವೆಂ ಮಮತೆಯಿಂ ವಿಭಾವಿಸಿರಿದನೀಂ.

ಪೊಸತೆಂಬ ದೋಷಮುಂ ಮ
ನ್ನಿಸಿಯೆಂದಾಂ ಬೇಡೆನೀಗ ದೋಷವ್ರಾತಂ
ಮಸಗಿರ್ಪೆನ್ನೀ ಕೃತಿಯೊಳ್
ಪೊಸತೆಂಬಾ ಸ್ಪಷ್ಟದೋಷಮುಂ ಮರೆಗುಮಲೇ.

ಕೃತಿಯಂ ಗೆಯ್ವುದಕಾಂ ಪಂ
ಡಿತನಲ್ಲವು ಸಂಸ್ಕೃತದೊಳು ಕನ್ನಡದೊಳಮೇ
ನತಿ ಶಕ್ತಿಯಿಲ್ಲ ವಾಂಛೆಯಿ
ದತಿಯಾಗಿದೆ ಸೇವೆಗೆಯ್ಯೆ ನಾಡಿನ ನುಡಿಯೊಳ್.

ಶಾಲೆಯಲಿ ಪಾಠವಾಯ್ತು ವಿ
ಶಾಲ ಸುವಾಙ್ಮಯದಿ ಮೆರೆವ ಹೂಣರ ನುಡಿಯೊಳ್;
ಮೇಲಾದ ಸರಸ ಕವಿತೆಯ
ಮಾಲೆಯ ನೋಡಿರ್ಪೆನವರ ಕವಿಗಳ ಕೃತಿಯಂ.

ಪರಭಾಷೆಯಂ ಕಲಿತಿವಂ
ವಿರಚಿಸೆ ತೊಡಗಿಹನು ಕನ್ನಡದಿ ಕವಿತೆಯನೆಂ
ದೊರೆಯುವರೇ ಪ್ರಾಜ್ಞರ್ ಸಂ
ಚರಿಸುವುದಲೆ ಕಾವ್ಯಶಕ್ತಿಯೆಲ್ಲ ನುಡಿಯೊಳಂ.

ಕೇಣವ ತೋರಲಾರದಲೆ ಮತ್ಕೃತಿಯೊಳ್ ವಿಬುಧಾಳಿಯೆಂತು ನಾಂ
ಹೂಣರ ಭಾಷೆಯಂ ಕಲಿತು ಕನ್ನಡದೊಳ್ ಕೃತಿಗೆಯ್ವೆನಾದೊಡಂ;
ವಾಣಿಯೆ ಮಾತೆಯೆಲ್ಲ ನುಡಿಯೊಳ್ ಕವಿಮಂಡಲಿಗೆಂಬ ತತ್ವಮಂ
ಕಾಣರೆ ಪಂಡಿತರ್ ಕಲಿಯಲಾಗದೆ ಕಾವ್ಯಮನನ್ಯಭಾಷೆಯೊಳ್?

ಹೂಣರ ಭಾಷೆಯಂ ಕಲಿಯೆ ಕನ್ನಡ ಮಾತಿನ ಸೇವೆಗೇನದೊಂ
ದೂಣೆಯಮಾದುದೇ? ತಿಳಿವು ಮನ್ಮನದೊಳ್ ತಲೆದೋರ್ಪಮುನ್ನಮೇ
ಕಾಣೆನೆ ನಾಡಿನೀ ನುಡಿಯ? ತದ್ರಸಮಂ ಕಿವಿಯಿಂಟೆ ಬುದ್ಧಿಯೊಳ್
ತಾಣವಗೆಯ್ದುದಂ ನಿಲಸದೇ? ನುಡಿ ಪಾಠದಿನಿಂತು ಬರ್ಕುಮೇ?

ಕನ್ನಡ ನಾಡಿನೊಳ್ ಜನಿಸಿ ಕನ್ನಡಮಂ ಮೊದಲಿಂದೆ ಕೇಳ್ದರೆ
ನ್ನನ್ನರೊಳಾವನುಂ ಕೃತಿಯುಗೆಯ್ವುದು ಸೋಜಿಗಮಾಯ್ತೆ? ಕಾಣ್ಬೆ ನಾ
ನನ್ನೆಯುಮೆಂದಿದಂ: ಕಲಿತ ಸಾಸಿರ ಮಂದಿಯು ಪೆತ್ತ ನಾಡವಿ
ಚ್ಛಿನ್ನ ಕೃತಿಪ್ರವಾಹವನು ಕನ್ನಡ ನಾಡಿದು ಕಾಣದಿರ್ಪುದಂ.

ವೀಣೆಯ ತಂತ್ರಿಯಿಂದುಗುವ ಸುಂದರ ಸುಸ್ವನದಂತೆ ಚೆಲ್ವು, ನೀ
ರ್ತಾಣದ ಕೇಳಿಯೊಳ್ ನಗುವ ಬಾಲೆಯರಿಂಚರದಂತೆ ಮಂಜುಳಂ,
ಜಾಣಿನಭಾರದಿಂ ಕೆಡದ ಬಾಲನ ಮೆಲ್ಲುಲಿವೊಲ್ವಿಮೋಹಕಂ,
ವಾಣಿಯ ಕೂರ್ಮೆಯಿಂ ಬೆಳೆದು ಪೆರ್ಚಿದ ಭಾಷೆಯಿದೆಮ್ಮ ಕನ್ನಡಂ.

ಉನ್ನತಿವೆತ್ತ ದೇಶಮಿದು ಭಾರತವರ್ಷದ ನೂರು ದೇಶದೊಳ್,
ಮನ್ನಣೆಯಿಂದೆ ಬಾಳ್ದ ನುಡಿಯೆಮ್ಮಯ ಕನ್ನಡ ಮಾತು, ಭಾವಿಸಲ್
ಚೆನ್ನಿಗರಾಯನೊಲ್ಮೆಯಲಿ ಸುಂದರಕಾವ್ಯ ಸುಶಿಲ್ಪಚಿತ್ರಮಂ
ಮುನ್ನಸೆಗಳ್ದರಾ ಸದಮಲ ಪ್ರತಿಭಾಂಚಿತರೆಮ್ಮ ನಾಡವರ್.

ಆ ವ್ಯೈಮೆವೆತ್ತ ಕವಿಗಳ
ಸೀಮೆಯೊಳೇಂ ಕವಿತೆ ಸುಲಭಮಾದುದೆ? ಅಥವಾ
ಧೀಮಂತರ್ ಪ್ರಾಜ್ಞರೆನಿಸಿ
ದಾಮುಹಿಮಾಸ್ವಿತರ ಜನಕೆ ಕವನಂ ಸಹಜಂ.

ಅದರಿಂದಲೆನ್ನ ಚಪಲತೆ
ಗದಿಸಿರ್ಪೀ ಕೃತಿಯು ಸಹೃದಯರ್ ಸ್ಮೈರಣೆಯಿಂ
ದೆದೆಯೊಳಿಡೆಗೊಟ್ಟು ಕೇಳುವು
ದುದಾರಿಗಳ್ ರಸಿಕರೆನ್ನನಾಡ ಜನಂಗಳ್.

ಹರಿಯೊಲ್ಮೆಯಿಂದೆ ಕೃತಿಯಿದು
ಸರಳಂ ಸರಸಂ ಸುಬೋಧಮಕ್ಕೆಮ; ಜನರೊಳ್
ಸ್ಥಿರಮಕ್ಕೆ ಕೃತಿ ರಸಜ್ಞತೆ
ಧರಣಿಯೊಳೇ ಸ್ವರ್ಗಸುಖದ ಪರಿಯನರಿಯಿಸಲ್.

ಮಧುಗಿರಿ, ರಕ್ತಾಕ್ಷಿ ಸಂ
ಆಷಾಢ ಶುದ್ಧ ಪಂಚಮಿ.

ಶ್ರೀನಿವಾಸ

# ವಿಷಯ ಸೂಚಿ

ಶ್ರೀ

# ಅರುಣ

## ಅರುಣ

ವಿನತಾಪುತ್ರಾ
ದಿನಪತಿಸೂತಾ
ಅಪರಾಜಿತ ಚಿರತರುಣಾ
ವಿಶ್ವವಿಬೋಧಕ
ಶಶ್ವನ್ಮೋದಕ
ಪರಿಶುದ್ಧಾಂತಃಕರಣಾ
ನಿರ್ಮಲ ಭಾಸಾವರಣಾ
ಅರುಣಾ

ದಿನಬಹುಮುನ್ನವೆ ಅಂಡವ ಭೇದಿಸಿ
ಜನಿಸಲು ನೀತೊಡಗಿರುವುದನೋಡಿ
ಮಾತೆವಿನತೆ ಬಹುಭೀತಿಯು ತಳೆದಳು
ಕಾತರಳಾಗುತೆ ನಿನಗಿಂತೊರೆದಳು :
"ಆತುರವೇಕೆ
ಜನಿಸದಿರೀಗಳೆ
ದಿನಬರುವುದುತಡೆ
ಮಾತನುಕೇಳು."
ಎಂದು ಮಾತೆ ಮೊರೆಯಿಡುತಿರೆ ಕೇಳದೆ
ಮೋಡಿಯಮಾಡುತೆ ನೀನೈತಂದೆ ;
ಚೆಂದದನಗೆಯಿಂ ಮೊಗ ಸೊಗಯಿಸುತಿರೆ
ಕೂಡಲೆ ಚಿಪ್ಪನುಸೀಳುತೆ ಬಂದೆ.

ತೊಳಗುವ ಮುಖ ನೆರೆಮೊರುಗುವ ಕದಪು;
ಬೆಳಗುವ ಕಣ್ಗಳು ಸರಳೊಲು ತೋಳ್ಗಳು;
ಚೆಂದದ ಸರಸದ ಮಂದಹಾಸ, ಬಹು
ಅಂದವಾದ ಮೇಲೊಡಲಿಂ ಜನಿಸಿದೆ:
ಕಾಲಕೆಮುನ್ನ
ಜನಿಸಿದ ಕತದಿಂ
ತನುವರೆಯಾದುದು
ಕೀಳೊಡಲಿಲ್ಲ;
ಮಾತೆ ನೋಡಿದಳು, ಮರುಗುತೆ ಸಿನ್ನನು
ಪತಿಯೆಡೆಗೊಯ್ದಳು, ನಮಿಸುತೆ ನುಡಿದಳು;
"ಪಾತಕವೇನನುಗೆಯ್ದೆನೊ ಕಾಲಿಲಿ
ಸುತನಂ ಪಡೆದೆಂ ಪೊರೆಯುವುದಿವನಂ.

"ಗರುಡನುಪೇಂದ್ರಗೆ ವಾಹನನಾಗಿರೆ,
ಕಿರಿಯಂ ಕಾಲಿಲಿಯಾಗುತೆ ನೆಲದಲಿ
ಸುಳಿದಾಡುವುದೇತರ ಬಾಳುವೆಯಿದು?
ಕಳವಳವನು ನಾಂ ತಡೆಯಲಿಕಾರೆನು.
ಎನ್ನಯ ಮಾತ
ಲಾಲಿಸಿ ಬಾಲಗೆ
ಕೀಳೊಡಲನು ಕೊಡಿ
ಘನ್ನಿಯ ಸಲಹಿ."
ಎಂದು ಸಿನ್ನ ಮುನಿಯಡಿಗಳೊಳಿಟ್ಟಳು;
ಮರುಗುತೆ ಸಿನ್ನಯ ಮೊಗವನು ನೋಡ್ದಳು
ಚೆಂದದ ಮುಖ ಚೆಂದದ ಮೇಲೊಡಲಿದು
ಮುರಿದೊಡಲಾದುದೆ ಎಂದು ಮರುಗಿದಳು.

ಸುಮನಸತಾತಂ ಸತಿಯುಂ ಸುತನಂ
ಸ್ತಿಮಿತ ನಯನದಿಂ ನೋಡುತೆ ನುಡಿದಂ:
"ಮರುಗದಿರಿವನುಂ ಪೆರ್ಮೆಯುಪಡೆವಂ
ಸುರರೆಲ್ಲ ಯುವಕರಹರಲೆ; ಬಾಲರು
ಅವರೊಳಗಿಲ್ಲ;
ಬೋಳೆಯರೋಳಿಗೆ
ಬಾಲಕನಹನೀ
ಕುವರಂ ಭದ್ರೆ;
ಮನಮೋಹನ ಸುಂದರರೂಪಸಿವನ
ಅರುಣಾ ಎಂಬರು ದಿವಿಜರು, ಮಂಗಳೆ;
ಅನುಮಾನವಬಿಡು, ಧೈರ್ಯದಿನೀನಡೆ
ಬರೆ ಕಜ್ಜದ ದಿನ ಕರೆಯುವರಿವನಂ."

ಕೆಲದಿನ ಬಹುವೊದಲದಿತಿಯ ಕುವರರು
ಬಳಿಗೆಬಂದು ವಿನತೆಗೆ ಪೊಡಮಟ್ಟರು;
"ಮೂರುಲೋಕಗಳ ಬೆಳಗಲು ಗಗನದಿ
ತೇರಲಿತಿರುಗಲು ಇನನೊಪ್ಪಿರುವನು;
ಜತೆಯಲಿ ಕುಳಿತು
ತೇರನು ನಡೆಯಿಸೆ
ಸಾರಥಿಯಿಲ್ಲವು;
ಇತರರು ನಾವು
ಉತ್ಸಾಹ ಶಾಂತಿ ಸ್ಥೈರಣೆ ಬಾಲ್ಯದ
ಸರಸತೆಯನು ಬೇಕನಿತನು ಕಾಣೆವು;
ಉತ್ಸಾಹಶಾಲಿ ಶಾಂತಂ ಸೌಮ್ಯಂ
ಅರುಣಂ; ಮಾತೇ ಕಳುಹುವುದಿವನಂ;

"ಉದಯಿಸುತರ್ಕನು ಖರಕಿರಣದಿ ಬರೆ
ಬೆದರಿ ಜೀವಗಳು ಗುಹೆಗಳ ಹೊಗುವುವು;
ಹಗಲಿರುಳಿಲ್ಲದೆ ತಿಮಿರದಿ ಬೆಳೆಯುತೆ
ಜಗವು ಮುಂಬರಿಯುದಂತೆಯೆ ನಿಲುವುದು;
ಸಾರಥಿಯಾಗಿ
ಅರುಣನು ಸೂರ್ಯನ
ಕಿರಣವ ತಡೆಯುಲು
ತೋರದು ಬೇಗೆ;
ಅರುಣನ ಮಂದಸ್ಮಿತವನು ನೋಡಿ
ನೆಮ್ಮಿ ಜೀವಗಳು ಹೊರಗೇ ನಿಲುವುವು;
ನೆರೆಯುಲು ಮಧ್ಯಾಹ್ನದಿ ಬೆಳಕಿನ ಝಳ
ಸಮ್ಮನೆ ನೋಳ್ಪುದ ಕಲಿಯುತೆ ಬೆಳೆವುವು."

ಎಂದಾದಿವಿಜರು ಮೊರೆಯಿಡೆ ವಿನತೆ
ಸಂದೇಹವನುಳಿದಾಗಳೆ ನಿನ್ನಂ
ಕಳುಹಿದಳರುಣಾ; ನೀನೈತಂದು
ಕುಳಿತು ಚಂಡಮಾರ್ತಾಂಡನ ಮುಂಗಡೆ
ಸಾರಥಿಯಾಗಿ
ಅಂದಿನಾಮೊದಲು
ಇಂದಿಗುಮುಂದಕು
ತೇರೋಡಿಸುವೆ.
ಲೋಕವಸುತ್ತುವುದೆಂಬುದ, ನಿರ್ಜರ
ವತ್ಸಾ, ನೀನೊಂದಾಟವೆಂದೆಣಿಸಿ
ಈ ಕೇಳಿಯೊಳೆಲ್ಲೆಡೆ ಸಾರ್ದೆಲ್ಲವ
ಉತ್ಸಾಹಶೀಲ ನಲಿಯಿಸುತಿರುವೆ.

ಕೋಟ್ಯಂತರ ಯೋಜನದಾಗಸದಲಿ
ನಾಟ್ಯದಿ ತೊಡಗಿಹ ಉಡುಗಳ ಸಾರುವೆ;
ಅವರೊಡನಾಡುತ ಪರಿವಹ ಮೊದಲಹ
ಪವನಾವರಣಗಳಲಿ ನೀಂ ಸುಳಿಯುವೆ;
  ಗೋಳವೊಂದರಿಂ
  ಪಾರಿ ಮೇರುವನು
  ಮೀರುತೆ ಬೇರೆಯ
  ಗೋಳವ ಸಾರುವೆ;
ಏಕದಿವಾರಾತ್ರಿಯೊಳೀಸೃಷ್ಟಿಯ
ಏಳುಗಾಳಿಯಲಿ ಸುಳಿಯುತೆ ಸುತ್ತಿ
ಲೋಕದೊಳಲ್ಲಿಡೆಗಾಟವ ತರುವುದು
ಬಾಲಕೇಳಿಯಾಗಿರುವುದು ನಿನಗೆ.

ತಿಳಿನೀರಲಿ ಮರಿಮೀಂಗಳು ಹಿರಿಯರ
ಬಳಿಯಲಿ ಚಲಿಸದೆ ನಿಂದವೊಲುದಯದ
ಕಿರುತಾರಗೆ ಕಣ್ಮಿಸುಕದೆ ನಭದಲಿ
ಹಿರಿತಾರೆಗಳೊಡನಿರುತಿರೆ, ನೀನು
  ಹುಡುಗನ ತೆರದೆ
  ಬೆರಳತೋರಲವು
  ಹರಿದೋಡುವುವು;
  ಸಡಗರದಿಂದೆ
ತಿರುಗಿ ಮಾರ್ಗದಲಿ ಕೆಲದಲಿ ನಿಲ್ಲುತೆ,
ಇಲ್ಲಿಗುಬಹನೋ ಎಂದವು ನೋಡಲು,
ಮರಳಿ ಬಂದು ಅವಹೆದರಿಸಿ ಓಡಿಸಿ
ಚೆಲ್ಲಾಟವನಾಡುವೆ ನೀ ಸತತವು.

ನಿನ್ನಬರವನಾಕಾಯುತೆ ನಿಂದಿರೆ
ಮುನ್ನಿಹ ಹರಹಿದಕೊಂಬೆಯ ಬೇವಿನ
ಮಿಸುಕದೆಲೆಯ ಬರಿರೇಖೆವೊಲಾಗಿಸಿ
ಪ್ರಸರಿಸುತಿದೆ ನಿನ್ನಯ ನಿರ್ಮಲ ಪ್ರಭೆ.
ಕರಗಿದ ಹೊನ್ನ
ತೆಳುರಸದಂದದ
ಕಳೆ ಮುಂಬರಿದಿರೆ,
ಮರ ಎಲೆ ಮಧ್ಯೆ,
ಸವನಿಸಿದಾಕಾರಿನದಿನ ಮಿಂಚಿಂ
ಸಂತಸವೊಗೆದಿರೆ ಗರಿಯನು ಹರಹಿದ
ನವಿಲನು ಚಿತ್ರದೆ ರಚಿಸಿರುವಂದದೆ,
ನಿಂತಿದೆ ಮನವನು ಗೆಲುತಿಹ ಚೆಲ್ವಿಂ.

ಸುಮಧುರ ಸರಸಾಲಾಪ ವಿನೋದದೆ
ರಮಣಿಯರಸನೊಡನಿರುತರೆನಿಶಿಯೊಳ್
ಇನಿದಾಗದ ನಿದ್ರೆಯಸೇರ್ದುದಯದಿ
ಕನಸೊಳಾಸುಖವ ಮರಳಿ ಪಡೆಯುತಿರೆ,
ನೀನೈತಂದು
"ಕತ್ತಲು ಹರಿದುದು,
ಹೊತ್ತಾಗುತಲಿದೆ,
ಮಾನಿನಿ," ಎಂದು
ಮಲರಗಣ್ಣ ಎಮೆಮಧ್ಯದಿ ನೋಡುತೆ
ಮೃದುಲ ಕಿರಣ ಸಂಸ್ಪರ್ಶದಿನೆಬ್ಬಿಸಿ
ಚೆಲುವೆಯ ಮೊಗದಲಿ ಪೊಸದಿನಕೊಪ್ಪುವ
ಎದೆವುಗುವ ಬೆಳಗ ನಿಲಿಸುತೆ ನಡೆಯುವೆ.

## ಅರುಣ

ಆಯದಿ ಮುಂಜಾನೆಯೊಳೆಳೆವಕ್ಕಿ
ತಾಯತುಪ್ಪುಳ ಸುಖೋಷ್ಣಾವರಣದಿ
ಪೊಡೆ ಪಸಿದಿರೆ ಮುಂಪರದಲಿ ಗುಟುಕನು
ಕೊಡುತಿರುವಳು ತಾಯ್ ಎನ್ನುವ ಭ್ರಮೆಯಲಿ
  ಕೊಕ್ಕನು ತೆರೆದು
  ಸುಮ್ಮನಿರಲು ನೀಂ
  ತಮ್ಮಾ ಎನ್ನುತೆ
  ಪಕ್ಕಕೆಬಂದು,
"ದಿಮ್ಮನೆ ಕನಸಲಿ ಬಾಯ್ದೆರೆದಿರೆ ಪೊಡೆ
ತುಂಬುವುದುಂಟೇ? ಮರುಳೇ, ಏಳು;
ಒಮ್ಮೆಗೆ ಗಜಿಬಿಜಿಮಾಡೈ; ಮಾತೆ
ತಿಂಬುದ ತಪಳೆಂ"ದೆಬ್ಬಿಸಿ ಮರೆಯುವೆ.

ನವ್ಯಸಂಸಾರದೊಲುಮೆಯ ಶಯ್ಯೆಯ
ಭವ್ಯಸುಖದೆ ನಿದ್ರಿಪ ದಂಪತಿಗಳ
ಪ್ರಣಯವಾಕೃತಿಯ ಪಡೆದವೊಲೆಸೆಯುವ
ಅಣುಗನುಮಲ್ಲಿಯೆ ನಿದ್ರೆಯೊಳಿರುತಿರೆ
  ಹೊತ್ತಿಗೆಮುನ್ನ
  ಹಾರಿಬರುವೆ ನೀಂ
  ಸಾರುತೆ ಹಸುಳೆಗೆ
  ಮುತ್ತನು ಕೊಡುವೆ.
ನಲಿದು ನಗುತೆ ಮಗು ಏಳಲು, ಜೊತೆಯಲಿ
ಎರಡು ನಿಮಿಷ ಆಡುತೆ, ಬಾಲಕನಿಗೆ,
ಮಲರೇ ಮಾತಾಪಿತರನು ಎಬ್ಬಿಸಿ
ಮರುಳರ ಮಾಡಿಂತೆನ್ನುತೆ ನಡೆಯುವೆ.

ದೂರದೆ ಸಾಗರವಕ್ಷದೆ ಮಲಗಿಹ
ಧೀರಸಮೀರನನೆಬ್ಬಿಸಿ ಪೇಳುವೆ:
"ಸಕಲಸುರಭಿಸುಮಸಂಕುಲವರಳಿ
ಅಕುಟಿಲ ಹೃದಯದಿ ಕಾದಿವೆ ಮಾರುತ;
ಮಂದಗಮನದಿ
ಬಳಿಯನು ಸಾರುತೆ
ಕೊಳುನೀನವರಿಂ
ಗಂಧವನೀಗ."
ಎಂದಾಯುವಕ ಮರುತನಂ ಕಳುಹಿಸಿ
ಸುಮಗಳ ಜೊತೆಗವನಾಡುವ ಸರಸದ
ಚೆಂದವನೋಡುತೆ ಹಿಂದೆಯೆ ಸಾರುವೆ,
ವಿಮಲಹೃದಯ ಚಿರಬಾಲಾ ನೀನು.

ಇಂತು ಲೋಕದಲಿ ಸುಂದರ ಸುರುಚಿರ
ಸಂತಸಕೆಡೆಯೆಂದೆನಿಸಿರುವೆಲ್ಲಕು,
ದಿನಪತಿಸೂತಾ, ನವಸುಭಗತೆಯನು
ಅನುದಿನ ಉದಯದಿ ಬಿಡದೆತರುವೆನೀಂ;
ಚೇತನಗಳೊಳು
ಎಳೆತನದಿಂದಲೆ
ಬೆಳಕನು ಎಳಸುವ
ಪ್ರೀತಿಯನಿಡುವೆ;
ಹೆಳವನಾದೊಡಂ ನಗುಮೊಗದಿಂದಲೆ
ಲೋಕವನಲಿಯಿಪ ಕಾರ್ಯದಿ ತೊಡಗಿ
ಇಳೆಬಾಂದಳಗಳೊಳೆಲ್ಲೆಡೆ ಸುಳಿಯುತೆ
ಶ್ರೀಕರಾಂಶು ನೀಂ ಸುಖವನು ಕಾಣುವೆ.

ಅರುಣಾ
ವಿನತಾಪುತ್ರಾ
ದಿನಪತಿಸೂತಾ
ಅಪರಾಜಿತ ಚಿರತರುಣಾ
ವಿಶ್ವವಿಬೋಧಕ
ಶಶ್ವನ್ಮೋದಕ
ವಿಮಲಸುಪ್ರಭಾವರಣಾ
ಪರಿಶುದ್ಧಾಂತಃಕರಣಾ
ಜೀವರ ಹೃದಯದಿ
ಪಾವನ ನಿನ್ನಯ
ಉತ್ಸಾಹವಿಸಿಸಸಿರಿಸಿ
ನಿರ್ಮಲ ಪ್ರತಿಭೆಯುತರಿಸಿ
ದೋಷಹಾರಿ ಸಂಚರಿಸು ;
ಇಂತು ಲೋಕವನು ಪೊರೆಯುತೆ ಅರುಣಾ
ಸಂತತ ಬಾಕ್ಕೆ ನಿರ್ಜರ ತರುಣಾ.

## ತೆಂಗಾಳಿ

ಬಾರ ಮುಂಬೇಸಗೆಯ ಮೆಲುನಡೆಯಮಾರುತ
ಬಾರಯ್ಯ ಮಧುಮಾಸದ್ವೈತರವ ಸಾರುತ
ಬಾರ ಲೋಕಕೆ ಹರಿಸದ್ವಿಸಿರಿಯ ಬೀರುತ
ಬಾರ ಸೊಗಸಿನ ತೆರನ ಜನಕೆಲ್ಲ ತೋರುತ.

ಮೊದಲವತ್ಸರದ ಹಣ್ಣೆಲೆ ಬಣ್ಣಮಾಸಿ
ಉದುರ್ವದಿನ ಬಹುದನರೆಭಯದಿ ಹಾರೈಸಿ
ಇದಿರ್ನೋಳ್ಪುದರ ಮೇಲೆ ಮೆಲುಮೆಲನೆಬೀಸಿ
ಸದಯ ಬೆಸುಗೆಯಬಿಡಿಸಿ ಅದನು ಕಡೆಹಾಯ್ಸು.

ತರುಲತಾರಾಜಿಗಳ ಬಾಡಿರುವವೆಯ್ಯ
ಕರುಣಿ ಕೂರ್ಮೆಯತೋರುವೀ ನಿನ್ನಕೈಯ
ಸರಸಸಂಪರ್ಕದಿಂ ನಲಿಸುತಕ್ಷಯ್ಯ
ಪರಸತ್ವವಲ್ಲಿ ತಳಿರ್ವಂತೆ ಹರಸಯ್ಯ.

ಎಲ್ಲ ಲತೆಗಳನೋಳ್ಪ ವೊದಲಿಲ್ಲಿಬಂದು
ನಲ್ಲನೀಮರೆದಿರಲು ವಿರಹದಲಿನೊಂದು
ತಲ್ಲಣಿಸುವೀಮಲ್ಲಿಗೆಯನು ತರಿಸಂದು
ಲಲ್ಲೆಯಿಂ ಸಂತೈಸಿ ಪೊರೆ ದೀನಬಂಧು.

ಎನ್ನಜೀವವ ನಿನ್ನಸೊಗದಿನಾವರಿಸು
ಹಣ್ಣೆಲೆವೊಲೆನ್ನಹಳೆಗನಸುಗಳ ಹರಿಸು
ಚಿನ್ನಹೊಸಬಾಳ ಹೊಸರಸಗಳನೊಸರಿಸು
ಚಿನ್ನಹೊಸತಳಿರು ಸುಮುಫಲಗಳನು ತರಿಸು.

ಅರಿಯದವರಾವು ಎಮ್ಮರಿಯಮನದ ನೂರು
ವಿರಸತೆಯ ತೊಟ್ಟುಗಳ ಕಳಚಿ ಅವ ತೂರು
ಮರಣದಲಿ ಜೀವನದ ನೆಲೆಯಿಹುದ ತೋರು
ಪರಮಾತ್ಮನುಂಟು ಸುಖದೊಳವೊಂದು ಸಾರು.

ಮೆಲುಮೆಲನೆ ಪಸರಿಸುತೆ ತೆಂಕಣಂ ಬಾರ
ಪಲವಿಧದ ಸಿಂಗರವ ವನ್ನಾಳಿಗೆ ತಾರ
ನಲವಿನಂಕೆಯ ನಿತ್ಯತೆಯ ತೋರು ಧೀರ
ಚೆಲುವು ದೊರೆಯಾಳ್ದನು ಸಾರ್ಥ ಸವಿಾರ.

## ತಿರಸ್ಕೃತ

ನಯದನಡೆಯಿಂ ನೊರಜುಕಲ್ಲ ಕೊಡನಾಡುತ್ತ
ಹರಿಯುತಿಹ ತಿಳಿನೀರ ಸಣ್ಣ ಸರಳೇ
ದಯೆಯುಮರೆದವಳೆನ್ನೊಳುಲಿಯದಿಹ ಮೆಲ್ವಾತ
ಸರಳತೆಯತೋರಿ ನೀನುಲಿ ಎನ್ನೊಳು ;
ಪ್ರಿಯೆಮುನಿದಿರುವಳೀಗ ಮಾತನಾಡದೆ ಇಹಳು
ದಯೆತೋರಿ ಸಂತಸವನೀಡುನೀನು.

ತಳಿರಮಧ್ಯದಿ ಕುಳಿತು ಸ್ವರಗಳನು ಸುರಿಯುತಿಹ
ಸವಿಯುಗಾನದ ಸೊಗಸಗರಿಯು ಪಕ್ಷಿ
ಮುಳಿದೆನ್ನದಯಿತೆಯೆನ್ನೊಳುನುಡಿಯದಾ ಮಧುರ
ರವದೊಲುಮೆವಾತನೀನೆನಗೆ ಪಾಡು ;
ಲಲನೆಯಾ ದನಿಯ ಕೇಳಲು ತವಕಪಡುತಿಹೆನು
ಸಲಿಸು ತವಗೀತದಿಂದಾಸೆಯದನು.

ಶಾಂತತೆಯ ಸೊಬಗ ತಿಳಿಪೊಂಬೆಳಗಿನಲಿಹರಹಿ
ದೆಸೆದೆಸೆಗೆ ಪಸರಿಸಿಹ ಸೊಗದುದಯವೇ
ಕಾಂತೆ ಆಲಿಂಗನದಿ ಕೊಡದ ಸುಖವನು ನಿನ್ನ
ಜಸದಿನಾವರಿಸಿ ನೀನೆನಗೆ ನೀಡು ;
ಪಂತಮಾಡುತಲವಳು ನೀಡದಿಹ ಹಿರಿಯ ಆ
ಅಂತರ್ಯ ಶಾಂತಿಯನು ನೀನು ನೀಡು.

ಕ್ರೂರೆಯಾಗಿಹಳವಳು ಕೋಪವನು ಹಿಡಿದಿಹಳು
ದೀನನಾಗಿಹ ಎನ್ನಕಡೆನೋಡಳು ;
ಪಾರಿವದ ಕೂಜನದ ಸೊಗದ ಮೆಲ್ನುಡಿಗಳನು
ಮೌನ ಚೆಂದುಟಿಗಳಿಂ ತಡೆದಿರುವಳು ;
ನೀರೆ ಕೋಪಿಸೆ ಕೃಷ್ಣಪಕ್ಷಾಂತ ನಿಶಿಯ ಮು
ನ್ನೀರಂತೆ ಎನ್ನಮನ ತಳಮಳಿಪುದು.

## ಭಯಪಟ್ಟ ಅಳಿಲು

ಅಳಿಲೊಂದಿದೆನ್ನ ಬಳಿ
ಸುಳಿದಾಡುತಿರ್ದೆನ್ನ
ಘಳಿಲನೆಯೆ ನೋಡಿ ಹರಿದಾಡಿ ಓಡಿ
ಬಳಿಯ ಮರವಿದನ್ನೇರಿ
ಕಳೆಯಮೇಲ್ಗಡೆ ಕುಳಿತು
ಮುಳಿದೊಂದು ದನಿಯಿಂದ ಮೊರೆಯುತಿಹುದು.

ಖಳನೊರ್ವ ಬಂದಿಹನು
ಕುಳಿತಿಹನು ಬಳಿಯೊಳಿಂ
ದೆಳೆಯರಿಗೆ ಪೇಳ್ವೆಯೋ ಎಂತು ಅಳಿಲೆ
ಖಳನೊರ್ವನಿಹನಿಲ್ಲಿ
ಸುಳಿಯದಿರು ಬಾರದಿರು
ಬಳಿಗೆಂದು ಸತಿಗೆ ಮೊರೆಯುತಲಿರುವೆಯೊ?

ಮುಳಿಸು ಬೇಡಳಿಲಯ್ಯ;
ಖಳನಲ್ಲವೈಯ ನಾ
ನಳಿಲತಿನ್ನುವ ಮನುಜನಲ್ಲವಯ್ಯ;
ಎಳೆಯಳಿಲಕಂಡೆನೆನೆ
ಕೊಳೆನ್ನೈಯನಾನದನು;
ಎಳೆಯರುಂಟೆನಗೆ ನಿನಗೆಂತಂತೆಯೆ.

ಭಯವನುಳಿಯಯ್ಯ ನಾಂ
ಸಯಮರಿತ ಮನುಜನೈ;
ದಯೆಯಿರುವುದೆನ್ನ ಮನದಲಿ; ನಿನ್ನಯಾ
ದಯಿತೆ ಬಳಿಸಾರೆ ನಾ
ನೊಯಿದವಳ ಪಸೆನಿಲೆನು;
ದಯಿತೆಯೆನ್ನವಳು ಬೇರೊರ್ವಳಿಹಳು.

ಮನುಜನಾದೊಡೆಯೇನು
ದನುಜನಾನಲ್ಲವಲೆ ?
ವಿನಯುದಲ್ಪವ ನಾವು ಕಲಿತಿರುವೆವು.
ವಿನುತವಾದಖಿಲಕುಲ
ದನಿತು ನಯುಮಿಲ್ಲದೊಡ
ಮಿನಿತನಿತು ನೀತಿಯುನು ಪಡೆದಿರುವೆವು.

ಕೇಳದೆನ್ನಯುಮಾತ
ಬಾಳವೊಲು ಗಾಳಿಯುನು
ಸೀಳುತಿಹ ದನಿಯುನೀ ಸಣ್ಣೊಡಲಿನ
ಆಳದಿಂದೆಳೆಯುತ್ತೆ
ಸೂಳಯಿಸುತಿಹುದೆನ್ನ
ಚಾಳಿಯುನು ನೆಮ್ಮಲಾರದೆ ಅಳಿಲಿದು.

## ಕುರುಡರು

ಕುರುಡನಯ್ಯಾ ಕಬೋದಿಯೋ ಶಿವ
ಧರುಮನೀಡಿ ಸಂರಕ್ಷಿಸುತಂದೆ
ಕುರುಡಗೆ ಧರುಮುವನೀಡಿ ರಕ್ಷಿಸು
ತಾಯಿ ತಂದೇ ಶಿವ ;

ಎನಗೆ ಕಣ್ಣುಗಳ ಶಿವಕೊಡಲಿಲ್ಲ
ನಿನಗೆ ಕಣ್ಣ ಕೊಟ್ಟಿರುವನು ದೇವ
ನಿನಗೆಂದಿಗು ಶಿವನೊಳಿತು ಮಾಡಲಿ
ತಾಯಿ ತಂದೇ ಶಿವ ;

ಕಣ್ಣಿಲ್ಲದ ಪರದೇಶಿಯು ನೋಡು
ಅಣ್ಣತಮ್ಮನೆನ್ನುತೆ ಕಾಪಾಡು
ಕಣ್ಣಿಲಿ ಕುರುಡಗೆ ಧರುಮುವನೀಡು
ತಾಯಿ ತಂದೇ ಶಿವ ;

ಕಣ್ಣಿರುವ ನಿನಗೆ ಆ ಶಿವ ತಂದೆ
ಕಣ್ಣಿಲ್ಲದೆನಗು ಶಿವನೇ ತಂದೆ
ಅಣ್ಣಾ ನಾಮರಿತೆ ನೀ ಕೇಳಿಬಂದೆ
ತಾಯಿ ತಂದೇ ಶಿವ:

ಎನ್ನ ನೋಡಿನೀ ಕೊಟ್ಟರೆ ಶಿವ
ನಿನ್ನ ಮಕ್ಕಳಿಗೆ ಕೊಡುತಿಹನಯ್ಯ
ನಿನ್ನ ಧರುಮ ನಿನ್ನವರ ಕಾಯುವುದು
ತಾಯಿ ತಂದೇ ಶಿವ;

ಕುರುಡನಯ್ಯಾ ಕಬೋದಿಯೋ ಶಿವ
ಧರುಮವ ಮರೆಯದೆ ಕೊಡು ನೀ ತಂದೆ
ಕುರುಡನ ಪೊರೆಯಲು ಶಿವ ನಿನ್ನೊಳಿಹನು
ತಾಯಿ ತಂದೇ ಶಿವ.

## ಹಾಳೂರು

ಹಾಳೂರನೋಡು
ಹಾಳು ಗೋಡೆಗಳ
ಹಾಳಾದ ಹೊಲಮಡಿಯು
ಹಾಳುಗುಡಿಯು.

ಬೋರೆಮರದಲಿ ಹಣ್ಣು
ತುಂಬಿ ಉದುರಿರಲು
ಆರಿಸುವರಿಲ್ಲ ಅದ
ತಿಂಬರಿಲ್ಲ.

ಅಗಳಿನಲಿ ನೀರಿಲ್ಲ
   ಅದರ ತಳದಲ್ಲಿ
ಮಿಗೆಬೆಳೆದ ಮುಳ್ಳುಗಿಡ
   ಪೊದೆಯಾಗಿದೆ.

ಅರೆಬಿದ್ದ ಮನೆಗಳು
   ನೆಲಸಮದ ಮನೆಗಳು
ಮುರಿದ ಬಾಗಿಲಕಟ್ಟು
   ಹೊಲದ ಮುಟ್ಟು.

ಹಾದಿ ನಡೆಯುವರಿಲ್ಲ
   ದನಕರುಗಳಿಲ್ಲ
ಬೀದಿಯಲಿ ಜನವಿಲ್ಲ
   ಮನೆಯೊಳಿಲ್ಲ.

ಮುಂಗಡೆಗಳನು ಗುಡಿಸಿ
   ಸಾರಿಸುವರಿಲ್ಲ
ರಂಗು ಕಾರಣೆ ಇಡುವ
   ನಾರಿ ಇಲ್ಲ.

ಮಾಳಿಗೆಯ ಮನೆಯಿದು
   ಅರಳಿಸೊಸಿಯಿಲ್ಲಿ
ಪಾಳಿಸಲುಗೋಡೆಯಿದು
   ಬಿರಿಯುತಲಿದೆ.

ಅಂಗಳದೊಳಿಡೆಬಿಡದೆ
ಬಗೆಬಗೆಯ ಮುಳ್ಳು;
ರಂಗವಲ್ಲಿಗೆ ಬದಲು
ಉಗಿನಿಯುಂಬು.

ಅಂಗಡಿಯುಮನೆಯಿದು;
ಕೊಟ್ಟುಕೊಳಲಿಲ್ಲ.
ಸಿಂಗರಿಸಿ ಕೊಂಡಿಲ್ಲಿ
ಶೆಟ್ಟಿಯಿಲ್ಲ.

ಸಂಜೆಯಾಗುತಲಿರಲು
ಬಾಲಕರ ನುಡಿಯ
ಮಂಜುಳ ನಿನದವಿಲ್ಲ
ಕೇಳಿಯಿಲ್ಲ.

ಮುಚ್ಚಿಕೊಳ್ಳಲು ಸಂಜೆ
ಮನೆಮನೆಯ ಸೊಡರ
ಹಚ್ಚಿ ಬಾಗಿಲೊಳಿರಿಸೆ
ವನಿತೆಯಿಲ್ಲ.

ಇಂದುವಿಗೆ ಕಳೆಯಿಲ್ಲ
ತುಂಬಿರಲು ನೋಡಿ
ಚಿಂದುಮಾಮ ಬಾಬ
ಎಂಬರಿಲ್ಲ.

## ಅರುಣ

ತಿಳಿಯ ತಿಂಗಳ ಹೊನಲು
   ಹರಿಯುತಿರೆ ನೆಲದಿ
ಒಲಿದ ಜವ್ವನಿಗರ
   ಸರಸವಿಲ್ಲ.

ಅಂದುನೋಡಿದ ಸೊಬಗು
   ಏನಾಯಿತೆಂದು
ಚಂದಿರನು ನೋಡುವನು
   ಮ್ಲಾನನಾಗಿ.

ದೇಗುಲದಿ ಸೊಡರಿಲ್ಲ
   ಹೂವು ಕಾಯಿಲ್ಲ
ಗೂಗೆ ಕೂಗುತಲಿಹುದೆ
   ಸೇವೆಯಿಲ್ಲ.

ನಿಶಿಯಲ್ಲಿ ಮಕ್ಕಳನು
   ಲಾಲಿಪರಬದಲು
ಹಸಿದ ತೋಳವು ನರಿಯು
   ಊಳಿಡುವುವು.

ಹಿಂದಣಾ ಬದುಕೂ
   ಚೆಂದವೂ ಸೊಬಗೂ
ಅಂದಿಗೇ ಮುಗಿದುವು
   ಇಂದಿಗಿಲ್ಲ.

## ಅರುಣ

ಅಂದಿನಾಸಂತಸ
ಮಂದ ಹಾಸಗಳು
ಕಂದಗಳ ಲಾಲನೆ
ಅಂದಿಗಾಯ್ತು.

ದುಡಿವನಿತು ದಿನ ದುಡಿದು
ಮಕ್ಕಳನು ಸಾಕಿ
ಕಡೆಗೆ ಶಕ್ತಿ ಕುಗ್ಗಿ
ಸೊಕ್ಕಿತೂರು.

ತನ್ನದಿನ ಬಂತೆಂದು
ಕಣ್ಣುಗಳ ಮುಚ್ಚಿ
ಇನ್ನು ಸಾಕೆನಗೆಂದು
ತಣ್ಣಗಾಯ್ತು.

ಕಂದಕದಿ ನೀರೊಣಗಿ
ವಿಗಡಿಸಲಿ ಕಾಡು;
ಇಂದು ಈ ಊರಿಗೆ
ಹಗೆಗಳಿಲ್ಲ.

ಹಾಳೂರ ನೋಡು
ಹಾಳು ಗೋಡೆಗಳ
ಹಾಳಾದ ಹೊಲಮುಡಿಯ
ಹಾಳು ಗುಡಿಯು.

## ಅಭಿಮನ್ಯು

ಮಗನಳಿದ ಶೋಕದೆ ಸುಭದ್ರೆ ಮುಳುಗಿರೆ ಸಕಲ
ಜಗದೇಕ ರಕ್ಷಕಂ ಬೇಗದಿಂ ಬಂದು ತಂ
ಗಿಗೆ ಕುವರನಳಿದಿಲ್ಲ ತನ್ನೊಳಿಹನೆಂಬೊಂದು ತತ್ವವಂ ತಿಳಿಯಿಸಿದನು.

ಕಾಳಗದೊಳಭಿಮನ್ಯು ಮಡಿದ ದುಃಖದ ವಾರ್ತೆ
ಪಾಳೆಯದೊಳೆಲ್ಲ ಕಿವಿಗಳನಿರಿದುದೆದೆಯೊಡೆದ
ಊಳಿಗದ ಜನ ವೇಗದಿಂ ಬಂದು ಪೇಳಲಾರದೆ ಪೇಳ್ದರಂತವುರದೆ;
ಕೇಳಿ ದುಃಖದ ವಹ್ನಿಯಲಿ ಬೆಂದರೆಲ್ಲರುಂ
ಪೇಳಲೇಂ ಶಶಿರೇಖೆಯುಬ್ಬೆಗವ ಪೆತ್ತವಳ್
ತಾಳಲಾರದಶೋಕಭರದಿಂದೆ ನೆಲದೊಳೂಳಿಡುತೆ ಬಿಳ್ದಳುಸುಭದ್ರೆ.

ಹಾ ಕಂದ ಪೋದೆಯಾ ಬಾಳ್ವೆನಿನ್ನೆಂತುಟೋ
ಏಕೆ ನೀಂ ರಣಕೈದಿದ್ವೈ ಬೇಡವೆಂದೊಡೆಯು
ಮಾಕೆವಾಳ್ತನವ ಸಾಯುದಿರೆ ಜನಪ್ರೋಗಳದೇ ಪೋಗದೇ ಬೇರೆ ಸೇನೆ
ಹಾ ಕುವರ ಬಾಲ್ಯದೊಳೆ ಮಡಿಯಲೆನ್ನುದರದೊಳ
ದೇಕೆ ಜನಿಸಿದೆ ಶೋಕಸಾಗರದೊಳಾಳೆಂದು
ನೂಕಿದೆಯ ತಾಯನೆನ್ನಯ್ಯ ನೀ ಪೋದೆಯಾ ಬಾಳಲೇನಾನೆಂದಳು.

ಮಾವನೇ ನಿನಗೆ ಕೃಷ್ಣಂ ಫಲ್ಗುಣಂ ಪಿತನೆ
ಭಾವ ಭೀಮಂ ನಿನಗೆ ಪಿರಿಯಯ್ಯನಹನೆ ಸಹ
ದೇವನಕುಲರ್ ನಿನ್ನನೆತ್ತಿನಲಿದಾಡಿಸಿದ ಕಿರಿಯಯ್ಯಗಳೆ ಎಲ್ಲರುಂ
ಹೇವರಿಸದೆಂತು ನಿನ್ನನು ಯುದ್ಧಭೂಮಿಯಲಿ
ಸಾವನ್ನೈದೆಂದು ಕಳುಹಿಸಿ ಸುಮ್ಮನಿರ್ದರೈ
ಆವ ನಚ್ಚಿನ ನಂಟನಿನ್ನುನೆನೆಯಲಿಬಹುದೊ ಎನ್ನಯ್ಯ ಎನ್ನಕಂದಾ.

ಅಕ್ಷೌಹಿಣೀ ಸೇನೆಗಳನು ನಡೆಯಿಸಿದ ಬಹು
ದಕ್ಷ ಸೇನಾನಿಗಳೊಳಾವನೊರ್ವಂ ಶತ್ರು
ಪಕ್ಷದಾವ್ಯೂಹಮುಂ ಭೇದಿಸಲ್ ಬಾರನೇ ನಿನ್ನನಟ್ಟಿದರೇತಕೋ
ಲಕ್ಷದಿನ ಬಾಳಲಿಹ ಬಾಲನಂ ತಮ್ಮಯು ಸ
ಮಕ್ಷದೊಳ್ ಕೊಲೆಯಾಗೆಬಿಟ್ಟು ಬಾಳುವ ಬಹು ವಿ
ಲಕ್ಷಣದ ಶೌರ್ಯಮುಂ ತೋರಿದರೆ ಸಾಯಲಾರದೆ ಪೋದರೇ
ಪೌತ್ರಿಥರು ?

ಅನ್ನಯುವನೆಂದಿಗುಂ ತಾಳದಿಹ ಧರ್ಮಜಂ
ನಿನ್ನಸದೆವಡಿವಮಾತಿಗೆ ಸಮ್ಮತಿಸಿದನೇ
ಕುನ್ನಿಯೆನ್ನನೆ ಚೆನ್ನಕುವರನೆನ್ನನೆ ಇನ್ನುಮೆಳೆವರೆಯು
ಮೆನನೆ? ಕೃಷ್ಣಂ
ಎನ್ನನೆನೆದಾದೊಡೆಯು ಪಾಲಿಸನೆ ಅರ್ಜುನಂ
ತನ್ನಕುವರಂ ತನಗೆ ಸರಿಯೆನ್ನಲೆಳಸಿದೊಂ
ದುನ್ನತಿಯು ಪೇರಾಸೆ ಬಯಲಾದುದೇ ಯಾವ
ಪಾಪಕಿದು ಫಲವೊಮೇಣು.

ಅಳಲುತಿರಲಿಂತುಟು ಸುಭದ್ರೆ ಕಡುದುಃಖದಿಂ
ನಳಿನನಾಭಂ ಬಂದನವನ ನೋಡುತ್ತೊಡನೆ
ಯಳಲು ನಾಲ್ಮಡಿಯಾಗೆ ಬಂದುಕಾಲೊಳುಬಿಳ್ದು
ತಾರೆನ್ನ ಮಗನನೀಗ
ಎಳೆಹಸುಳೆಯುಂ ತಿಳಿಯದೆನ್ನಣುಗಕುವರನಂ
ಕೊಳುಗುಳದೊಳೇಕೆ ಕೊಲಿಸಿದೆ ಏನಮುರಿತೊಡೆಯು
ಮಳಿಯನೆನಬೇಡವೇ ಬೇರೆಯವರಂತೆ ಕೊಲಿಸುವುದೆ
ಬಾಲನನೆಂದಳು.

ಬಳಸಿಪಿಡಿದೆತ್ತಿ ಮುರರಿಪು ತನ್ನ ತಂಗಿಯಂ
ಕಳೆಯುಳಿದ ನೋಟದಿಂ ಕರುಣದಿಂ ನೆರೆನೋಡಿ
ಕೊಳುಗುಳದ ಕಾರ್ಯದೊಳ್ ನಂಟನೋಡುವರೆ ಶೌರ್ಯವ
ನೋಡಿ ಕಳುಹಿಸುವರು
ತಿಳಿಯದವಳೇ ನೀನು ಕಾರ್ಯವನು ಸಾಧಿಸುವ
ರಿಳೆಯೊಳಿಂತಪ್ಪ ಶೋಕವ ತಡೆಯುವೇಳ್ಕುಮಲೆ
ಎಳೆತನದೊಳಳಿದೊಡಂ ಕೀರ್ತಿವಡೆದಂ ಕುವರ
ನೆಂದೆನುತೆ ಸಂತಯಿಸಿದಂ.

ಬರಿದಾಗಿ ಜೀವಿಸುವ ಬಹಳಸಂವತ್ಸರಗ
ಳಿರವಿನಿಂ ಬಂದಫಲವೇನು ಹುಲ್ಲನುತಂದು
ಹಿರಿಯ ಹೊರೆಯೊಳು ಹೊರೆಯನೊಟ್ಟೆ ತೋರದ
ಬಣವೆಮಾಡಿ ಕೊನೆಯಲಿಕಿಡಿಯನು
ಇರಿಸುವಂದದಿ ಪೊಳ್ಳುದಿನದ ಭಾರದಿ ಬೆಳೆದ
ಬರಿಯಬಾಳನು ಸಾವಿಗಿತ್ತಾದುದೇಂ ಕೊನೆಗೆ
ಗುರುತಿಲ್ಲದಂತಳಿವುದಲ್ತೆನಿಸ್ಸಾರಮಾಬಾಳುಬಾಳಲ್ಲ ಭದ್ರೇ.

ಕಾರ್ತಿಕದ ಚಂದಿರನ ವಿಶದ ಪ್ರಭೆವೊಲ್ಮೆರೆವ
ಕೀರ್ತಿಯಂ ದಶದಿಶೆಗೆ ಪಸರಿಸಿದ ವಿಕ್ರಮದ
ಮೂರ್ತಿಯಂ ಗರ್ಭದೊಳ್ ಧರಿಸಿದಾಪೆರ್ಮೆ
ಸಾಲದೆ ಪೇಳ್ಸುಭದ್ರೆ ನಿನಗೆ
ಪೂರ್ತಿಯಾಗದೆ ನಿನ್ನಕುವರನಿಂ ಪಾಂಡವರ
ಕೀರ್ತಿ ಕೈಲಾಸಗಿರಿ ಶಿರದ ಕುಡುವೆರೆಯಿಂದೆ
ಪೂರ್ತಿಯಪ್ಪಂತೆ ಭಾವಿಸುತಿದನು ಮನದೆ ನೀಂ
ಶಾಂತತೆಯ ತಾಳು ತಂಗೀ.

ಎಂದೆನಿತು ಪೇಳ್ದೊಡಂ ಖೇದವಾರದೆ ಸುದತಿ
ನಂದನನ ನೆನೆನೆನೆದು ಗೋಳಿಡುತೆ ಮೇಲೆಮೇ
ಲಿಂದೆ ಬಡಿಯುತೆಬರುವ ತೀವ್ರಝುಂಝಾವಾರುತದ
ಜೊತೆಯ ವರ್ಷದಂತೆ
ಇಂದು ಮುಗಿಯದಿದೆಂಬತೆರದೆ ಖೇದದೊಳಾಳು
ತೊಂದುಕ್ಷಣದಲಿ ಸೋತು ಬಿರುಮಳೆ ನಿಲುವ ತೆರದೆ
ದಂದುಗದ ಬಳಲಿಂದೆ ಮೆಯ್ಮರೆದು ಕೃಷ್ಣನಡಿದಾ
ವರೆಗಳೊಳುರುಳ್ದಳು.

ಕಾಲಬಳಿಬೀಳ್ದ ತಂಗಿಯನು ಪಿಡಿದೆತ್ತಿ ಗೋ
ಪಾಲನಲ್ಲಿಯೆ ಕುಳಿತು ತೊಡೆಯಮೇಲ್ಮಲಗಿಸುತೆ
ತಾಳಲಾರದ ದುಃಖ ಬಂದುದೇ ನಿನಗೆಂದು ಮನದೆ
ಮರುಗುತೆ ಶೋಕಕೆ
ಮೂಲವಹಮೋಹವಂಕಳೆವತಿಳಿವಿಲ್ಲದಿರೆ
ಮೇಲಣಿನ್ನಿನಿತ್ ಮಾತಿಂ ಶಾಂತಿ ಬಾರದೆಂ
ದಾಲಲನೆಗಾಗ ಮಾನಸಪಟದೆ ತೆರತೆರನ
ಚಿತ್ರವಂ ಪಸರಿಸಿದನು.

ದ್ವಾರಕಾನಗರದುದ್ಯಾನದೊಳು ಬಾಲ್ಯದಿ ವಿ
ಹಾರದೊಳಗಂದಿರ್ದ ರೀತಿಯನುಭವವಾಯ್ತು
ಸಾರಿದುದು ಮುಗ್ಧೆಯರಮನವ ಕುಡಿವರಿಯಿಸುತೆ
ಮಧುಮಾಸವೊಂದಿನಂತೆ
ಪಾರಿದುವು ಗಿಳಿಗಳಾಗಸದಿ ತೋರಣಗಟ್ಟಿ
ಪಾರಿವದ ಮಿಥುನವತಿ ಪ್ರೇಮದಿಂ ವೊಳಗಿದುವು
ಸಾರಿದುದು ಕೋಗಿಲೆಯದನಿ ಯುವತಿಯರೊಳು
ಪ್ರಣಯದ ಮುಗುಳ್ಗಳಕರೆಯುತೆ.

ಬಂದಂಕಿರೀಟಿಸನ್ಯಾಸದೊಳ್ ಫಾಲ್ಗುಣದ
ಚಂದಿರಂ ಹಿಮದೊಳ್ಬೆಳರುವಂತೆ ಸುಲಭದೊಳ್
ಸುಂದರಿಯ ಹೃದಯುವಂ ಸ್ನೇಹಸಾಗರದೊಳೀ
ಡಾಡಿದಂ ಕೈಯನೀಡಿ
ಸುಂದರೀ ಬಾರೆಂದು ಕರೆದು ಬಳಿಸೇರ್ದಳನ
ಮಂದಗಾಢಾಲಿಂಗನದಿ ಪಿಡಿದನೊಮ್ಮೆಗಾ
ನಂದಾಬ್ಧಿಯೊಳ್ತೇಲಿ ಸುದತಿಪ್ರಿಯನಂನೋಡಿ
ಯೆವೆಯಿಕ್ಕಿ ನಿಂದಿರ್ದಳು.

ಅರೆನಿಮಿಷದಲಿ ಕಣ್ಣತೆರೆಯೆ ಪಿಡಿದಿರ್ದವಂ
ನರನಲ್ಲವಭಿಮನ್ಯುವಾಗಿ ಕಂಡಂ ಬೆಚ್ಚಿ
ಹರಹರಾ ಎಂದು ಕೈಬಿಡಿಸಿಕೊಳ್ಳುತೆ ಸರಿದ
ಳಂತುಕನಸದು ಮರೆದುದು
ಮರಳಿ ಕೆಲಕಾಲ ಕಳೆದಂತಿರಲು ಹಸ್ತಿನಾ
ಪುರಕೆ ನವವಧುವಾಗಿ ಬಂದಂತೆ ನಾಟಕದ
ತೆರೆ ಬೇರೆಯಪ್ಪಂತೆ ಮಾನಸಪಟದಮೇಲೆ
ಚಿತ್ರಮಿನ್ನೊಂದೊಗೆದುದು.

ತೋರಿದುದು ಕುವರನಂ ಕರದಿಪಿಡಿದಂತೆ ಕ
ಣ್ಣಾರೆ ನೋಡಿದಳು ಹೃದಯದಲಿ ವಾತ್ಸಲ್ಯರಸ
ಮೇರೆ ಮೀರುತೆ ಪರಿಯಲವನ ಕಣ್ಮೊಗತುಟಿ
ಕುರುಳ ಸಾಲ್ಗಳಂ ಮೋಹದಿಂ
ಬಾರಿಬಾರಿಗೆ ಮುದ್ದಿಸುವಳು ಕುವರನ ಹಿಡಿದು
ಬಾರಿಬಾರಿಗೆ ಹೃದಯಕಪ್ಪಿರುವಳನುಭವಕ
ಪಾರಮಾಯ್ತಾನಂದಮೆನೆ ಕಣ್ಣಮುಚ್ಚಿ ಮನವನು
ತೆರುವಳಾಸೌಖ್ಯಕೆ.

ಇಂತೊಮ್ಮೆ ಕಣ್ಮುಚ್ಚಿ ತೆರೆಯೆ ಕೈಯೊಳಗಿರ್ದ
ವಂ ತನಯನಲ್ಲ ತನ್ನನು ವರಿಸಿ ಕೈವಿಡಿದ
ಕಾಂತನೆನೆ ತೋರಲಿನ್ನೊಮ್ಮೆ ನೋಡಲು ಕುವರ
ನಿಂತು ಪೇಳ್ದಂತಾದುದು:
ಕಾಂತೆ ಭಾರತಯುದ್ಧಕರ್ಜುನರ್ ಬೇಕಿರ್ವ
ರಂತೊರ್ವನಳಿವನಿನ್ನೊರ್ವನುಳಿವಂ ಕೊನೆಗೆ
ಕುಂತೀಕುಮಾರನಾನೆನೆ ಕೇಳ್ದು ಚಕಿತೆ ಬಿ
ಟ್ಟವನನೊಡನೆಚ್ಚೆತ್ತಳು.

ಮರಳಿ ಕನಸಿನ ಸೀಮೆಯಲಿ ನಡೆಯೆ ತೊಡಗಿದಳ್
ಬರುತಿರ್ಪರೊಂದೆಡೆಯೊಳಭಿಮನ್ಯು ಪಾರ್ಥ ಕೃ
ಷ್ಣರು ಸುದತಿ ದೂರದಿಂ ಮೂವರಂ ನೋಡುತ್ತೆ
ಸಂತೋಷದಿಂದೆ ಬಳಿಗೆ
ತ್ವರೆಯಿಂದೆ ನಡೆತಂದು ಕರೆಯೆ ಮೂರ್ವರುಮವಳ
ನರಿಯದವರಂತೆ ನೋಡುತೆ ಸುಮ್ಮನೆಯೆ ನಿಲಲ್
ತರಳನಿಲ್ಲಿಹನು ಮಡಿಯನು ಮರುಳು ನಾನೆನು
ತ್ತವನ ಪಿಡಿಯಲ್ ಸಾರ್ದಳು.

ಪಿಡಿಯಲಭಿಮನ್ಯುವಂ ಪ್ರೀತಿಯಿಂ ಮುಂಬರಿಯೆ
ಒಡನೆಯಾ ಆಕಾರಕರ್ಜುನಾಕೃತಿಯು ಸಂ
ಗಡಿಸಿದತ್ತರ್ಜುನನ ರೂಪವಭಿಮನ್ಯುರೂಪವ
ನಾಂತುದಾ ಪೊಸಬನಂ
ತುಡುಕಲ್ಕೆ ಪರಿಯಲಾಕಡೆ ಕೃಷ್ಣನಾದುದದು
ಪಡೆದುದಾವೊದಲ ಕೃಷ್ಣಾಕಾರವಭಿಮನ್ಯು
ವೊಡಲನಿಂತೋರೊರ್ಮೆಗೊಂದೊಂದು ವಿಗ್ರಹಂ
ಕಂಡುದಭಿಮನ್ಯುವಂತೆ.

ಪಡೆವುದಿಂತೊಂದೊಂದುಮಭಿಮನ್ಯುರೂಪವಂ
ಪಿಡಿವ ಭರದಿಂ ಮಾತೆ ಸಾರೆ ಮಾರ್ಪಟ್ಟಿಹುದು
ನಡೆದಳಿಂತೊಂದರಿಂದೊಂದಕೆ ಸುಭದ್ರೆ ತಾಂ
ತನಯನಂ ಪಿಡಿವಾಸೆಯಿಂ
ನಡೆದಾಯಸದ ನಿರಾಶೆಯ ಕತದಿ ನಿಟ್ಟುಸಿರ
ಬಿಡುತೆ ಕೃಷ್ಣನಕೇಳ್ವ ಎಂದು ಕೃಷ್ಣಾಕೃತಿಯ
ಪಿಡಿಯೆ ಬರೆ ಕೈಗೆ ಸಿಲುಕಿತದು ಕಾಲ್ಗೆರಗಿದಳು
ರಕ್ಷಿಸಣ್ಣಯ್ಯ ಎನುತ.

ಕನಸಿನಲಿ ಮರೆವೊಕ್ಕರಾದೊಡೇಂ ಕೊರೆ ಪಾಲಿ
ಸನೆ ದೇವನೆಚ್ಚರದೆ ಮರೆವೊಕ್ಕರಂತೆಯೆನೆ
ಕನವರಿಸಿ ಕಂದೆರೆವ ನಿಮಿಷದಲಿ ಕೆಲದೆ ಕುಳ್ಳಿರ್ದು
ಧೈರ್ಯವನೀವವೊಲ್
ತನುವಾದ ಕೈಯಿಂದವಳ ಕೈಯತಡವುತ್ತೆ
ಕನವರಿಸದಿರುತಾಯಿ ಏನಾದುದಮ್ಮಯ್ಯ
ಎನುತೆ ಮೆಲ್ಮಾತಿನಿಂ ನೋವವಾರಿಸುವಂತೆ
ಕೃಷ್ಣನಪ[illegible]ಂ ಕೇಳ್ದನು.

ಮಾತನಾಡದೆ ಕೃಷ್ಣನಂ ದಿಟ್ಟಿಸುತೆ ಕನಸಿ
ನಾತೆರನ ನೆನೆದು ಮನದಾಳದಲಿ ಚಿಂತಿಸು
ತ್ತೀತನೇ ಪಾರ್ಥನಿವನಭಿಮನ್ಯುವೆಂದು ಜೀ
ವಾತ್ಮದಲಿ ಹೊಳೆಯೆ ತಿಳಿದು
ಏತಕಣ್ಣಯ್ಯ ಎನ್ನೊಡನಾಟ ಬಾಲ್ಯದಲಿ
ನೂತನದ ಗೊಂಬೆಗಳ ಕೊಟ್ಟು ಕೇಳ್ದಂತೆ ಸರಿ
ಯೇ ತನಯನಂಕೊಟ್ಟು ಕೇಳ್ವುದಿದು ಬಾಳಿದೇಂ
ಬಾಲಕೇಳಿಯೆ ಎಂದಳು.

ಬಿರುಮಳೆಸುರಿದುನಿಲಲ್ ಹಿಂದೆ ಮೆಲ್ಲನೆ ಬೀಳು
ವೆರಡುಹನಿಯಂತೆ ಮೆಲ್ನುಡಿಯಲಿ ಸುಭದ್ರೆ ಮುರ
ಹರನಿಗಿಂತೊರೆಯೆ ಕೇಳ್ದಸುರಾರಿ ತಡೆದ ಕಂಬನಿ
ವೊನಲ್ವಿಪರೀತದಿಂ
ಅರೆನಗೆಯೆನಿಸಿ ಮೊಗದೆ ತೋರೆ ಪೇಳ್ದಂ ಪಾಮ
ರರು ನುಡಿಯಲಿಂತುಟಾಶ್ಚರ್ಯಮಲ್ಲಮದು ಸಂ
ಗರಮುಖದೆ ಪಾರ್ಥಂ ವಿಮುಖನಾದುದುಂ ನೀನೊ
ರೆವುದು ಮಿಂತಚ್ಚರಿಯಿದು.

ನಿನಗೆ ಬೇಕಿರ್ಪರಣ್ಣನಿಗೆ ಬೇಕಿರ್ಪರ
ರ್ಜುನಗೆ ಬೇಕಿನ್ನಿರ್ಪರೆಂದು ಮೋಹದ ಸಲಹೆ
ಗನುವಾಗಿ ಮನದೊಳೆಡೆಗುಡಲಿನ್ನು ಧರ್ಮವೇಂ
ಧರ್ಮಸಂಸ್ಥಾಪನಮದೇಂ
ಮನುಜರೀಯುದ್ಧರಂಗದೆ ನಿಲ್ವುದೇಂ ಶರಾ
ಸನದೊಳಂಬನು ಹೂಡಲೇನೆಲ್ಲರನುಮವರ
ಜನಪದದೆ ದುಷ್ಟರಂ ಶಿಷ್ಟರಂ ಬಿಡವೇಳ್ಕು
ಮಲ್ತೆ ಅವರಿಷ್ಟದಂತೆ.

ಪ್ರಿಯವಸ್ತುವೆನಗೆನೀಂ ಪಾರ್ಥನುಂ ಪ್ರಿಯನೆನ್ನ
ಳಿಯನುಂಪ್ರಿಯಂ ಮಿಕ್ಕ ಪಾಂಡವರ್ ಪ್ರಿಯರಂತೆ
ದಯೆಗೆಪಾತ್ರರ್ ದೇವಿಗಾಂಧಾರಿ ಯಾತ್ಮಜರುಮಿಲ್ಲಿ
ನೆರೆದಿರುವ ಸೇನಾ
ದ್ವಯದೊಳಿಹ ಸೈನಿಕರೊಳೋರೊರ್ವನುಂ ಪ್ರಿಯಂ
ಸಯೆಬಡಿವೆನಾರಬದುಕಿಪೆನಾರಪೇಳ್ ತಂಗಿ
ಜಯವಹುದು ಧರ್ಮಕಿನ್ನೆಂತು ಪೇಳೊರ್ವನುಂ
ಮಡಿಯದಿರೆ ಸಮರಮುಖದಿ ?

ಯಾರಪಾಪಕೆ ಯಾರಕೊಲ್ಲುವದಣ್ಣಾ ಎಂದು
ಪಾರಿಜಾಕ್ಷಿಯುಸುದರ್ಶನಿಟ್ಟುಸಿರಬಿಡಲು ಕಂ
ಸಾರಿ ನುಡಿದನು ತಿಳಿದ ನಿನಗೆ ನಾನೇನೆಂಬೆ
ನೋಡುವರೆ ಲೋಕವೆಲ್ಲ
ಬೇರೆಬೇರೆಯ ಲಕ್ಷಭಾಗಮುಲ್ಲೊಂದು ಸಂ
ಸಾರದಂತಪ್ಪುದದರಿಂದೆ ಮಂದಿಯ ಪಾಪ
ಸೇರುವುದು ಮಂದಿಯೊಳಗಿರುವರೆಲ್ಲರನು
ತಪ್ಪಿಸಲಾಗದಿವನೆಂದನು.

ಕಿಡಿಬೀಳ್ದು ಮನೆಯ ಮೇಲೆಲ್ಲಿಡೆಯುನಾವರಿಸಿ
ಸುಡುತಿಬರೆ ನೀರನೆಲ್ಲವನದಕೆ ಸುರಿಯುವರು
ತಡೆಯುರರವಟ್ಟಿಗೆಯ ಕೇಸರಿಯ ಕದಡಿರುವ ನೀರ
ಸುರಿಯುದಿರೆನ್ನುತೆ
ಕಡೆಗೆ ದೇವಾರ್ಚನೆಗೆ ಮಂತ್ರಿಸಿದನೀರನಾ
ದೊಡೆಯು ಕುಡುವರ್ ಧರ್ಮವಂಪೊರೆವಕಾರ್ಯದಲಿ
ಮಡಿಯುಬೇಕೆನೆ ಕಡೆಯುಪಾದಚರನೇನಿನ್ನು
ಸೇನಾನಿಯುಳಿಯುನೇನು?

ಕೊನೆಗಾಣುತಿರುವುದೀಯುಗವಿದಾಗ ಲೋಕದೊಳ್
ಜನದೆಧರ್ಮಜ್ಞಾನಮುಳಿದಿಹುದು ಪೆರ್ಚಿದುವು
ದನುಜಗುಣಗಳ್ನಾಡೆ ಹಗಲಶಾಕಿನಿಡಾಕಿನಿಗಳಂತೆ
ಜೀವನದಲಿ
ಇನಿಸುಮರೆಯಿಲ್ಲದೊಡಲನು ತೋರುತಿಹವು ಸಂ
ಜನಿಸುತಿದೆ ಧರ್ಮದಿಂ ಫಲವೊಂದುಬಹುದೆ ಎಂ
ಬನುಮಾನ ಮಾನವರ ಸಜ್ಜೀವನದ ಸೂತ್ರ ವಿಚ್ಛೇದ
ಮಾಗುತಿಹುದು.

ದುಷ್ಟನಿಗ್ರಹದ ಯಜ್ಞದಲಿ ಪಶುವಾಗುವುದು
ಶಿಷ್ಟಜೀವನ ಶಿಷ್ಟರಾಚಾರ ಸೌಜನ್ಯ
ಸೃಷ್ಟಿಯಲಿ ಕೆಟ್ಟುದನು ಗೆಲಿದೊಳ್ಳಿತನು ನಿಲಿಸ
ಲುತ್ತಮ ದ್ರವ್ಯಂಗಳು
ನಷ್ಟವಾಗಲೆಬೇಕು ಸಂಚಿತದ ಪಾತಕವ
ದೆಷ್ಟು ಪಿರಿದಷ್ಟು ಕಷ್ಟವು ಜನಕೆ ಸವನಿಪುದು
ಶಿಷ್ಟರುಂ ಲೋಕಕೊಳಿತಾಗಲೆಂದನುಭವಿಸಬೇಕು
ಕಷ್ಟವನು ಭದ್ರೇ.

ಅಳಿದನಭಿಮನ್ಯುವೆಂದಳಬೇಡ ಪಾರ್ಥನಿಂ
ದುಳಿದನೆಂದೆಣಿಸು ಕಾದಲ್ಕೇಂ ಧನಂಜಯುಂ
ತಳೆದನೋ ದೇಹದ್ವಯವನೆಂಬ ತೆರದೆ ತೋರಿದರು
ಪಿತಸುತರು ರಣದೆ
ಕೋಳುಗುಳದೊಳರ್ಜುನನನುಳಿಸಲ್ಕೆ ಸುತನ ಸೀಂ
ತಳೆದ ದಿಟಮಿದು ಪಾರ್ಥನಭಿಮನ್ಯುವಹನು ಕೇ
ಳಳಿದಿಲ್ಲವಭಿಮನ್ಯು ಸಾರಿರುವನೆಲ್ಲರಂ ಪಡೆದೆನ್ನ
ಪೊಡೆಯನಿಂದು.

ಎಂದು ಮುರವಿಧ್ವಂಸಿದುಗುಡದಿಂನುಡಿದನುಡಿ
ನೊಂದಮನಕರೆವಾಸಿಪುಗುತಿರೆ ಸುಭದ್ರೆ ತಾಂ
ಕಂದನಂ ನೆನೆನೆನೆದು ಮರುಗುತಣ್ಣನಮಾತನರಿಯುತ್ತೆ
ಕನಸನೆನೆದು
ಬೃಂದಾರಕಾರ್ಚಿತ ಪದಾರವಿಂದನನೆಮ್ಮ
ನಂದನಂ ಸಾಯುನಿವನಂ ಸೇರ್ದನೆಂದರಿದು
ಸಂದೇಹವಳಿದು ಖೇದಂ ಮಂದವಾಗಿರಲ್ ಹರಿಯಡಿಯ
ಪಿಡಿದಿರ್ದಳು.

## ಹರಿದಾಸನ ಪದಗಳು

(ಕಾವ್ಯಖಂಡದಿಂದ)

ಪ್ರಾಸಪದ್ಯವೆಂತು ವೀಸೊಂದುಹಣವೆಂತು
ಸಾಸಿವೆಯಕಾಳು ಕುಂಬಳಕಾಯ ತೋರೆಂತು
ಲೇಸನರಿಯೆಂದ ಹರಿದಾಸ.

ಅರ್ಥವಿಲ್ಲದಮಾತು ವರ್ತೆಯಿಲ್ಲದ ಬಾವಿ
ಆರ್ತಿಯಿಲ್ಲದ ಬಕುತಿ ಇವುಮೂರು ಲೋಕದಲಿ
ವ್ಯರ್ಥದಿಟವೆಂದ ಹರಿದಾಸ.

ಗಣಮಾತ್ರ ಕೃತಿಯಲ್ಲ ನೊಣಮಾತ್ರ ಜೇನಲ್ಲ
ಹಣಿಗೆಮುಡಿಯಲಿಧರಿಸೆತೊಡವಲ್ಲ ಇದನರಿಯೆ
ಗುಣವುಂಟು ಎಂದ ಹರಿದಾಸ.

ಭಾವವಿಲ್ಲದ ಕವಿತೆ ಜೀವವಿಲ್ಲದ ದೇಹ
ದೇವರಿಲ್ಲದದೇಗುಲ ಇವರ ಸಿಂಗರವು
ಹೇವರಿಕೆಯೆಂದ ಹರಿದಾಸ.

ಬಿಲ್ವ ಶಿವನಿಗೆ ಬೇಕು ಹಲ್ವಮುಗನಿಗೆ ಬೇಕು
ನಲ್ಮಾತು ಕವಿಗೆ ಬೇಕು ಇದು ತಿಳಿಯೆ
ಚೆಲ್ವುಬದುಕೆಂದ ಹರಿದಾಸ.

## ಸ್ಥಳಗಳ ಹೆಸರು

ನಮ್ಮ ಸೀಮೆಯ ಕೆಲವು ಊರಹೆಸರಿನ ಅರ್ಥ
ಬಹು ರಮ್ಯವಾಗಿ ಬಹು ಭಾವಗರ್ಭಿತವಾಗಿ
ರಸಪುಷ್ಟವಾಗಿಹವು. ಇವಕುರಿತು ಯೋಚಿಸಲು
ನಮ್ಮ ಜನಗಳ ಮನಸು ಎಷ್ಟು ಎಳಸಾದುದು
ಎಷ್ಟು ಸರಳ ಎಂದು ತಿಳಿಯುವುದು; ಅಲ್ಲದೆ
ರಾಮಾಯಣದ ಕತೆಯು ಭಾರತದ ಕತೆಗಳು
ನಮ್ಮವರ ಭಾವನೆಯೊಳೂರಿಹುದು ತಿಳಿಯುವುದು;
ಕತೆಯವಿವರದಿ ಜನರ ಊಹೆ ಸರಸತೆಯಿಂದ
ನಲಿದು ಮೃದುಹಾಸ್ಯದಲಿ ಹರಿದಿಹುದು ತಿಳಿಯುವುದು;
ಒಮ್ಮೊಮ್ಮೆ ಒಂದುದುಃಖದ ಕತೆಯ ನೆನೆದು ಜನ
ಅನುತಾಪದಿಂದೆ ಮರುಗುವ ತೆರನು ತಿಳಿಯುವುದು;
ನಿಮಗೆ ಬೇಸರವಾಗದಿರೆ ನನಗೆ ತಿಳಿದಿರುವ
ಒಂದೆರಡು ಇಂತ ಹೆಸರನು ಕುರಿತ ಒಂದೆರಡು
ಕತೆಗಳನು ಹೇಳುವೆನು.

ಪಾವುಗಡ ತಾಲ್ಲೂಕು

ಯಾವುದೋ ಸಮ್ಮತು—ಹೆಸರು ಜ್ಞಾಪಕಬರದು—
ಅಲ್ಲಿ ಲೇಪಾಕ್ಷಿ ಎಂಬೊಂದು ಹೆಸರಿನ ಊರು.
ಲೇಪಾಕ್ಷಿ: ಈ ಹೆಸರಕೇಳಿ ಯಾರಾದರೂ
ಆ ಊರಜನರನೋ ಆ ಕಡೆಯ ಜನರನೋ
ಇದರರ್ಥ ಕೇಳುವರು; ಎನ್ನಂತಮುದುಕರನು
ಕೇಳಿದರೆ ಫಲವುಂಟು; ಈಗ ಜನದಲಿ ಇಂತ
ಸರಸತೆಯು ಮರೆದಿಹುದು; ಅಲ್ಲದಿರೆ ಚಿಕ್ಕವರು
ಏನಾದರೂ ಕೆಲಸಕಾಗಿ ಕುಡುಗೋಲನೋ
ಕೊಡಲಿ ಮಚ್ಚನೊ ತೆಗೆದುಕೊಂಡು ಹೊರಟಿರಬಹುದು;
ನಿಂತು ನಿಮ್ಮೊಡನೆ ಮಾತಾಡುತಿರಲವರಿಗೆ

ಹೊತ್ತಿಲ್ಲದಿರಬಹುದು; ಮುದುಕರನು ಕೇಳಿದರೆ,
ಅವರಿಗೆಂತೂ ಕೆಲಸವಿಲ್ಲ, ಕಟ್ಟೆಯಮೇಲೆ
ಬಿಸಿಲುಕಾಯಿಸಿಕೊಂಡು ಕುಳಿತಿಹರು, ನೀವವರ
ಮಾತನಾಡಿಸಿದರೆಯೆಸಾಕು, ಕತೆಹೇಳುವರು.
ಹಿಂದೆ ಶ್ರೀರಾಮದೇವರು ಕಾಡಿನೊಳಗಿರಲು
ಸೀತಾಮ್ಮನವರ ರಾವಣನೊಯ್ದು ಹೋದಾಗ
ಸತಿಯ ಹುಡುಕುತಲವರು ಕಾಡಿನಲಿ ಅಲೆಯುತ್ತ
ಕಾರದಿವಸದ ಸೂರ್ಯಮಂಡಲವ ಪೋಲುತಿಹ
ಮೊಗದಿಂದ ಬಂದರೀಸ್ಥಲಕೆ; ಲಕ್ಷ್ಮಣಹಿಂದೆ.
ಬರುವ ಮುನ್ನವೆ ದೊಡ್ಡದಾಗಿ ಏನೋ ಇಲ್ಲಿ
ಬಿದ್ದಿಹುದಕಂಡರು; ಒಂದು ಪಕ್ಷಿಯವೊಲಿದೆ;
ಹರಿದಿರುವಗರಿ; ಸುರಿದನೆತ್ತರು; ನೋಡುವರೆ
ಘೋರವಾಗಿಹುದು. ಶ್ರೀರಾಮದೇವರು ನೋಡಿ
ಕನಲಿದರು; "ಲಕ್ಷ್ಮಣಾ ಸೀತೆಯನು ಕೊಂದಿರುವ
"ರಾಕ್ಷಸನು ಬಿದ್ದಿಹನುನೋಡು; ಸೀತೆಯನಿವನು
"ಕೊಂದು ತಿಂದಿರಬೇಕು; ಬಿಲ್ಲುಬಾಣವನು ಕೊಡು;
"ಈಗಲೇ ಇವನ ಕೊಲ್ಲುವೆನು." ಎಂದುದಕೇಳಿ
ತಮ್ಮ ಲಕ್ಷ್ಮಣನೆಂದ, "ಅಣ್ಣಯ್ಯ ನೋಡುವರೆ
"ಇಲ್ಲಿಬಿದ್ದಿಹುದು ರಾಕ್ಷಸನಲ್ಲ; ಯಾವುದೋ
"ಪಕ್ಷಿ ಪೆಟ್ಟನುತಿಂದು ಬಿದ್ದಿಹುದು; ಸಾಯುತಿದೆ;
"ಯಾರೆಂದು ನೋಡುವೆನು." ಎನೆ ರಾಮದೇವರು
ಆಗಲಿ ಎಂದು ಜೊತೆಯಲೆ ಬಂದು ನೋಡಿದರು.
ಪಕ್ಷಿ ಅದು; ಜೀವ ದೇಹವಬಿಡಲು ತುಡಿಯುತಿದೆ,
ಆದರೂ ಬಿಡದೆ ತಡೆದೇಕೊ ಬಿಗಿಹಿಡಿಯುತಿದೆ.
ಕಣ್ಣ ಮೇಲ್ಗಡೆ ಬಿಳಿಯಪರೆ ಮುಸುಕಿಯೊಮ್ಮೆಮ್ಮೆ

ತೆರೆಯೆ, ಕಣ್ಣಿನ ತೀವ್ರ ಕಾಂತಿ ಕುಗ್ಗಿದೊಡೆಯು
ಬರಮಿಂಚಿನಂತೆ ಮುಸಮುಸಕಾಗಿ ಹೊಳೆಯುತಿದೆ.
ತೊಳಲುತಿಹ ಜೀವವನು ನೊಂದಿರುವ ದೇಹವನು
ಸುರಿದಿರುವ ನೆತ್ತರನು ನೋಡಿ ರಾಮನ ಮನದಿ—
ಸರ್ವಲೋಕಶರಣ್ಯನಲ್ಲವೇ ದೇವರು—
ಕನಿಕರವು ಮೊಳೆಯಿತು. ಇವನು ಯಾರೇ ಇರಲಿ
ಇವನ ಸಲಹುವುದೆ ಸರಿಯೆಂದು ಯೋಚಿಸಿ ತನ್ನ
ಎಳೆತಳಿರ ತೆರದ ಕೋಮಲವಾದ ಬೆರಳುಗಳ
ಮೆದುವಾದ ಸೋಂಕಿಂದೆ ಮೆಲುಮೆಲನೆಯದ ತಟ್ಟಿ,
ಸತಿಗೆ ಮರುಗುವ ಕತದಿ ಇನಿಸು ದೈನ್ಯವ ತಳೆದ
ಇನಿಯ ನುಣ್ದನಿಯಿಂದೆ, ಪಕ್ಷಿಯನು ಎಬ್ಬಿಸಲು
ತೆಲುಗುಮಾತಿನಲಿ "ಲೇ ಪಕ್ಷಿ" ಎಂದುಸುರಿದನು.
"ಲೇಪಕ್ಷಿ"ಎನ್ನುವುದು ತೆಲುಗು; ಕನ್ನಡದೊಳದು
"ಏಳು ಪಕ್ಷೀ" ಎಂದು ಅರ್ಥವನು ಕೊಡುತಿಹುದು.
ಲೇ ಪಕ್ಷಿ ಎಂದು ಶ್ರೀರಾಮನೆಬ್ಬಿಸಲಾಗ
ಸೀತೆಯನು ಕೊಂಡೊಯ್ವ ಕಾಲದಲಿ ರಾವಣನ
ತಡೆದು ಹೋರಾಡಿ ದೇವಿಯ ಬಿಡಿಸುವರೆ ನೋಡಿ
ಮರಣಘಾತವ ಪಡೆದು ಬಿದ್ದು ಶ್ರೀರಾಮನಿಗೆ
ಸೀತಾಮ್ಮನವರ ಊಹದನ ತಿಳಿಸಲಿಕಾಗಿ
ತೀವ್ರಯಾತನೆಯನಾದರು ಸಹಿಸಿ ಜೀವವನು
ಧರಿಸಿ ಬಿದ್ದಿದ್ದಾ ಜಟಾಯು, ಪರಮಾತುಮನ
ಕರದ ಅಮೃತಸ್ಪರ್ಶದಿಂದಲುಂ, ಕಿವಿಗಿಳಿದ
ಸೊಗದಮಂಜುಳವಾಣಿಯಿಂದಲುಂ, ಬೇನೆಯನು
ಮರೆದು ಮೆಲ್ಲನೆ ಕಣ್ಣ ತೆರೆದು ನಡೆದುದ ಹೇಳಿ
ದೇವದೇವನ ಕಾರ್ಯದಲಿ ಜೀವವನು ತೊರೆದು

ಅವನಡಿಯೊಳೊಡಲನಿರಿಸಿದನು. ಬಲ್ಲಿರಿ ಇದನು.
ಆಮೇಲೆ ನಡೆದುದನು ರಾಮಾಯಣದೊಳಿಲ್ಲ
ಕೇಳಿತಿಳಿದಿರುವರು. ಜಟಾಯುವನು ದೇವರು
ಎಬ್ಬಿಸಲಿಕೆಂದು ಲೇಪಕ್ಷಿ ಎಂದಾಸ್ಥಲದಿ
ಜನರು ಒಂದೂರಕಟ್ಟಿ, ಅದನುಲೇಪಕ್ಷಿ
ಎಂದು ಕರೆದರು ; ಅದೇ ಲೇಪಾಕ್ಷಿಯಾಗಿಹುದು.

ಈ ಕತೆಯು ಕೇಳಿ ಯಾರೂ ರಾಮದೇವರು
ತೆಲುಗು ಮಾತಾಡುತಿದ್ದರೆ ಎಂದು ಕೇಳಿದಿರಿ.
ನಿಮಗೆ ನಮಗೆರಡು ಮೂರೇಮಾತು ಬರಬಹುದು ;
ದೇವರಿಗೆ ಬಾರದಿಹ ಮಾತುಂಟೆ? ಆ ಮೇಲೆ,
ದೇವರಂತಿರಲಿ, ಜಟಾಯುವನು ಎಬ್ಬಿಸಲು
ತೆಲುಗೇಕೆ, ಅವನಿಗೂ ತೆಲಗು ತಿಳಿಯುತಲಿತ್ತೆ ?
ಇದುಕೂಡ ಸರಿಯಾದ ಮಾತಲ್ಲ. ನಿದ್ರಿಪನ
ಎಬ್ಬಿಸುವುದಕೆ ಯಾವಮಾತೇನು ? ತಟ್ಟಿದರೆ
ಏಳುವನು ; ಜೊತೆಗೆ ಸುಮ್ಮನೆ ಮಾತಹೇಳುವರು.
ತೆಲುಗಿನಲಿ ಏಕೆ ಹೇಳಿದರು ಎಂದಚ್ಚರಿಯೆ ?
ತೆಲುಗು ಸೀಮೆಯಲಿ ಬಿದ್ದಿಹ ಪಕ್ಷಿಯನು ಕರೆದು
ಮಾತನಾಡಿಸುವುದಕೆ ತೆಲುಗುಮಾತನು ಬಿಟ್ಟು
ಇನ್ನಾವ ಮಾತನಾಡುವರು ? ಇನ್ನಾವುದನು
ಆಡಿದೊಡೆ ಅದಕೆ ತಿಳಿಯುವುದು ? ಅದರಿಂದಲೇ
ರಾಮದೇವರು ತೆಲುಗಿನಲಿ ಮಾತನಾಡಿದರು.
ರಾಮಾಯಣದಲಿ ಲೇಪಾಕ್ಷಿ ಎಂಬೀಮಾತು
ಇಲ್ಲವೆನೆ, ವಾಲ್ಮೀಕಿ ಮುಂದೆನಡೆದುದನೊರೆವ
ಅವಸರದಿ ಇದನು ಬಿಟ್ಟಿರಬೇಕು.

ಇನ್ನೊಂದು
ಇಂಥ ಹೆಸರಿಹುದು. ಚಿಕನಾಯಕನ ಹಳ್ಳಿಯನು
ಬಿಟ್ಟು ತುಮಕೂರ ಕಡೆ ಬರುವ ದಾರಿ ಅದೊಂದು
ಕಣಿವೆಯಲಿ ಬರುತಿಹುದು; ಅದನು ಮದಲಿಂಗನ
ಕಣಿವೆಯೆನ್ನುವರು. ಈ ಬಳಿಯ ಕತೆಯನು ಕೇಳಿ
ಯಾರಮನವಾದರೂ ಕರಗುವುದು. ಹಿಂದೆ ಬಹು
ವರುಷಗಳ ಹಿಂದೆ ಈ ಬಳಿಯ ಒಂದೂರಿನಲಿ
ಅಕ್ಕತಂಗಿಯರು ಹುಡುಗಿಯರಿಬ್ಬರಿದ್ದರು.
ಬಹಳ ಚೆಲುವೆಯರು. ಅವರಲಿ ಹಿರಿಯಹುಡುಗಿಯನು
ಅವರ ಮಾವನ ಮಗ, ಮದಲಿಂಗ ಎಂಬುವನು,—
ಮದಲಿಂಗ ಎನ್ನುವುದು ಇಟ್ಟಹೆಸರೋ, ಇಲ್ಲ
ಮದವಣಿಗ ಎನ್ನುವುದು ಮದಲಿಂಗನಾಯಿತೋ,
ನಾನರಿಯೆ—ಮದಲಿಂಗ ಮದುವೆಯಾದನು; ಕೆಲವು
ದಿನ ಕಳೆದಮೇಲೆ ಅವಳನು ಕರೆವುದಕೆ ಬಂದು
ಒಳ್ಳೇದಿನವ ನೋಡಿ ಹೊರಟಿಹನು. ಹೊಸದೆಂದು
ಹೆಂಡತಿಯ ಜೊತೆಗತ್ತೆ ನಾದಿನಿಯರೂ ಹೊರಟು
ಬರುತಿಹರು. ಮದಲಿಂಗ ಕಟ್ಟಾಳು; ನೋಡಲಿಕೆ
ಸಂತೋಷವಾಗುವುದು. ಅಗಲವಾಗಿರುವ ಎದೆ;
ಅಗಲವಾಗಿಹ ತುಂಬು ಮುಖ; ಹೊಳೆವ ಕಣ್ಣುಗಳು;
ನಕ್ಕನೆನೆ ತುಟಿಹಲ್ಲು ಕುಡಿಮೀಸೆಗಳ ಚೆಂದ
ಬಹುಚೆಂದ. ಹೆಂಗಸರು ಮೂವರೂ ಇವನನ್ನು
ಮೊದಲಿಂದ ಚೆನ್ನಾಗಿ ಬಲ್ಲವರು; ದಾರಿಯಲಿ
ಇವನೊಡನೆ ಹಾಸ್ಯಮಾಡುತ ಸರಸವಾಡುತ್ತ
ನಡೆಯುತಿರುವರು. ಇವನ ನಾದಿನಿ ಅಕ್ಕನನು
"ಅಕ್ಕಯ್ಯ ನೀನು ನಮ್ಮನು ಬಿಟ್ಟು ಹೋಗುವರೆ
"ಮನಸು ಬರುವುದೆ" ಎಂದು ಕೇಳಿದಳು. ಅಕ್ಕನಿಗೆ

ಕಣ್ಣಿನಲಿ ನೀರು ಚಿಮ್ಮಿತು; ಮದುವೆಯಾದವಳು
ಗಂಡನೊಂದಿಗೆ ಹೋಗಬೇಕು; ಆದರೆ ತಾನು
ಚಿಕ್ಕಂದಿನಿಂದ ಒಡನಾಡಿ ಜೊತೆಯಲಿ ಬೆಳೆದು
ಜೀವದಲಿ ಜೀವವೆಂಬಂತೆ ಮೆಚ್ಚಾಗಿದ್ದ
ತಂಗಿಯನು ಬಿಡಬೇಕು. ಅವಳು ತಂಗಿಯ ನುಡಿಗೆ
ಕಂಬನಿಯ ಸುರಿಸಿದಳು. ತಾಯಿ ಕಿರಿಯಳ ಕುರಿತು
" ನಾಳೆ ಗಂಡನ ಮನೆಗೆ ನೀ ಹೋಗದಿರುವೆಯಾ
" ಎಲ್ಲರೂ ಹೋಗುವರು. ಮನಸು ಬರುವುದು " ಎಂದು
ಹೇಳಿದಳು. ನನಗಾವ ಗಂಡನೂ ಬೇಡೆಂದು
ಹುಡುಗಿ ತಲೆಯನು ಒಂದುಕಡೆಗೆ ಹಾರಿಸಿ ಹುಬ್ಬ
ಗಂಟಿಕ್ಕಿ ಹೇಳಿದಳು. ಮದಲಿಂಗ ನಸುನಗುತೆ
" ಬಲ್ಲೆನೀ ಆಟಗಳ, ಎಲ್ಲರೂ ಹೀಗೆಯೇ
" ಬೇಡ ಬೇಡಾ ಎಂದು ಬಾಯಲ್ಲಿ ಹೇಳುವರು,
" ಯಾವನೋ ಬಂದು ಕರೆಯುವ ಮುನ್ನ ಓಡುವರು,
" ಹುಡುಗಿಯರ ಆಟವೇ ಹೀಗೆ " ಎಂದನು. ಅದಕೆ
ಹುಸಿನಗೆಯ ಮುಖದ ಹೊಳೆಹೊಳೆವ ಕಣ್ಣಿನ ಹುಡುಗಿ
" ಭಾವನಿಗೆ ಮದಿವ್ಯಾಗಿ ಮೂರು ದಿನವಾಗಿಹುದು,
" ಆಗಲೇ ಎಲ್ಲವನು ತಿಳಿದಿರುವನಂತೆ, ಅಹ
" ಎಷ್ಟುಗಟ್ಟಿಗನೊ " ಎಂದುಸುರಿದಳು. ಮಧ್ಯಾಹ್ನ;
ಎಲ್ಲೆಡೆಯು ಬೆಳಕು ತುಂಬಿಹುದು; ಸಂತಸದದಿನ;
ಹುಡುಗ ಹುಡುಗಿಯರು ಎಲೆ ಅಡಿಕೆ ಅಗಿದಿರುವರು;
ಹುಡುಗನಿಗೆ ಸರಸದಲಿ ಆಸೆ; ಈ ನಾದಿನಿಯೊ
ಸರಸದಲಿ ಪಂತವನು ಹೂಡಿ ಮಾತಾಡುವಳು;
ಪಂತವನು ಹೂಡಿ ಹರೆಯದ ಹುಡುಗಿ ನುಡಿಸುತಿರೆ
ಪಂತವಾಡದ ಜವ್ವನಿಗನುಂಟೆ? ಮದಲಿಂಗ

ನಾದಿನಿಯ ಕಡೆ ನಗುತೆ "ಬಲ್ಲೆನೋ ಇಲ್ಲವೋ
"ನಿನಗೆ ತಿಳಿಯುವುದೆಂತು? ಅಕ್ಕನನು ಬಿಡುವುದಕೆ
"ನಿನಗಿಷ್ಟವಿಲ್ಲದಿರೆ ಬಿಡದೆ ನೀನೂ ಒಡನೆ
"ಬಾ ಆಗ ತಿಳಿಯುವುದು" ಎನಲು ನಾದಿನಿ ನಾಚಿ
ತಲೆಬಾಗಿ ತಾಯ ಕಡೆ ನೋಡಿದಳು. ಆಮೇಲೆ
ಮಾತನಾಡದೆ ಎಲ್ಲ ದಾರಿ ನಡೆಯುತಲಿಹರು.
ಅರ್ಧ ಹರಿದಾರಿ ನಡೆಯುವ ಮುನ್ನ ಹಿರಿಯಳು
"ಅಮ್ಮ, ತಂಗಿಯನೆನ್ನ ಜೊತೆಗೇ ಕಳುಹಿಸಮ್ಮ;
"ಇವರು ಒಪ್ಪುವರು; ಜೊತೆಯಲಿ ಬೆಳೆದ ತಂಗಿಯನು
"ಬಿಟ್ಟು ನಾನಿರಲಾರೆ; ಎನ್ನ ಕೈ ಹಿಡಿದವರು
"ಇವಳ ಕೈಯನು ಹಿಡಿದು ಸಾಕಲಾರರೆ?" ಎಂದು
ಗೋಗರೆದು ಕೇಳಿದಳು. ಮದಲಿಂಗನಿಗೆ ಆಸೆ
ಮನದಿ ನಿಜವಾಗಿ ಹುಟ್ಟಿತು. ಹುಡುಗಿ ಬಹು ಚೆಲುವೆ.
ತುಟಿಯು ರಂಗು; ಮೂಗು ಮೂಗುತಿ; ಬಾವಲಿಯು
ಕಿವಿ; ಹಣೆಯು ಕುಂಕುಮದ ಬಟ್ಟು; ಭಾರದ ಹೆರಳು;
ಹೆರಳಿನಲಿ ತೊಟ್ಟ ಮಲ್ಲಿಗೆಹೂವು, ಕೊಪ್ಪು: ಇವ
ಕಂಡು ಮನಸೋತನವನು; ಅತ್ತೆಯನು ನೋಡಿ
ಸುಮ್ಮನಿರ್ದನು. ಅವನ ನಾದಿನಿ ತಾಯ ಕಡೆ
ನೋಡು ನೋಡುತೆ ಸುಮ್ಮನಿಹಳು. ಇವರಿಬ್ಬರಿಗೆ
ಮನ ಒಬ್ಬರೊಬ್ಬರಲಿ ನೆಟ್ಟಿತು. ಇದು ಎಂತು
ಇಷ್ಟು ಬೇಗದೊಳಾಯಿತೆನಲು, ನಾನರಿವೆನೆ?
ಆಗಸದಿ ವಾಯುಮಂಡಲದ ರಾಜರ ತೆರದೆ
ಗೃಧ್ರಗಳು ಗರಿಹರಡಿ ಹಾರುತಿರುವುದ ನೀವು
ನೋಡಿರುವಿರೋ? ಹೆಣ್ಣುಗಂಡು ಗರಿಯನು ಹರಡಿ
ಮೇಲುಮೇಲಕೆ ಇನ್ನು ಮೇಲ್ಗಡೆಗೆ ಹಾರುವುವು;

ಒಂದರೊಡನೊಂದು ಮಾತಾಡುವುವೆ? ಸನ್ನೆಯಲಿ
ಆಸೆಯನು ತೋರುವುವೆ? ಒಮ್ಮೊಮ್ಮೆ ಒಂದೊಂದು
ನೀಳವಾಗಿಹ ತಮ್ಮ ಸೀಳುದನಿಯಲಿ ಕೂಗಿ
ಏರಿದೆವು ಎಂದು ಜಯಘೋಷವನು ಹಾಕುವುವು.
ಇದ ನೀವು ನೋಡುವಿರಿ ಕೇಳುವಿರಿ; ಆ ಮಧ್ಯೆ
ಗಂಡುಹೆಣ್ಣಿಗೆ ಮೋಡದಿಂದ ಮೋಡಕೆ ಹರಿವ
ತೆಳುಮಿಂಚಕಿಡಿಯಂತೆ ಮನದಾಸೆ ಹರಿಯುವುದ
ನೋಡಿರುವಿರಾ? ಮಧ್ಯೆ ಹಾರುವುದ ನಿಲ್ಲಿಸುತೆ
ಅವು ಎರಡು ಒಂದು ಪರ್ವತರ ತಲೆಮೇಲಿಳಿದು
ಕೆಳೆಯ ಬೆಳೆಸುವುವು. ಇದು ದೇವದೇವನ ಮಾಯೆ.
ಮದಲಿಂಗನಿಗೆ ಅವನ ನಾದಿನಿಗೆ ಯಾವಾಗ
ಮನದೊಲುಮೆಯಾಯಿತೋ ಎಂತಾಯಿತೋ ನಾನು
ಏನರಿವೆ? ಓರೊರ್ವರಿಗೆ ಮನವತೆತ್ತವರು
ತಾಯಿ ಏನೆಂಬಳೋ ಎಂದು ಯೋಚಿಸುತಿಹರು.
ನಾಲ್ಕು ಹೆಜ್ಜೆಯ ನಡೆದು ತಾಯಿ "ನಿಮ್ಮಂತವರು
"ತುಂಬುಹರೆಯದ ಹೆಂಡಿರಿಬ್ಬರನು ಆಳುವುದು
"ಯಾರಿಂದಲಾದೀತು ಯಾವ ಮಾತಿದು ಬಿಡು"
ಎಂದು ಹಿರಿಯವಳಿಗೆಂದಳು. ಅದಕೆ ಮದಲಿಂಗ
"ಅತ್ತೆಮ್ಮ, ನಾನೇನು ಮುದುಕನೇ; ಹುಡುಗಿಯರು
"ಸಂಪ್ರದಾಯದ ಮಕ್ಕಳಲ್ಲವೇ; ನೀಕೊಡಲು
"ಇವಳನೂ ನಾಸಾಕಲಾರೆನೇ; ಇಬ್ಬರೂ
"ಎನಗೆ ಸಂಸಾರವನು ಮಾಡರೇ; ಎಲ್ಲಿಯೂ
"ಒಬ್ಬ ಗಂಡಗೆ ಹೆಂಡಿರಿಬ್ಬರಿರರೇ?" ಎಂದು
ತವಕದೊಳಗಾಡಿದನು. ಇಷ್ಟು ಹೊತ್ತಿಗೆ ಅವರು
ಈ ಕಣಿವೆ ಇರುವಬಳಿ ಸೇರಿದರು. ಕಣಿವೆ ಇದು

ಬಹು ಎತ್ತರದ ಒಂದು ಗುಡ್ಡದಡಿಯನು ಬಳಸಿ
ಮತ್ತೆ ಆ ಕಡೆಗೆ ಸೇರುವುದು. ಬುಡದಲಿ ದಾರಿ
ಒಂದು ಹರಿದಾರಿಯಾಗುವುದು. ಗುಡ್ಡವನೇರಿ
ಆಕಡೆಗೆ ಇಳಿದು ದಾರಿಯು ಮತ್ತೆ ಸೇರುವರೆ
ಅದರೊಳಾರರಲೊಂದು ಪಾಲಿಹುದು. ಕೆಚ್ಚೆದೆಯ
ಗಡುಸುಗಾರರು ಕೂಡ ಬಳಸಿಯೇ ಹೋಗುವರು;
ಗುಡ್ಡವೇರುವುದಷ್ಟು ಕಷ್ಟ. ಹುಡುಗಿಯರಮ್ಮ
"ಸಂಪ್ರದಾಯದ ಮಕ್ಕಳಾದರೇನಪ್ಪಯ್ಯ,
"ಬಾಳುವರೆ ಸರಿಯಾದ ಗಂಡನೇಯಿರಬೇಕು.
"ನೀನಿವಳನೂ ಮದುವೆಯಾಗಲೆಳಸುವುದಾಗೆ
"ಹಿಂದು ಹಿಂದಕೆ ನಡೆದು ಹತ್ತಿ ಗುಡ್ಡವನೇರಿ
"ಆ ಕಡೆಗೆ ಇಳಿದು ದಾರಿಯು ಸೇರೆ ಒಪ್ಪುವೆನು.
"ಏರಿ ಇಳಿಯುವೆಯು" ಎಂದಳು. ಅವಳು ಹೇಳಿದುದು
ಮೂರುಪಾಲಿಗೆ ಸರಸ; ಸುಮ್ಮನಿರದಾಡಿದಳು.
ಮದಲಿಂಗ ಕಟ್ಟಾಳು; ಹರೆಯದವ; ಹುಡುಗಿಯನು
ಪಡೆಯುವುದು ಸಾಧ್ಯವೆನೆ ಪಡೆವುದಕೆ ಆಸೆ ಇದೆ;
ಅವರಮ್ಮ ಬೇರೆ ಈ ಪಂತವನು ಹೂಡಿದಳು.
ಪಂತವನು ಹೂಡಿ ಹೆಂಗಸು ಮಾತನಾಡಿಸಲು
ಪಂತಕೊಪ್ಪದ ಜವ್ವನಿಗನುಂಟೆ? ಮದಲಿಂಗ
"ಒಪ್ಪಿದೆನು; ಗುಡ್ಡವನು ಹಿಂದು ಹಿಂದಕೆ ಏರಿ
"ಇಳಿದು ಬರುವೆನು. ಆಗ ಹುಡುಗಿಯನು ಕೊಡು ಎನಗೆ.
"ದಣಿದುನಾಬರುವ ವೇಳೆಗೆ ಇವಳ ಕೈಯಿಂದ
"ಈ ಚೊಂಬುನೀರಹೊಯ್ಯಿಸಿ ಕೈಗೆ ಇವಳಿಂದ
"ಕುಡಿವುದಕೆನೀರ ಕೊಡಿಸು" ಎಂದು ಒಂದುಸಲ
ನಾದಿನಿಯ ಕಡೆ ನೋಡಿ ಬೆನ್ನಗುಡ್ಡದ ಕಡೆಗೆ

ತಿರುಗಿಸುತ ಏರ ತೊಡಗಿದನು. ಬಹುಬಿಸಿಲು ;
ಬಹು ಎತ್ತರದ ಗುಡ್ಡ ; ಅದನೇರತೊಡಗಿದನು.
ಸ್ವಲ್ಪ ಹತ್ತಿದಮೇಲೆ ಅತ್ತೆ ಅಳಿಯನ ನೋಡಿ
ಈ ಬಿಸಿಲಿನಲಿ ಹತ್ತಿ ಇಳಿದು ಇವ ಬದುಕುವನೆ
ಎಂದು ಬಹುಭಯದಿಂದ "ಏರಿದುದು ಸಾಕಪ್ಪ.
"ಇಳಿದು ಬಾರಪ್ಪಯ್ಯ" ಎಂದು ಹುಯಿಲಿಟ್ಟಳು.
ಮದಲಿಂಗ "ಇಳಿದು ಆಕಡೆ ಬರುವೆ, ಕುಡಿವುದಕೆ
"ನೀರಿಟ್ಟುಕೊಂಡಿರಿ" ಎಂದು ನುಡಿಯುತ ಅಂತೆ
ಏರಿಏರಿ ಹೋದ. ತಾಯಿಯೂ ಮಕ್ಕಳೂ
"ಅಯ್ಯೊ ಸರಸದ ಮಾತು ವಿರಸವಾಯಿತು" ಎಂದು
ಬೇಗಬೇಗನೆ ನಡೆದು ಗುಡ್ಡದಡಿಯನುಬಳಸಿ
ಆ ಕಡೆಯ ಸೇರಿದರು. ಬಿಸಿಲಿಂದೆ ಬಹುದಾಹ.
ಇರುವುದೊಂದೇ ಚೊಂಬುನೀರು. ಅಲ್ಲಿಲ್ಲಿಯೂ
ನೀರೊಂದು ತೊಟ್ಟಿಲ್ಲ. ಸೋತಿರುವ ಅಮ್ಮನಿಗೆ
ಹಿರಿಮಗಳು "ಅಮ್ಮ ನೀ ಸ್ವಲ್ಪ ಕುಡಿ" ಎಂದಳು.
ಕಿರಿಮಗಳು "ತಡೆಯಮ್ಮ, ನಾವಿಷ್ಟು ಸೋತಿರಲು
"ಭಾವನಿನ್ನೆಷ್ಟು ಸೋಲುವನೊ, ಅವನಿಗೆ ಕೊಟ್ಟು
"ಮಿಕ್ಕದ್ದ ನೀಕುಡಿಯುವೆಂತೆ" ಎಂದಳು ; ತಾಯಿ
"ಅಮ್ಮಯ್ಯ, ನೀನು ಹೇಳುವುದು ದಿಟ, ಗುಡ್ಡವನು
"ಬಳಸಿ ಬಂದಿಹ ನಮಗೆ ಇಷ್ಟು ದಾವರವಾಗೆ
"ಏರಿ ಬರುವನಿಗೆಷ್ಟು ದಾವರವೊ! ಬರಲಮ್ಮ,
"ಅವನ ಕೈಗಿಷ್ಟು ನೀರನು ಹಾಕು, ಕುಡಿವುದಕೆ
"ಕೊಡು, ಮಿಕ್ಕ ನೀರ ನಾ ಕುಡಿಯುವೆನು" ಎಂದಳು.
ಮದಲಿಂಗ ಬರುವುದಕೆ ಅವರಿಂತು ಕಾದಿಹರು.
ಈಗಲೇ ಕತೆ ಬಹಳ ದೊಡ್ಡದಾಯಿತು ಇದು ;

ಇನ್ನವನು ಹತ್ತಿದುದು ಇಳಿದುದನು ಬಣ್ಣಿಸೆನು.
ನಡುಬೇಸಗೆಯಲಿ ನಡುಹಗಲಿನಲಿ ಗುಡ್ಡವನು
ಹಿಂದು ಹಿಂದಕೆ ಹತ್ತಿ ಹಿಂದುಹಿಂದಕೆ ಇಳಿದು
ದಾರಿಯನು ಸೇರುವರೆ, ಬಳಲಿದನು, ಬೆವರಿದನು,
ಬಸವಳಿದು ಸೋತನೆಂಬುದ ನಿಮಗೆ ನಾನೀಗ
ಹೇಳಿಕೊಡಬೇಕೆ? ಮದಲಿಂಗ ಬಹು ಬಾಯಾರಿ
ಬಹು ಹೊತ್ತು ಕಳೆದು ದಾರಿಗೆ ಬಂದುಸೇರಿದನು.
ಗಂಟಲಲಿ ತೇವ ಒಣಗಿದೆ. ಜೀವ ತೇಲುತಿದೆ.
ದಾರಿಯನು ಸೇರಿ ನಾದಿನಿಯಕಡೆ ನೋಡಿದನು.
ಮಾತನಾಡಲು ಬಾಯಿಬರದು ; ಸನ್ನೆಯಮಾಡಿ
ನೀರಕೇಳುತೆ ಹುಡುಗ ಗೆಲ್ಲ ಸಂತಸದಿಂದ
ಸ್ವಲ್ಪ ನಗುವನು ತೋರಿ ಅತ್ತೆಯನು ನೋಡುತ್ತೆ
ಕುಡಿವುದಕೆ ಬೊಗಸೆಹಿಡಿದನು. ಅವನ ನಾದಿನಿ
ತನ್ನ ಚೆನ್ನಿಗ ಗೆದ್ದ ಸಂತೋಷ ಕಣ್ಣಿನಲಿ
ಗೆದ್ದವನಿಗೊಂದು ಮರ್ಯಾದೆಯನು ನೀಡಲಿಕೆ
ಮುತ್ತುಗಳ ತಂದಂತೆ ಕಣ್ಣೀರು ತಲೆದೋರೆ
ಬಹು ತವಕಪಡುತೆ ಚೊಂಬಿನ ನೀರ ತಂದಳು.
ಅವನ ಕೈಯಲಿ ಅದನು ಸುರಿಯೆ ಬಗ್ಗಿಸಿದಳು.
ಸಂತಸದ ಆತುರದಿ ಅದಬಗ್ಗಿಸುವುದರಲಿ
ಕೈಜಾರಿ ಅದನು ಕೆಡವಿದಳು. ನೀರೆಲ್ಲವೂ
ಚೆಲ್ಲಿಹೋಯಿತು. ದಾಹದಿಂದುಸುರ ತೇಲುತಿರೆ
ಮದಲಿಂಗ ಖೇದದಿಂದೊಮ್ಮೆ ಅವಳನು ನೋಡಿ
ಅಲ್ಲಿಮಲಗಿದನು. "ಅಯ್ಯೋ" ಎಂದು ಅವರತ್ತೆ
ಬಂದು ಬಳಿಯಲಿ ಕುಳಿತು ಸೆರಗಿನಲಿ ಬೀಸಿದಳು.
ಹಿರಿಹುಡುಗಿ ಎನ್ನ ಗಂಡನಕೊಂದೆ ನೀನೆಂದು

ಅಮ್ಮನನು ಬಯ್ದಳು ; ತಂಗಿಯನು ಬಯ್ದಳು ;
ಎನ್ನ ಸುಖವನು ನೋಡಿ ಧರಿಸಲಾರದೆ ನೀನು
ಇವನ ಕೊಲ್ಲಲು ನೀರ ಚೆಲ್ಲಿದೆಯ ಎಂದಳು.
ತಂಗಿ ಒಂದಾದರೂ ಮಾತನಾಡದೆ ಚೊಂಬ
ಹಿಡಿದೆತ್ತಿ ನೀರ ತರಬೇಕೆಂದು ಹತ್ತಿರದ
ಊರು ಎಲ್ಲಿಹುದೊ ಎಂದೋಡಿದಳು. ಮದಲಿಂಗ
ಅವಳು ಬಹ ಮುನ್ನವೇ ಮಡಿದನಾ ಕಲ್ಲಿನಲಿ.
ಇನ್ನಾದುದನು ಹೇಳಲೇಕೆ? ಬೆಳೆಯುವ ಪೈರು
ಭಾದ್ರಪದದೊಳೆ ಸುಟ್ಟು ಹೋಯಿತು. ಮದಲಿಂಗ
ಆ ಕಣಿವೆಗಂದು ಹೆಸರನು ಕೊಟ್ಟ. ಆ ದಿನದ
ಖೇದವನು ನೋಡಿ ಸಂಕಟಪಟ್ಟ ಕಲ್ಲುಗಳು
ಈಗಳೂ ಮರುಗುವವ್ರೊಲಿದೆ. ಇಲ್ಲಿ ಮದಲಿಂಗ
ಈಗಳೂ ದಾಹದಲಿ ಅಲೆಯುತಿಹನೆಂದು ಜನ
ಆಡಿಕೊಳ್ಳುವರು ; ಒಮ್ಮೊಮ್ಮೆ ಕೆಲಕೆಲವರು
ಕಾಣುವನೊ ಏನೊ ಎನ್ನುವ ಭಯದಿ ನಡೆಯುತ್ತ
ಕಂಡನೆಂಬಂತೆ ನೆನೆಯುವರು ಭಯಪಡುವರು.

ತೀರ್ಥಹಳ್ಳಿಯ ಸಮೀಪದಲೊಂದು ಹಳ್ಳಿ ಇದೆ.
ಬಂದಳಿಕೆ ಎಂದು ಕರೆಯುವರದನು. ಈ ಒಂದು
ಊರ ಮಾತನು ಹೇಳಿ ಮುಗಿಸುವೆನು. ಮದಲಿಂಗ
ಸತ್ತಮಾತನು ಕೇಳಿ ನೀವು ಮರುಗತಲಿರಲು
ಮಾತನಿಲ್ಲಿಸಲೇಕೆ? ಹಿಂದೆ ಪರಮೇಶ್ವರನು
ಪಾರ್ವತಿಯ ಜೊತೆಗೆ ಬಹುಕಾಲ ಸಂತೋಷದಲಿ
ಸಂಸಾರಮಾಡಿ ಬೇಸರದಿಂದ ಒಂದು ದಿನ
ಇವಳ ಬಿಟ್ಟೆಲ್ಲಾದರೂ ಹೋಗಿ ಕೊಂಚ ದಿನ
ಇರಬೇಕು ಎಂದು ಸರಿರಾತ್ರಿಯಲಿ ಹಾಸಿಗೆಯ

ತೊರೆದು ಪೊರಮಟ್ಟನು. ಸಂಸಾರವಮಾಡಿರುವ
ಎಲ್ಲ ಜನಕೂ ಇಂತ ಆಸೆಬರುವುದು ಒಮ್ಮೆ;
ಬಿಟ್ಟು ಕೆಲಕಾಲ ಇರೆ ಮತ್ತೆ ಮನೆ ಮಠವೆಂದು
ಆಸೆಯಾಗುವುದು. ಪರಮೇಶ್ವರನು ಪೊರಮಟ್ಟು
ಗುರುತುಸಿಕ್ಕದವೊಲು ಕಿರಾತವೇಷವ ಧರಿಸಿ
ಒಂದುಕಾಡನು ಹೊಕ್ಕು ತಿರುಗಾಡುತಿರುವನು.
ಭಾರತದೊಳರ್ಜುನನು ಶಿವನೊಡನೆ ಹೋರಾಡಿ
ಪಾಶುಪತವನು ಪಡೆದ ಕತೆಯು ಕೇಳಿರುವಿರಲೆ;
ಶಿವನಿಂತು ಕಾಡಿನಲಿ ಅಲೆಯುತಿರುವಾಗಲೇ
ಅದುನಡೆದುದು. ಇತ್ತ ಪಾರ್ವತೀದೇವಿಯುರು
ನಿದ್ದೆಯಲಿ ಹೊರಳಿ ಪತಿ ಇರುವಕಡೆ ಕೈಹಾಕಿ
ಬರಿಯ ಹಾಸಿಗೆ ಕೈಗೆಸಿಕ್ಕೆ ಏನಿದು ಎಂದು
ಎದ್ದು ನೋಡಿದರಂತೆ. ಪತಿ ಓಡಿಹೋಗಿಹನು!
ರಾಮೇಶ್ವರಕೆ ಹೋದರೂ ಶನೇಶ್ವರ ಬಿಡನು,
ರಾಮಯಣ ಓದಿದರು ಮನೆಯವಳು ಬಿಡದಿಹಳು,
ಎಂದು ಜನವೆಂಬಂತೆ ಪಾರ್ವತಾಂಬಾ ಅವರು
ಎನ್ನ ಬಿಟ್ಟವರು ಹೋಗಲು ಇವರ ಕಷ್ಟಸುಖ
ನೋಡುವರು ಯಾರೆಂದು ಹಿಂದೆಯೇ ಹೊರಟರು.
ಪರಮೇಶ್ವರನು ಕಾಡುಸುತ್ತಿ ಈ ತಾಣವನು
ಸೇರುವಂದಿಗೆ ಅವನನಾಕೆ ಹಿಡಿದರು. ಹಿಂದೆ
ಸಪ್ಪಳಾದುದಕೇಳಿ ಪರಶಿವನು ಹಿಂದಿರುಗಿ
ನೋಡೆ ಪಾರ್ವತಿದೇವಿ! ಬಿಟ್ಟೋಡಿಬಂದಿರಲು
ಇಲ್ಲಿಗೂ ಬಂದಳಿವಳೆಂದು ಬೇಸರದಿಂದ
"ಬಂದಳೀಕೆ" ಎಂದು ತನಗೆ ತಾನೆಂದನು.
(ಇವಳು ಎನ್ನುತಿ ತನ್ನ ಮಕ್ಕಳನು ಹೆತ್ತವಳ

ಏಕವಚನದಲಿ ಕರೆಯುುವುದು ತಿಳಿದವರಲ್ಲಿ
ಮುರ್ಯಾದೆಯುಲ್ಲ.) ಪರಮೇಶ್ವರನು ಪಾರ್ವತಿಯು
ಜೊತೆಯೊಳಾಮೇಲೆ ಕಾಡಿನಲಿ ವಿಹರಿಸುತಿರ್ದು
ಪಾರ್ವತೀದೇವಿ ತನ್ನನು ಬಿಡದೆ ಬೆನ್‌ಹತ್ತಿ
ಬಂದುದೇ ಸರಿಯೆಂದು ತಿಳಿದರು; ಅದಂತಿರಲಿ.
ಬಂದಳೀಕೆ ಎಂದು ದೇವನಂದುಸುರಿದಾ
ತಾಣದಲಿ ಒಂದು ಊರಾಯ್ತು. ಆದ ಜನರೆಲ್ಲ
ಬಂದಳಿಕೆ ಬಂದಳಿಕೆ ಎಂದು ಹ್ರಸ್ವವಮಾಡಿ
ಕರೆಯತೊಡಗಿದರು. ಆ ಊರಿಗದೆ ಹೆಸರಾಯ್ತು.

ರಾಮಾಯಣದಲಿ ಒಡೆಯನ ಕಾರ್ಯದಲಿ ಪಕ್ಷಿ
ತೋರಿದತಿಶಯಭಕ್ತಿ, ರಾಮದೇವರ ಕರುಣೆ;
ಆಸೆಕ್ಕೈಸೇರಿರುವ ಸಂತಸದ ಮಧ್ಯದಲಿ
ಬದುಕು ಮುಗಿಯುುವ ಬಾಳ ಶೋಕದಾವರ್ತ; ಜನ
ಸಂಸಾರದಲಿ ಬರುವ ಬೇಸರನು ದೇವರಿಗೆ
ಅನ್ವಯಿಸಿ ಹಾಸ್ಯಮಾಡುವ ರೀತಿ; ಇದನೆಲ್ಲ
ಈ ಮೂರು ಹೆಸರ ಕತೆಯಲಿ ನೋಡುವಿರಿ ನೀವು.
ಇದರಿಂದ ನಮ್ಮ ನಾಡಿನ ಜನದ ಮನವೆಷ್ಟು
ಎಳಸಾದುದೆಂಬುದನು ಸರಳವೆಂದೆಂಬುದನು
ಅರಿಯಬಹುದಲ್ಲವೆ? ಇನ್ನಿಂತಹೆಸರುಗಳು
ಇವೆ ಬೇರೆಕಡೆಗಳಲಿ; ನಾನು ಕೆಲವನುಬಲ್ಲೆ;
ನಿಮಗಿನ್ನು ಕೆಲವು ತಿಳಿದಿರಬಹುದು; ಹೇಳಿದರೆ
ಕೇಳುವುದಕೆನಗಾಸೆಯುಂಟು; ನಿಮಗಾಸೆ ಇರೆ
ಎನಗೆ ತಿಳಿದಿರುವ ಇನ್ನೂ ಬೇರೆಕತೆಗಳನು
ಇನ್ನು ಯಾವಾಗಲಾದರು ಮತ್ತೆ ಹೇಳುವೆನು.

## ನೀತಿ

ಹೊಲೆಯನೆನ್ನುತೆದೂರ
 ಹಾರಬೇಡ.
ಹೊಲೆಬರದು ಹೊರಗಿಂದೆ
ಒಳಗಡೆಯೆ ಇಹುದೆಂದು
ತಿಳಿದ ದಾಸರು ಎಲ್ಲ
 ಸಾರಿರುವರು.
ಹೊಲೆಯನನು ಹೊಲೆಯೆಂದು
 ದೂರಬೇಡ.

ಇತರರೇಳ್ಗೆಯ ನೋಡಿ
 ಕರುಬಬೇಡ.
ಜಗದೊಳಾರುಂ ನಿನಗೆ
ಮಿಗಿಲಾಗಬಾರದೆನೆ
ಸೊಗಸಾದ ಗತಿಬಂತು
 ಹರಿಸೃಷ್ಟಿಗೆ.
ಮತಿಯೊಳಾರಯಿಸಲಿದ
 ಅರಿವೆ ನೀನೆ.

ಆಸೆಬೇಡಂಬನಿಗೆ
 ತ್ಯಾಗವಿಲ್ಲ.
ಹಸಿವರಿತು ತಡೆದವನ
ಋಷಿ ಯೋಗಿ ಎನ್ನುವರು
ಹಸಿವನರಿಯದೆ ಇರಲು
 ರೋಗಿಯವನು.
ಆಸೆಯಿಂ ಗಳಿಸಿಬಿಡೆ
 ತ್ಯಾಗವಹುದು.

ಜಾತಿ ಬರಿಹುಟ್ಟಿಂದೆ
ಬರುವುದಿಲ್ಲ.
ಮೇಲಾದ ನಡತೆಯಿಂ
ಮೇಲಹುದು ಜಾತಿಯುಂ
ಕೀಳುನಡೆಯಿಂ ಜಾತಿ
ಕಿರಿದಪ್ಪುದು.
ನೀತಿಯನು ಬಿಡದಿಹುದು
ಹಿರಿಯ ಜಾತಿ.

ಬದುಕಲಾರದೆ ಬಾಳ
ಹಳಿಯಬೇಡ.
ಈಸಬೇಕು ಇದ್ದು
ಜೈಸಬೇಕು ಎಂದು
ದಾಸರಾಡಿದ ಮಾತ
ತಿಳಿದು ಬದುಕು.
ಎದೆಮಾಡಿ ತಾನುಸವ
ನುಳಿದು ಬದುಕು.

ಒಡಲೊಳಗೆ ಹರಿಯಿಹುದ
ಮರೆಯಬೇಡ.
ಸತ್ಯದಧಿದೇವತೆ
ನಿತ್ಯನಿನ್ನೊಳಗಿಹನ
ಅತ್ಯಾಚರಣೆಯಿಂದೆ
ಮರುಗಿಸದಿರು.
ಗುಡಿಯಪ್ಪುದೊಡಲಿದು
ಹರಿಯೆ ದೈವ.

ಜನಪೊಗಳದೆಂದು ನೀ
ಮರುಗಬೇಡ.
ಪೊಗಳುವುದು ಪಿರಿದಲ್ಲ
ತೆಗಳುವುದು ಪಿರಿದಲ್ಲ
ನೆಗಳಲೆಲ್ಲಕೆ ಪಿರಿದು.
ಅರಿದು ನಿಜವ
ಮನದ ಅಭಿಮಾನವನು
ತೊರೆ ಜವದಲಿ.

ಆಸೆಬಿಡು ಎನ್ನುವವ
ಮರುಳನಹುದು.
ಈಶನಡಿದಾವರೆಯ
ಆಶಿಸದ ಮನುಜನಿಗೆ
ಲೇಸಪ್ಪುದೆಂತುಟೋ
ಒರೆಯುಲವನು.
ಆಸೆಯನು ಒಳ್ಳಿದಕೆ
ತಿರುಹಬೇಕು.

ಕಿರಿದೆಂದು ದೋಷವನು
ಎಸಗಬೇಡ.
ಕಿರಿದಾದ ದೋಷವೇ
ಪಿರಿದಾದ ಹಾನಿಯನು
ತರುವಂತೆ ಜೀವನದಿ
ಮಸಗಬಹುದು.
ಹರಿಯ ಸೂತ್ರವನರಿಯೆ
ಅಸದಳವಲೆ.

ದೈವಕೊಟ್ಟುದ ಕೊಡದೆ
ಹುಗಿದಿಡದಿರು.
ಮಳೆಯಾಗಿ ಸುರಿದ ಜಲ
ಹೊಳೆಯಾಗಿ ಸಾಗರಕೆ
ಇಳಿಯೆ ಕರೆಯಲು ಮತ್ತೆ
ಮುಗಿಲಪ್ಪುದು.
ಆವುದಲ್ಲಿಯೆ ನಿಲಲು
ಮಿಗೆ ಕೆಡುವುದು.

## ತ್ಯಾಗಭೋಗ

ಸುಖದ ಮಧ್ಯದೊಳಿರ್ದು ಹರಿಯೊಳರ್ಪಿಸೆ ಭೋಗ
ಸುಖಕೆಲ್ಲ ಹರಿಮಿಗಿಲು ಎಂದು ತ್ಯಜಿಸಲು ತ್ಯಾಗ
ಹರಿಯಿತ್ತುದೆಲ್ಲವೂ ಒಳ್ಳಿತೆಂದೆನೆ ಭೋಗ
ಹರಿಬೇಕು ಹರಿ ಇತ್ತುದೆನಗೆ ಬೇಡೆನೆ ತ್ಯಾಗ
ಪರಮಾತ್ಮನೆನ್ನನೂ ಗಣಿಸುತಿಹನೆನೆ ಭೋಗ
ಪರಮಾತ್ಮನೆಲ್ಲಿ ನಾನೆಲ್ಲಿ ಎಂದೆನೆ ತ್ಯಾಗ
ಬಾಳು ಪರಸುಖವಸೇರಲು ದಾರಿಯೆನೆ ಭೋಗ
ಬಾಳು ಪರಸುಖವಲ್ಲವೆಂದು ಗಣಿಸಲು ತ್ಯಾಗ
ದಾರಿನಡೆಯುತೆ ಸೊಗಸನೋಡಿ ಮೆಚ್ಚಲು ಭೋಗ
ದಾರಿಮುಗಿದೆಂದು ಫಲಬರುವುದೋ ಎನೆ ತ್ಯಾಗ
ಪ್ರಣವವಕ್ಷರಮಾಲೆಯಾಗಿ ತೋರ್ಪುದು ಭೋಗ
ಪ್ರಣವದೊಳಗಕ್ಷರಗಳೆಲ್ಲವಡಗಿರೆ ತ್ಯಾಗ
ಸೂರ್ಯರಶ್ಮಿಯು ಬಿಡಿಸಿ ಬಣ್ಣಮಾಡಲು ಭೋಗ
ಸೂರ್ಯರಶ್ಮಿವೊಲು ಬಣ್ಣಗಳ ಸೇರಿಸೆ ತ್ಯಾಗ
ರಾಗದಾಲಾಪನೆಯಕೇಂದ್ರಭಾಗವು ಭೋಗ
ರಾಗದಾದ್ಯಂತ್ಯಗಳ ಸರಳಭಾವವು ತ್ಯಾಗ
ಸೃಷ್ಟಿ ಹಗಲಲಿಧರಿಪ ವರ್ಣವಸ್ತ್ರವು ಭೋಗ

ಸೃಷ್ಟಿ ಇರುಳಲಿ ಹೊದೆವ ನೀಲವಸನವು ತ್ಯಾಗ
ಕೂಸಿನಾಟದಿನಲಿವ ನೂರುಚಳವಳ ಭೋಗ
ಕೂಸುನಿದ್ರೆಯ ಕರದಿ ನೆಮ್ಮಿನಿಲುವುದು ತ್ಯಾಗ
ಎಲ್ಲವನು ತೆರೆದಿಡುವ ಸೂರ್ಯತೇಜವು ಭೋಗ
ಎಲ್ಲವನು ಮರೆಯಿಸುವ ತಾರೆಗಳಪ್ರಭೆ ತ್ಯಾಗ
ತಿರುಳ ಹೊರಗಡೆತೋರ್ಪ ಸಹಕಾರಫಲ ಭೋಗ
ತಿರುಳ ಮರೆಯಿಸಿತೋರ್ಪ ನಾರಿಕೇಳವು ತ್ಯಾಗ
ನೆಲ ತನ್ನಬದುಕ ಮೇಲ್ಗಡೆ ತೋರುವುದು ಭೋಗ
ಜಲಧಿ ತೆರೆಯಿಂ ಬಾಳ ಮರೆಯಿಸಿರ್ಪುದು ತ್ಯಾಗ
ಉದಯದಲಿ ಉದಯದಂದಕೆ ನಲಿಯುವುದು ಭೋಗ
ಉದಯದಲಿ ಸಂಜೆಯಾಗಸವ ನೆನೆಯಲು ತ್ಯಾಗ
ಲೋಕದೊಳಗಾಹಾರವೆಷ್ಟಿರುವುದೆನೆ ಭೋಗ
ಲೋಕದಲಿ ಹಸಿದವರೆನಿಬರಿರ್ಪರೆನೆ ತ್ಯಾಗ
ಈಕ್ಷಣದೊಳೊಂದುಯುಗವೊದಲಾಯಿತೆನೆ ಭೋಗ
ಈಕ್ಷಣದೊಳೊಂದುಯುಗ ಕೊನೆಯಾಯಿತೆನೆ ತ್ಯಾಗ
ಕಾರ್ಯದಲಿ ಹರಿಗೆ ನೆರವಾಗಿ ತೊಡಗಲು ಭೋಗ
ಕಾರ್ಯವನು ಬಿಟ್ಟುಕುಳಿತವನ ನೆನೆವುದು ತ್ಯಾಗ
ಮಿತ್ರನಾಗಿಹೆನೇಳುಜನ್ಮಗಳೊಳೆನೆ ಭೋಗ
ಶತ್ರುವಾಗುವೆ ಮೂರುಜನ್ಮಗಳೊಳೆನೆ ತ್ಯಾಗ
ಪರಮಾತ್ಮ ವಿಷ್ಣುರೂಪದಿ ಕಾಣುವುದು ಭೋಗ
ಪರಮಾತ್ಮ ಶಿವರೂಪದಿಂದೆ ಕಾಣ್ಬುದು ತ್ಯಾಗ
ಭೋಗದಲಿ ಸರಿಯಾಗಿ ನಡೆಯೆ ಸುಖಬಹುದು ದಿಟ
ತ್ಯಾಗದಲಿ ನಿಜವಾಗಿ ನಿಲಲರಿವುಬಹುದು ದಿಟ
ತ್ಯಾಗಭೋಗದೊಳಿಹುದು ಇಹುದು ತ್ಯಾಗದಿ ಭೋಗ
ಇದನರಿದು ಜೀವನದಿ ನಡೆಯುವುದು ಯೋಗ.

# ಆತ್ಮಗೀತ

## ೧

## ಪೂರ್ವಗೀತ

ಅರಿವೆನಾನೇನುಂ ಮಹಾತ್ಮನಲ್ಲೆಂಬುದನು—
   ಎನ್ನ ಹರಿಯೇಕೆ ಪಿರಿಯನ ಮಾಡನೋ—
ಅರಿದುಮೆನ್ನಯಹೃದಯಮೀದಿನದಿಕೇಳುತಿದೆ
   "ಇನ್ನೆಗಿಪ್ಪತ್ತಾರು ವರುಷಂಗಳು
"ಜೀವನದೆಮುಗಿದುವು; ಈ ವರೆಗೆ ಬಾಳಿನಲಿ
   "ಏನೊಂದುಕಜ್ಜವನು ಎಸಗೆನಲ್ತೆ;
"ಆವಕೆಲಸವ ಮಾಡಲಿರುವೆನೋ ಮಾಳ್ಪೆನೋ
   "ನಾನರಿಯೆನಿನ್ನುಬಹ ವರುಷಗಳಲಿ."

ಬುದ್ಧಿಹೇಳುವುದಿದಕೆ: "ಹೋದ ಬಹ ದಿನಗಳಲಿ
   "ಏನಾದುದಾಗುವುದು ಎನಲು ನೀನು
"ಸಿದ್ಧಾರ್ಥನೋ ಮೋಣುಶಂಕರನೊ ಮಿಲ್ಟನ್ನೊ?
   "ಏನಿನಿತುಕಳವಳ? ದಿನಕಳೆವುದು;
"ಮಾಸಗಳು ಮರೆಯುವುವು; ವರುಷಗಳು ಹರಿಯುವುವು;
   "ಉಗ್ಗಡಿಸದೆಲ್ಲ ಮೆಲ್ಲನೆ ಸರಿವುವು;
"ಮೀಸಕೆಲಸವ ಮಾಡದಿದ್ದೊಡೆಯು ಕೊನೆಗೆ ಅವು
   "ಹಗ್ಗಚಿತಿ ಉಗ್ಗಂಗಳನು ತರುವುವು"

ಇದನೊಪ್ಪದೀಹೃದಯ ಪ್ರತಿಯಾಗಿ ಹೇಳುವುದು
   "ನೆಲೆಯುಂಟು ಈ ಬಾಳಿಗೆಂದರಿವೆನು.
"ಇದಕೆಸಂಶಯವಿಲ್ಲ; ನೆಲೆಯಿಹುದು ನಿಶ್ಚಯವು;
   "ಫಲವೊಂದು ಇಹುದು; ಇರುವುದು ದಾರಿಯೂ.

“ ಎನಗೆ ಕಾಣದ ಒಂದು ಕತದಿ ದಾರಿಯುಃ ನೆಲೆಯುಃ
“ ಇಲ್ಲವೆಂದೆನಲು ಸರಿಯುಹುದೆ ಮಾತು ?
“ ನಿನಗೆನಗೆ ಸುಲಭದಲಿ ಕಾಣದಿದೆ ; ಆದೊಡೆಯು
“ ಸುಳ್ಳಾಗಲಾರದಲೆ ಇರುವದಾರಿ ”

“ ದಾರಿ ಇಹುದೋ ? ಎಲ್ಲಿ ? ” “ ಅದನೆನಾನುಂ ಕೇಳ್ವೆ
“ ನೀಹಳಿದುಕೇಳ್ವೆ ; ನಾನಂಬಿಕೇಳಿ
“ ನೂರುಯತ್ನವಮಾಡಿ ನಿನ್ನನೂ ಎನ್ನನೂ
“ ಸಾಹಸದಿ ಇಬ್ಬರನು ಬದುಕಿಸುವೆನು.
“ ಎನ್ನಭರವಸೆ ಹಿರಿದು ; ಅರಿವೆನಿದಮನದಲ್ಲಿ ;
“ ಇಳೆಯ ರಚಿಸಿದ ದೈವ ಪರಿಕಿಸುವರೆ
“ ಎನ್ನನ್ನರಿಗುಮಿರಲಿ ಎಂದು ಗೆಯ್ದಿಹನಿಳೆಯ :
“ ಕೆಲವರಿಗೆ ಮಾತ್ರವೆಂದಿದಗೆಯ್ಯನು :

“ ಹಿರಿಯರಾದವರು ದಾರಿಯ ಮೊದಲು ನೋಡುವುದು,
“ ಈ ಕೆಲಸಕೆಂದು ಆ ಕೆಲಸಕೆಂದು
“ ಹರಿ ಅವರ ಕರೆಯುವುದು, ಅವರಸಲುವಾಗಲ್ಲ,
“ ಲೋಕವೆಲ್ಲಕೆ ಒಳ್ಳಿಯುದನೆಸಗಲು ;
“ ಸವನಿಸುವುದವರಿಗೀ ಬಾಳುವಮಾಶಕ್ತಿಯುಂ
“ ಕಿರಿಯರಿಗೆ ದಾರಿಯನು ತೋರಲೆಂದು ;
“ ಅವರು ನಡೆದಂದದಲಿ ನಡೆಯೆ ನಾಂ ತೊಡಗುವೆನು ;
“ ಅರಸಿಕಂಡುದನರಸೆ ಯತ್ನಿಸುವೆನು.

“ ಭಾಸ್ವರ ಪ್ರಭೆಯಿಂದೆ ಹಿರಿಯರಿಗೆ ದಾರಿಯನು
“ ತೋರಿರಕ್ಷಿಸಿ ಮುಂದಕವರನೊಯ್ದು
“ ಶಾಶ್ವತ ಜ್ಯೋತಿಯಿಂದಲೆ ಬಂದ ಕಣವೊಂದು
“ ದಾರಿಯಲಿ ಸ್ವಲ್ಪವನು ತೋರಲೆನಗೆ.

“ ಹಿರಿಯರೆಸಗಲು ಹಿರಿಯಕಜ್ಜಂಗಳಿರ್ಪಂತೆ
“ ಕಿರಿಯರೆಸಗಲು ಕಿರಿಯಕಜ್ಜವಿಹುದು;
“ ಅರಸುತಿಲ್ಲವು ನಾನುಮಾತ್ರವಾಕಜ್ಜವನು,
“ ಬರುತಿಹುದು ಕಜ್ಜವೂ ಎನ್ನನರಸಿ.
“ ಬಾಳಮುಂದಣಗತಿಯತೋರ್ಪ ಪಟವೊಂದೆನಗೆ
“ ಇಲ್ಲೀಗಕಾಣದಿರೆ ಹೋದುದೇನು?
“ ಮೇಲೇಳ್ವ ಶಿಖರಗಳು ಕಾಣದಂತೆಯೆ ಬೀಳ್ವ
“ ಹಳ್ಳಕೊಳ್ಳವು ಈಗ ಭಯಪಡಿಸದು.
“ ರಾಜಮಾರ್ಗ ಬಹುದೊ ಕಾಡುದಾರಿ ಇಹುದೊ
“ ಎಂದು ಭಯಪಡುತಲಿಲ್ಲಿಯೆ ನಿಲ್ಲೆನು;
“ ಸಾಜವಿದು ಸರಿಯೆಂದು ತೋರ್ದನಿತು ದೂರವನು
“ ಹಿಂದೆಗೆಯದಡಿಯಿಟ್ಟು ನಡೆವೆ ನಾನು.
“ ಜೀವನದಪಥದಿನಾಂ ನಡೆದಿಂತು ಪೂರ್ವದಲಿ
“ ಹಿರಿಯರಾದವರೊರ್ವರೊರ್ವರಾಗಿ
“ ಯಾವಶೈಲದತಳವನುಳಿದು ಆರೋಹಿಸುತೆ
“ ಶಿರವನೇರುತೆ ಶಾಂತಿಯನು ಪಡೆದರೊ
“ ಆಗಿರಿಯಕೀಳ್ತಪ್ಪಲನು ಸೇರುವೆನು; ಅದೇ
“ ನೆಲೆಯಪ್ಪುದೆಮ್ಮಾರ್ವರಿಗೆ ನೋಡಲು;
“ ಹೋಗುವಣ ಬಾ; ಗಿರಿಯಬುಡವಕುರಿತೆಡೆಬಿಡದೆ
“ ಛಲದಿಂದೆನಡೆವ; ಬಾ; ನಂಬಿಬಾರ.”

೨

## ಉತ್ತರಗೀತ

ಅಂದು ಈ ಎದೆ ಬಾಳ ಪ್ರಶ್ನೆ ಕೇಳಿದ ಮೊದಲು
ಏಳುವರುಷಗಳು ಕಳೆದಿರುವುವೀಗ;
ಅಂದು ಹೃದಯದೊಳಿರ್ದ ಸಂದೇಹ ಹರಿದಿಹುದು
ಆಳದೊಳಗಣ ಜಂಭಹರಿದಿರುವುದು.

ದಾರಿಯಾವುದು ಎನ್ನ ಕೆಲಸವಾವುದು ಎಂದು
ತವಕಪಡುವುದು ಬರಿಯ ಕಷ್ಟ; ಬದುಕು
ಯಾರಿಂದ ಬಂದುದೋ ಯಾರಿಂದ ಬಳೆದುದೋ
ಅವನೆ ಎಲ್ಲವನು ಸರಿಪಡಿಸುತಿಹನು.

ಹಿರಿಯರಾದವರು ನಡೆವಾದಾರಿ ನಡೆಯುವೆನು
ಹಳ್ಳಕೊಳ್ಳಕೆ ಹೆದರದಿರುವೆನೆಂದು
ಭರವಸೆಯ ಮಾತನಾಡಿದೆನಾಂ ಸ್ವತಂತ್ರನೊಲು
ಪೊಳ್ಳುಮಾತದು ಎಲ್ಲ ಯೋಚಿಸುವರೆ!

ಅವರುಗೆಯ್ದಂತೆ ಕಜ್ಜವನುಗೆಯ್ವೆನು ನಾನು
ಎಂದು ನಾನೆಣಿಸಿದೆನು; ಕಷ್ಟವಿನಿಸು
ಸವನಿಸಲು ತಡೆವ ಆ ಕೆಚ್ಚು ಬಹುದೆಂತೆನಗೆ?
ಮಂದಮತಿ ಅರಿಯೆನೇ ಇದರಪರಿಯ!

ಕೆಲಸವೆನ್ನನು ಅರಸಿಬಹುದೆಂಬ ಮಾತುಂಟೆ?
ಅದನು ಮಾಡಲು ನಾನೆ ಎಂಬುದುಂಟೆ?
ಹಲವಿಧದ ಕೆಲಸಗಳ ಹರಿಯಸೇವಕರೆನಿಸಿ
ಮುದದಿಂದೆ ಮಾಡುವರೆ ಹಲಬರಿಹರು.

ನೆಗಳುವರೆ ಬಲವನಿತ್ತಿರೆ ಬಲಕೆ ತಕ್ಕಂತೆ
ನಿರವಿಪನು ಕಜ್ಜವನು ಹರಿ ಮನುಜಗೆ;
ನೆಗಳುವರೆ ಬಲವಕೊಡದಿರಲದಕೆ ತಕ್ಕಂತೆ
ಬರಿಯ ಆಟವನು ನಿರವಿಪನು ನಿನಗೆ.

## ಅರುಣ

ಗಿರಿಯುನೇರುವ ಬಲವಕೊಟ್ಟು ಏರೆನ್ನುವನು
ನಡೆವಶಕ್ತಿಯಕೊಟ್ಟು ನಡೆ ಎಂಬನು ;
ಸರಿಯಾಗಿ ನಡೆವುದಕೆ ಬಾರದಿರುವೆಳೆಗೂಸ
ಹಿಡಿದೆತ್ತಿಕೊಂಡು ಮೇಲ್ಗಡೆಗೊಯ್ವನು.

ಬಾಳು ಸಾರ್ಥಕವಾಗಲೆಂದು ನೀ ಕಾಡದಿರು
ಆವುದೊಂದನುವ್ಯರ್ಥ ಮಾಡನವನು ;
ಮೇಲಾಗಿ ನೀಬಾಳುವುದು ನಿನ್ನ ಛಲವಲ್ಲ
ದೇವನ ವಿಶಾಲಮಮತೆಯ ಫಲವದು.

## ಪಾರಿಜಾತದ ಕತೆ

ಮಳೆನಿಂದು ಚಳಿಬಂದು ಮೋಡವಳಿದಿರುವಂದು
ಚಳಿಗಾಳಿ ವನಗಳಲಿ ಸುಳಿದಾಡುತಿರುವಂದು
ಉಳಿದ ಹೂ ಚಳಿಯಿಂದೆ ಬೆರೆತು ಬಾರದೆ ಇರಲು
ತಳಿರದಿನಕೆಂದು ವನ ಇದಿರುನೋಡುತಲಿರಲು
ಬಳಿಯ ಉದ್ಯಾನವನದಂತರದೊಳೊಂದು
ಎಳೆಮಲರು ಪಾರಿಜಾತ ತಾನುಬಂದು
ಎಲೆಯಮರೆಯೊಳು ನಿಂದಿದೆ.

ಅಭ್ರವಿನಿಸಿಲ್ಲದಾ ಆಗಸದ ಮಧ್ಯದಲಿ
ಶುಭ್ರದ್ಯುತಿಯಭರದಿ ಲೋಕಗಳನೆಲ್ಲವನು
ವಿಭ್ರಮಣಗೊಳಿಸುತಿಹ ಕಳೆಯ ಸೊಬಗಿಂಮೆರೆದು
ವಿಭ್ರಾಜಿಸುತ ಚಂದ್ರನೈತಂದು ತನ್ನೊಂದು
ಚೆಂದವನು ಬಹಳ ಸರಳತೆಯಿಂದ ತೋರಿ
ಮಂದಹಾಸದ ಸೊಗವ ವನದೆಡೆಗೆ ಬೀರಿ
ಬಂದಿಯಾಯ್ತುದಕೆ ಮಲರು.

ಮೃದುವಾದ ಬೆಳ್ಪಿಂದೆ ಮುಡಿಲುಶೋಭಿಸುತಲಿರೆ
ಪುದುವಾದ ರಾಗಸಂಪದವು ಹೃದಯದೊಳೆಸೆಯೆ
ಮೃದುಹಾಸದಿಂದೆ ಹೂ ಅನುರಾಗವನು ತೋರಿ
ಮುದದಿಂದೆ ಚೇತನದೊಳರಳಿ ಪೆರ್ಮೆಯಸಾರಿ
ಎನ್ನಮನದನ್ನನೀನೇ ಚೆನ್ನ ಎನ್ನ
ನಿನ್ನವಳು ಎಂದು ಭಾವಿಸಿ ಈಗತನ್ನ
ಮನ್ನಿಸೆಂಬಂತಿರ್ದುದು.

ನೆಲದ ಹೂವಾಗಸದ ಹೂವಿನಂದಕೆ ಸೋತು
ಕೆಳೆಯನಾಶಿಸಿನಿಂದ ಪರಿಯ ನೋಡುತೆ ವನದ
ಉಳಿದ ಚೇತನವೆಲ್ಲ ಇದಕೆ ಕೊನೆಯೇನೆಂದು
ಎಳೆಮಲರಿಗರಿವಿಲ್ಲವೆಂದು ಕನಿಕರದಿಂದ
ಮರುಳುತನ ನಿನಗೇನು ಬಂದಿಹುದು ನೀನು
ಸರಿಯಪ್ಪುದುಂಟೆ ಚಂದ್ರನಿಗೆ ನಿನಗೇನು
ಮರುಳುತನ ಬಂತೆಂದುವು.

ಯಾಮಿನಿಯ ಪ್ರಣಯಪ್ರೇರಣೆಯೂರಿ ಚೇತನದಿ
ಭಾಮಿನಿಯರಾಂತರ್ಯವನು ಸಲುವಸಮಯದಲಿ
ಆಮಲರುಮರೆಯನುಳಿದೊಲವ ಪರಿಯನು ತಿಳಿಸಿ
ಪ್ರೇಮಭಿಕ್ಷೆಯಬೇಡಿ ನಾಣುಳಿದು ಕೈನೀಡಿ
ಮೆಲ್ಲಾತನುಸಿರ್ವ ಪರಿಯಿಂ ಮೆರೆವ ಸೊಗದ
ಚೆಲ್ವಕಮ್ಮೆಲರಸೂಸುತೆ ತನ್ನ ಮೊಗವ
ಲಲ್ಲೆಗೆನೆ ಮುಂದಿಟ್ಟುದು.

ವನಚೇತನಗಳಿದನು ನೋಡಿ ನೀರವವಾಗಿ
ಮನದೆಮರುಗಿರೆ ಹೂವ ಗೆಲ್ಲವನು ಬಾಂದಳದೆ
ಇನಿಸುಕಳವಳವ ತೋರದೆ ಶಾಂತಭಾವದಲಿ
ಘನಿಸಿರುವ ಹಾಸವನು ತೋರುತಿಳಿಯುತಲಿಹನು.
    ಚಳಿಗಾಳಿಯೊಂದು ಮೃದು ಮೃದುವಾಗಿ ಬೀಸಿ
    ಮಲರಬಳಿಗೈತಂದು ಮಗು ನಿನ್ನ ಆಸೆ
    ಒಳಿತಲ್ಲ ಬಿಡು ಎಂದುದು.

ಕೊಟ್ಟಮನವನು ಮರಳಿಕೊಳ್ಳಲಾರದೆ ಮಲರು
ಇಟ್ಟಿನಾನೆನ್ನ ಮನದನ್ನನಡಿಗಳೊಳಸುವ
ದಿಟ್ಟಸಿದನಿವನೆನ್ನನಿದೆ ಎನಗೆ ಪೂರ್ಣಸುಖ
ಮುಟ್ಟದನು ತನ್ನ ಕರದಿಂದೆನ್ನ ಬಿಡನಲ್ತೆ
    ಎನ್ನಕೊಳ್ಳುವನಿವನು ದಿಟವೆಂದು ಹೂವು
    ತನ್ನ ಪ್ರಿಯನೆಡೆಗೆ ಹಾರುವ ಎಂದು ಕಾವ
    ಇನ್ನುಳಿದು ಬಿತ್ತು ನೆಲಕೆ.

ಸದಯನಾಗಿಹ ಚಂದ್ರನನು ನೇರ ನೋಡಿ ಹೂ
ಉದುರಿ ನೆಲದಲಿ ದೂಳಸೇರಿರುವುದನು ನೋಡಿ
ಅದುರಿ ವನವೆಲ್ಲ ಅನುತಾಪದಿಂ ಮರುಗಿದುದು
ಬದಿಯ ಚಳಿಗಾಳಿ ಕನಿಕರದಿಂದೆಸುಯ್ಯುತಿಹುದು
    ಯಾಮಿನಿ, ಹಂತ ಪ್ರೇರಿಸಿದೆನೇ ನಾನು
    ಕೋಮಲೆಯನಿದಕೆಂದು ಖೇದದಲಿ ತಾನು
    ವ್ಯೋಮದಲಿ ನೆರೆಮರುಗಿತು.

ಎಳೆಮಲರು ಚಂದ್ರನಿಗೆ ಸೋತು ಕೆಟ್ಟಾಹದನ
ಬಳಿಕಬಂದದರ ಸೋದರಿಯರರಿಯುತೆ ಮರುಗಿ
ನೆಲದೆ ಬಿದ್ದಿರಲೆಮ್ಮ ಸೋದರಿ ನಾವಿಲ್ಲಿ
ಸಲೆಮೊರೆಯುವುದು ಚೆಂದವಲ್ಲೆಂದು ಉರುಳಿದುವು
ಅದು ಮೊದಲು ಈ ಹೂಗಳೆಲ್ಲ ಈವರೆಗು
ಉದಯವಾಗುವ ಮುನ್ನ ಅದ ನೆನೆದು ಮರುಗಿ
ಉದುರಿ ನೆಲವನು ಸಲುವುವು.

ಮಳೆನಿಂದು ಚಳಿಬಂದು ಮೋಡವಳಿದಿರುವಂದು
ಕಳೆದುಂಬಿ ಚಂದ್ರನಾಗಸದಿ ನಿಂದಿರುವಂದು
ಎಳೆಯ ಆ ಪಾರಿಜಾತದ ಗತಿಯ ಯಾಮಿನಿ
ಸಲೆನೆನೆಯುತೊಮ್ಮೊಮ್ಮೆ ಮರುಗಿ ಮಸಕಾಗುವಳು
ವನ ಅದನು ಒಮ್ಮೊಮ್ಮೆ ನೆನೆದು ನಡುಗುವುದು
ಘನಿಸಿದಂತಿಹ ಗಾಳಿಯಂತೆಸುಯ್ಯುವುದು
ಮನವಮರೆದಂತಲೆವುದು.

## ಇಂದುಮತಿ

**ಅಜನೃಪತಿ ಸತಿಯಳಿದಖೇದದಿಂದಳಲಲ್ ದಿ**
**ವಿಜಲೋಕದಿಂದೊರ್ವ ದೂತನೈತಂದವಗೆ**
**ನಿಜತತ್ತ್ವಮಿದು ಸಾವು ಜೀವನದೊಳೆಂಬುದನು ತಿಳಿಸಿ ಸಂತಯಿಸಿ ಪೋದಂ**

ಸೂರ್ಯಸುತ ಮನುವಿನನ್ವಯಕೆ ನಿಜವೆನಿಸಿದೌ
ದಾರ್ಯ ಶೌರ್ಯೋತ್ಸಾಹ ಮೊದಲಾದ ಗುಣಗಳಿಂ
ದಾರ್ಯ ಧರ್ಮವ ರಕ್ಷಿಸುವುದೆಂಬ ಬಳಿಯವ್ರತದೊಳು
ವಿಚಕ್ಷಣನಿವನೆನಿಸಿ
ಕಾರ್ಯದಕ್ಷತೆಯೊಳೆಲ್ಲರಿಗೆ ಮಿಗಿಲೆನಿಸಿದಾ
ಚಾರ್ಯನನು ಕಾರ್ಯಸಾಧನೆಯೊಳನುಸರಿಸಿ ನೃಪ
ವರ್ಯನಜನಿರ್ದನಾ ಕೋಸಲದ ಸಾಮ್ರಾಜ್ಯ
ಕರ್ಮದಲಿ ನಿರತನಾಗಿ.

ಮಡದಿಯಾತಂಗೆ ಮಾನಿನಿ ಭೋಜಕುಲವೆಂಬ
ಕಡಲೊಳುದಯಿಸುತಮೃತಚಂದ್ರಲಕ್ಷ್ಮಿಯರೆಲ್ಲ
ರೊಡವೆರೆಯುತೊಂದಾಗಿ ಸುಂದರೀರೂಪತಳೆದರೊ
ಎಂದು ತೋರುತಿಹಳು
ಕಡುಚೆಲ್ವರೂಪು ರೂಪದಕೆ ಗುಣಶೀಲವುವು
ಪಡಿಯೆನಲು ರೂಪವತಿ ಗುಣವತಿ ಸುಶೀಲೆ ತ
ನ್ನೊಡೆಯನಿಗೆ ನಿಜದೊಳರ್ಧಾಂಗಿ ಧರ್ಮದಪತ್ನಿ
ಕಾಂತೆ ಇಂದುಮತಿದೇವಿ.

ಮಾಮರದಿ ಕೋಗಿಲೆಯು ಪಂಚಮದಿ ಕೂಗಲಾ
ರಾಮವಳಿಗಳರವದಿ ವೀಣೆವೊಲು ಕೂಜಿಸಲ್
ಶ್ಯಾಮಸುಂದರವಾಗೆ ವನರಾಜಿ ಸೊಗಯಿಸುವ
ತಳಿರ ಕುಸುಮದ ಪೆರ್ಚಿನಿಂ
ರಾಮೆಯುರಸೀ ಸೊಬಗವೇದಕುಪನಿಷತೆಂದು
ಕಾಮಿಸುವ ಜೀವನದ ನವ್ಯ ಯೌವನದೊಳಭಿ
ರಾಮಗುಣರೂಪಗಳ ಕಣಿಯುವಳನಜನೃಪತಿ ಪಡೆದಂ
ಸ್ವಯಂವರದೊಳು.

ಸಡಗರದೊಳವಳ ಪಡೆಯಲಿಕೆಂದು ಬಂದ ನೃಪ
ಗಡಣ ಮಂಟಪವ ನಿಬಿಡಂ ತುಂಬಿರಲ್ ನೃಪತಿ
ಯುಡುಗಣದ ಮಧ್ಯದಲಿ ಚಂದ್ರನಂತಿರಲವನೊ
ಳರ್ಪಿಸಿದಳಾತುಮನನು
ಕಡೆಯಾದುದೇನು ತನ್ನನೆ ಸೋತಳೆಂದೆನಲ್
ಪಡೆದಳಲೆ ನೃಪನ ವಿನಿಮಯದೆ ಪಾತ್ರವನೋಡಿ
ಕೊಡುವರ್ಗೆ ಧರ್ಮಕಾಮಾರ್ಥಂಗಳೆಲ್ಲ ಬರ್ಪುದು
ನಿಕ್ಕುವಂ ನೋಡಲು.

ಅಂತಾ ಸ್ವಯಂವರದಿ ಚೆನ್ನೆಯಂ ಕೈವಿಡಿದು
ಸಂತಸದಿ ನಗರಿಗಜನೈತರಲ್ ರಘುನೃಪತಿ
ಯಿಂತೆಂದು ನೃಪನೀತಿ ಸೂತ್ರ ತನ್ನಿಂದುದಾಹೃತ
ವಾಗಲೆಂಬ ತೆರದೆ
ಸಂತತಂ ಪೊತ್ತು ಸಾಕೆನಿಸಿರ್ದ ಸಾಮ್ರಾಜ್ಯ
ಮಂ ತನ್ನಕುವರನೊಳ್ ನಿಲಿಸಿ ವನವನು ಕುರಿತು
ಪಿಂತಣವರಂತೆ ಸತಿವೆರಸು ತೆರಳಿದನು ಶಾಂತಿಯಸುಖ
ವನನುಭವಿಸಲು.

ಧರಣಿಯನು ಪೊರೆವುದಕೆ ಹೆಗಲಿತ್ತನಜನೃಪಂ
ಹರೆಯದಲಿ ಭಾರವಂ ಕಾಣದಿಹ ವೃಷಭವದ
ಹೊರುವಂತೆ ಸುಲಭದಿಂದವನ ಸಂತಸದೊಳನವರತ
ಸೇವಿಸುತರಸಿತಿ
ಹರುಷವನು ತರುವುದುಂ ಧರ್ಮದೊಳ್ನಿಲಿಪುದೆಂ
ಬೆರಡುಪಥವೊಂದಾದರಲ್ಲದಾರಿಗುಬರದ
ಪರಮ ಸುಖವನು ಕಂಡಳವನ ಜೀವನದುದಯ
ತಾರೆಯೊಲುಶುಭ್ರಳಾಗಿ.

ದಿನಕಳೆಯೆ ಸುತನೊರ್ವನಂ ಪೆತ್ತಳಾಕೆ ಕುವ
ರನ ನೋಡಿನೃಪತಿ ಪಿತೃಋಣಮುಂದು ತನ್ನಿಂದ
ಕೊನೆಯಾದುದೆಂದು ಹರುಷವ ತಳೆದನಾಸುತನ
ಕತದಿಂದಲನ್ನೆವರೆಗಂ
ಮನದಿನಿಯಳಾಗಿರ್ದ ಸತಿ ದೊರೆಗೆ ಕಂಡಳಲೆ
ಇನಿಯಳಲ್ಲದೆ ಪೂಜ್ಯಳೆಂದು ಸರಿಯಿದುನೋಡೆ
ವನಿತೆ ಬರಿವೆಂಡಿರಾಗಿರೆ ಬರದ ಪಾರಮ್ಯ ಹೊದೆವು
ದವಳಂ ತಾಯ್ಎನೆ.

ಕಾಲಕೆಲವನು ಕಳೆದರಿಂತು ಸುಖದೊಳ್ ದಿನದ
ಸಾಲು ಜೀವನದೆರಡು ಹೊನ್ನದಾರವ ಹಿಡಿದು
ಮಾಲೆಯಂ ಪೋಣಿಸಿದ ನಕ್ಷತ್ರಗಳತೆರದೆ
ನೈರ್ಮಲ್ಯದಿಂ ಬೆಳಗಲು
ಆಲಯಂ ಸಗ್ಗಮಲೆ ಸತಿಪತಿಯರೆರಡು ಮನ
ಮೇಳಯಿಸಲಾಗ ನಡೆನುಡಿಯೆಲ್ಲ ಪಾಲಿಸುವು
ದಾಲವಾಲದ ಜಲಂ ಚೆಂಗುಡಿಯಲತೆಯನೆಂತಂತೆ
ಬಾಳಿನ ಸುಖವನು.

ಅರಸನೊಮ್ಮೊಮ್ಮೆ ಗರಮನೆಯವನದಂತರದೊ
ಳರಸಿಯೊಡಗೂಡಿ ನಡೆಯುತಲದರೊಳಲ್ಲಲ್ಲಿ
ಅರಸಂಚೆ ಸುಳಿಯುತಿಹ ತಿಳಿನೀರ ಕೊಳಗಳನು ಬಿರಿದ
ತಾವರೆ ಪೂವನು
ಕರಿಯನೈದಿಲನುಮಲ್ಲಲ್ಲಿ ತನ್ನನೆ ತಾನು
ಮರೆದು ಬೆಳೆದಿಹ ವೃಕ್ಷವನು ಹಿಡಿದ ಲತೆಯನು ವಿ
ಹರಿಸೆ ಗೆಯ್ದಿರುವ ಕ್ರೀಡಾಪರ್ವತಂಗಳನು ಹೊದೆದ
ಸೊಬಗಂ ನೋಡುತೆ,

ಆಟಕೆಸಗಿದಮಲೆಯ, ಬಿರಿದಿರುವತಾವರೆಯ,
ನೋಟವನುಗೆಲುವಂಚೆಗಳಕೊಳದ, ಚಂದಿರನ
ಮಾಟಕರೆಸೋತನೈದಿಲೆಯ, ವೃಕ್ಷವಕೂರ್ತ
ಮುಡದಿಯೊಲು ಹಿಡಿದಲತೆಯ,
ಥಾಟಯೊಂದಾದೊಡೆಯುಮರಸಿತಿಯ ಸೊಬಗಿಗದು
ಸಾಟಿತಾನಲ್ಲೆಂದು ಭಾವಿಸುತೆ ಮತ್ತವಳ
ನೋಟದಿಂದಾವರಿಸಿ ಮನದಿ ನನೆಕೊನೆವೋಗಿ ತೇಲ್ದ
ನಂತಾನಂದದೊಳ್.

ಒಂದುದಿನವಿಂತುಟುದ್ಯಾನದಲಿ ನೃಪತಿಯಾ
ನಂದದಿಂ ಸತಿವೆರಸುವಿಹರಿಸುತೆ ತಮ್ಮಣುಗ
ಕಂದನಂಕುರಿತ ಸಲ್ಲಾಪದೊಳು ನಡೆಯುತಿರೆ
ಬೀಳುತಾಕಾಶದಿಂದೆ
ನಂದನದೆ ಪಾರಿಜಾತದ ಓಲಗದಿ ಸುಳಿವ
ಮಂದಮಾರುತನ ಸರಸವ ನೆನೆದು ನಗುವ ಒಂ
ದಂದದಿಂ ನೆರೆವೊರೆವ ಕಮ್ಮಲರಮಾಲೆಯೊಂದವಳ
ಕೊರಳಂ ಸೇರ್ದುದು.

ಆಮಲರಮಾಲೆಯೊಡಲನು ಸೋಂಕಿತೆಂದೊಡನೆ
ಕೋಮಲಾಂಗಿಯು ಜೀವವಳಿದು ಬಿಳ್ದಳು ನೆಲಕೆ
ಶ್ಯಾಮವಾದುದು ತಾವರೆಯ ತೆರದ ಮೊಗವು ತುಟಿ
ಕಣ್ಮಲರ್ ಮರೆಗೊಂಡುದು
ಕಾಮಿಸಿಯ ಪರಿಯದೇನೆಂದರಿಯದಾ ನೃಪಲ
ಲಾಮನಲ್ಲಿಯೆ ಕುಳಿತು ಬೀಸಿ ವಸ್ತ್ರದಿ ಕೇಶ
ದಾಮವಂ ಸರಿಪಡಿಸಿಯುಪಚರಿಸುತೆಚ್ಚರಿಸಲೆಂದು
ಚಣದೊಳ್ತೊಡಗಿದಂ.

ಕಳೆಯುಲರೆಗಳಿಗೆಯರಿದನು ದೇಹವನು ಜೀವ
ನುಳಿದು ಹೋಗಿಹುದೆಂದು ಕಂಪಿಸುತೆ ಹಾಯೆನ್ನ
ನುಳಿದುಹೋದೆಯು ದೇವಿ ಇನ್ನು ಜೀವದ ಹೊರೆಯು
ನಾನೆಂತು ತಾಳಲಯ್ಯೋ
ಮುಳಿವೋ ಬೇಸರೊ ಮೋಣು ಮಾಯೆಯೋ ಎಂದು ದೊರೆ
ಯುಳಲಿ ಅಕ್ಕಾರಿ ಬಸವಳಿದು ನೆಲದೊಳುರುಳ್ದು
ಬಳಲಿ ಮೆಯ್ಮರೆದು ಮತ್ತರಿದು ಮರುಳಾಗಿಯರೆತಿಳಿವಿನಲಿ
ಮೊರೆಯಿಟ್ಟನು.

ಇಂತು ಖೇದದಿ ದಹಿಸಿ ಜೀವ ದೇಹವನುಳಿದು
ಕಾಂತೆಯೊಡವೋಗಲೆಣಿಸುತಲಿಹುದೊ ಪೇಳ್ವುದೆಂ
ಬಂತೆ ನಿಟ್ಟುಸಿರು ಸೆಳೆಯುತಿರೆ ಸಗ್ಗದಿನೊರ್ವದೂತನ್ಯೆ
ತಂದು ಬಳಿಗೆ
ಶಾಂತಭಾವಂ ಮನಕೆ ಬರುವಂತೆ ಪಿಡಿಯುತೆ ದು
ರಂತದುಃಖವ ಶಮನಗೊಳಿಪಂತೆ ಸವಿಯಾದ
ಸಂತಯಿಪ ದಾಂತವಚನವನುಡಿದು ಪೇಳ್ದನೆಲೆ
ನರಪ ಲಾಲಿಸು ತತ್ವವ.

"ಅಳಲಬಾರದು ಹೋದವರಿಗಿಂತುಟರಿದರ್ಕೆ
ಳಳಲದೆಯೆನಿಲಲು ಮನಬಾಗದಿದು ದಿಟಮುಪ್ಪು
ದಳಲುವರೆಯುರೆಸಿಮಿಷವಳಲೆಸರಿಯ್ಯೆಸೆ ಒಡನೆಯೆ
ಮನದಿ ಧೀರತೆಯುನು
ತಳೆದು ನಡುವನುಕಟ್ಟಿ ದೇವರೆಸಗೆಂದು ಕೊ
ಟ್ಟುಳಿದಿರುವ ಕಾರ್ಯವನು ಮಾಡುವುದು ಧರ್ಮವಿದು
ಅಳಲಲೇತಕೆ ನೆನೆಯುತಾಕೆಯನು ಧನ್ಯಳಾರಯಿ
ಸುವರೆ ನಿನ್ನದೇವಿ.

"ದೇವದೇವನು ನೇಮಿಸಿದ ಕಾರ್ಯವನು ಮುಗಿಸಿ
ಯಾವ ಕುಂದನು ತರದೆ ಜೀವನದಿನಡೆದು ಸಂ
ಭಾವನೆಯು ಕೊಂಡಂತೆ ಸಾವ ಹೂಮಾಲೆಯುಲಿ
ಧರಿಸಿದಳು ನಿನ್ನರಾಣಿ
ಪಾವನೆಯು ದೇವಿ ನೀನವಳಂತೆ ನಡೆ ದೊರೆಯೆ
ದೇವನಿತ್ತಿಹಕಜ್ಜವನುಗೆಯ್ದು ಜೀವನಕೆ
ಸಾವನಂತ್ಯದ ಮಹಾ ಸಂಭಾವನೆಯುದೆನಿಸಲೆಂತಂತೆ
ನಡೆಪಥವನು."

## ಜಿಜ್ಞಾಸ

ಒಂದೊಂದು ಸಮಯದಲಿ ಮನವಳುಕಿ ಕೇಳುವುದು
"ನೀನಿರುವ ಮಾತು ನಿಜವೋ"—
ಒಂದೊಂದು ವೇಳೆ, ವಿಚ್ಛಿತ್ತಿಯನೆ ಕಾಣದೆ
ಅನುಪೂರ್ವಿಯಾಗಿ
ಬಂದಿರುವ, ಬರಿಯ ಬಾಳೆಂದೆಂಬ ವ್ಯಾಪೃತಿಕ್ಕೆ
ತೀನಿಯೊದಗಿಸುವುದೆಂಬ
ಒಂದು ಕರ್ತವ್ಯದಲಿ ಮುಳುಗಿ, ತಿಳಿವಿನನೋಟ
ಮ್ಲಾನವಾಗಿರಲು ನಾನು
ಅಂಧನಾಗುತೆ ತೊಳಲಿ ಸಂದೇಹದಲಿ ಸಿಲುಕಿ
ನೀನಿಹೆಯ ಎಂದೆಂಬೆನು.

ನೀನಿಹುದು ನಿಶ್ಚಯವು. ನೀನು ಇಲ್ಲದೆ ಇರಲು
ನಿನ್ನ ಭಾವವಿದೇತಕೆ?
ನಾನರಿವೆ ಮನದ ದೂರಪ್ರಾಂತ ಸೀಮೆಯಲಿ
ಇನ್ನೆಂತ ಕಂದರದಲಿ
ಏನಾನುಮುದಯಿಪುದೊ ಹಿರಿದೊಳ್ಳಿತೆನಿಸುವುದೊ
ನನ್ನಿ ಅದು ನಿತ್ಯವಹುದು;
ನಾನಾವುದನು ಹಿರಿದು ಸುಂದರವಿದೊಳಿತೆಂದು
ಎನ್ನೊಳೇ ಎಳಸುತಿಹೆನೊ
ಏನೊಂದ ಬಿಡದೆ ಸನ್ನುತ ಎಲ್ಲವನು ನಾನು
ನಿನ್ನೊಳನುಭವಿಪೆನೆಂದು.

ಅರುಣ

ನೀನಿರ್ಪೆ; ಇರ್ಪೆನಾಂ; ಅವ್ಯಯಾ ಅಕ್ಷರಾ
      ದೂರಗಾಮಿಗಳೆನಿಸುವ
ಮಾನವನ ಮಾತುಗಳ ಮೀರಿದನೆ, ಭಾವನೆ
      ಸಾರಿ ಸಾರಿ ಸಾರಿ
ಯಾನದಲಿ ಸೋತಿರಲು ಸಿಲುಕದಿಹ ತತ್ವವೇ,
      ತೋರುತಿಹ ತೆರೆಯು ಹಿಂದೆ
ನೀನಿಹೆ ಸನಾತನ ಅನಂತಾ ಅನಾರಬ್ಧ
      ಸಾರಿ ಉತ್ತಮರಧಮರು
ಮಾನವರು ಕೃತಿಗಳಕೃತಿಗಳು ನಿನ್ನೊಳು ಕೊನೆಗೆ
      ಸೇರುವೆವು ಶಾಂತರಹೆವು.

## ಮಂಗಳಾಚರಣ

ಸಿರಿಯುರಸಂ ಕರುಣಾನಿಧಿ
ಸಿರಿಯುಂ ಹರಿ ತಿಸುಳಿಯೆನಿಸಿ ಜಗವಿದನೆಲ್ಲಂ
ಪೆರುವ ಪೊರೆಯುವಳಿಯಿಸುವಾ
ಪರಮಾತ್ಮಂ ನೀಡಲೆಲ್ಲರಿಗೆ ಪರಶಿವಮಂ

ಇರವರಿವಾನಂದಂಗಳ್
ಸರಿಸಮತೆಯಿನೊಂದೆ ಮೆರೆವ ಶ್ರೀಪರವಾಸಂ
ಸ್ಥಿರತರದಿರವರಿವಂಪರಿ
ಪರಿಹರಿಸವನನವರತವು ನೀಡುಗೆ ನಮ್ಮೊಳ್

ಉತ್ತಮ ಕವಿತೆ ಬಳೆವ ಸಂ
ಪತ್ತೆಲ್ಲವ ಪಡೆಯಲೆಮ್ಮ ಕರ್ಣಾಟದ ನಾ
ಡುತ್ತುಂಗದ ಶ್ರೇಯವ ಪುರು
ಷೋತ್ತಮನಿತ್ತೆಲ್ಲ ಜಗವ ಸಲಹುಗೆ ಶ್ರೀಶಂ

828—46. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು

# ಶ್ರೀನಿವಾಸ ರಚಿತ

---

| | |
|---|---|
| ಕೆಲವು ಸಣ್ಣ ಕತೆಗಳು | ಯಶೋಧರಾ (ನಾಟಕ) |
| ಬಿನ್ನಹ (ಗೀತೆಗಳು) | ಮಲಾರ (ಪದ್ಯಗಳು) |
| ಶಾಂತಾ (ಸಣ್ಣ ದೃಶ್ಯ) | ಸಣ್ಣ ಕತೆಗಳು ೪ |
| ಸಾವಿತ್ರಿ ( ,, ) | ರವೀಂದ್ರನಾಥ ಠಾಕೂರರು |
| ಸಣ್ಣ ಕತೆಗಳು | ಸಣ್ಣ ಕತೆಗಳು ೫ |
| ಸಾಹಿತ್ಯ (ಉಪನ್ಯಾಸ) | ಶ್ರೀ ರಾಮಕೃಷ್ಣ |
| ಅರುಣ (ಪದ್ಯಗಳು) | ತಿರುಪಾಣಿ (ಗೀತಪ್ರಧಾನ ನಾಟಕ) |
| ವಿಮರ್ಶೆ ೧ (ಲೇಖನಗಳು) | ಕರ್ಣಾಟಕದ ಜನಪದ ಸಾಹಿತ್ಯ |
| ಉಷಾ (ಸಣ್ಣ ದೃಶ್ಯ) | ಕಾಕನಕೋಟೆ (ದೃಶ್ಯ) |
| ಸುಬ್ಬಣ್ಣ (ಕತೆ) | ಆದಿಕವಿ ವಾಲ್ಮೀಕಿ |
| ತಾಳೀಕೋಟೆ (ಐತಿಹಾಸಿಕ ದೃಶ್ಯ) | ವಿಮರ್ಶೆ ೪ (ಲೇಖನಗಳು) |
| ವಿಮರ್ಶೆ ೨ (ಲೇಖನಗಳು) | ಸಣ್ಣ ಕತೆಗಳು ೬ |
| ನಾಲ್ಕು ಸಣ್ಣ ಕತೆಗಳು | ಗೌಡರ ಮಲ್ಲಿ (ಪದ್ಯ ಕಥೆ) |
| ಕನ್ನಡದ ಸೇವೆ (ಭಾಷಣ) | ರಾಮನವಮಿ ,, |
| ಮಂಜುಳಾ (ಸಾಮಾಜಿಕ ದೃಶ್ಯ) | ಮೂಕನ ಮಕ್ಕಳು ,, |
| ತಾವರೆ (ಪದ್ಯಗಳು) | ತಾಯ್ನುಡಿಯ ತಮ್ಮಡಿ (ಭಾಷಣ) |
| ಕರ್ನಾಟಕದ ಜನತೆಯ ಸಂಸ್ಕೃತಿ | ನವರಾತ್ರಿ ೨, ೪ (ಕಥನ ಕವನ) |
| ಚೆಲುವು (ಪದ್ಯಗಳು) | ಚಿತ್ರಾಂಗದಾ (ಭಾಷಾಂತರ) |
| ಶಿವ ಛತ್ರಪತಿ (ಐತಿಹಾಸಿಕ ದೃಶ್ಯ) | ಸುನೀತ (ಪದ್ಯಗಳು) |
| ವಿಮರ್ಶೆ ೩ (ಲೇಖನಗಳು) | ಪ್ರಸಂಗ (ಭಾಷಣ ಲೇಖನಗಳು) |

(ಇಂಗ್ಲೀಷಿನಲ್ಲಿ)

| | |
|---|---|
| Popular Culture in Karnataka | Short Stories (4 Vols.) |
| The Poetry of Valmiki | Subbanna (Story) |

Rabindranath Tagore.

---

ಈ ಪುಸ್ತಕಗಳು ದೊರೆಯುವ ಸ್ಥಳಗಳು :—

ಸತ್ಯಶೋಧನ ಪುಸ್ತಕ ಭಂಡಾರ, ಕೋಟೆ, ಬೆಂಗಳೂರು ಸಿಟಿ
ಬೆಂಗಳೂರು ಪ್ರೆಸ್, ಮೈಸೂರು ರೋಡ್, ಬೆಂಗಳೂರು ಸಿಟಿ
ಜೀವನ ಕಾರ್ಯಾಲಯ, ೪೩-೪೪, ಗವಿಪುರದ ವಿಸ್ತರಣ, ಬಸವನಗುಡಿ ಟಪಾಲು
ಸಾಹಿತ್ಯ ಭಾಂಡಾರ, ಹುಬ್ಬಳ್ಳಿ

# ಮೊದಲ ಮುದ್ರಣದ ಮುನ್ನುಡಿ

ಈ ಕಾವ್ಯಮಾಲೆಯನ್ನು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದ ಅಧಿಕಾರಿಗಳು ಈ ಸಲ ನಮ್ಮ ಜನರಿಗೆ ಕಾಣಿಕೆಯಾಗಿ ಅರ್ಪಿಸುವ ಉದ್ದೇಶದಿಂದ ಪ್ರಕಟಿಸುವುದರಲ್ಲಿದಾರೆ. ಆ ಸಂದರ್ಭದಲ್ಲಿ ಸಂಘದ ಅಧ್ಯಕ್ಷರೂ ನನ್ನ ಗುರುವರ್ಯರೂ ಆದ ಶ್ರೀಮಾನ್ ಬೆಳ್ಳಾವೆ ವೆಂಕಟನಾರಣಪ್ಪನವರು ನನ್ನ ವಿಷಯವಾಗಿ ವಿಶ್ವಾಸಸೂಚಕವಾದ ಹಲವು ಮಾತುಗಳನ್ನು ಹೇಳಿರುವರು. ಕಾಣಿಕೆಯ ಗ್ರಂಥವನ್ನು ನನ್ನಿಂದ ತೆಗೆದುಕೊಂಡದ್ದೇ ಸಂಘದವರಿಗೆ ನನ್ನ ವಿಷಯದಲ್ಲಿರುವ ಅತಿಶಯವಾದ ಆದರವನ್ನು ಸೂಚಿಸುತ್ತದೆ. ಇವರಿಂದ ಆದರವನ್ನು ಪಡೆಯುವುದು ನನಗಂತೂ ವಾಡಿಕೆಯಾಗಿಹೋಯಿತು. ಇದೆಲ್ಲಕ್ಕಾಗಿ ನಾನು ಶ್ರೀಮಾನ್ ವೆಂಕಟನಾರಣಪ್ಪನವರಿಗೂ ಸಂಘದವರಿಗೂ ವಂದನೆಗಳನ್ನರ್ಪಿಸುತ್ತೇನೆ. ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘವು ಹನ್ನೆರಡು ವರುಷದ ಕೆಲಸದಿಂದ ಕನ್ನಡನಾಡಿನಲ್ಲಿ ಪ್ರಸಿದ್ಧವಾಗಿದೆ. ಸಂಘದ ಅಧ್ಯಕ್ಷರೂ ಉಪಾಧ್ಯಕ್ಷರಾದ ತಳುಕಿನ ವೆಂಕಣ್ಣಯ್ಯನವರೂ ಅಂಬಳೆ ಕೃಷ್ಣಶಾಸ್ತ್ರಿಗಳೂ ಮೂರು ದೇಹವುಳ್ಳ ಒಂದು ಜೀವದಂತೆ ಸಂಘದ ಕೆಲಸವನ್ನು ಒಂದು ಮನಸ್ಸಿನಿಂದ ನಡೆಯಿಸುತ್ತಿರುವುದು ಇದಕ್ಕೆ ಮುಖ್ಯಕಾರಣ. ಕಾಲೇಜಿನ ವಿದ್ಯಾರ್ಥಿಗಳೂ ಈ ಹಿರಿಯರ ನೇತೃತ್ವದಲ್ಲಿ ಹಣವನ್ನೂ ಕಾಲವನ್ನೂ ಹರ್ಷದಿಂದ ಕೊಟ್ಟು ಕನ್ನಡದ ಸೇವೆಯನ್ನು ಮಾಡುತ್ತಿದಾರೆ. ಇದೆಲ್ಲ ನಮ್ಮ ಭಾಷೆಯ ಶುಭೋದಯದ ಚಿಹ್ನೆ. ಹೀಗೆ ನಾಡಸೇವೆಯಲ್ಲಿ ಒಮ್ಮುಖವಾಗಿ ಉಚ್ಚಧ್ಯೇಯದಿಂದ ನಡೆದುಕೊಳ್ಳುವುದು ನಮ್ಮ ಜನರಲ್ಲಿ ಹೆಚ್ಚುಹೆಚ್ಚಾಗಿ ವಾಡಿಕೆಯಾಗಲೆಂದು ನಾನು ಹಾರೈಸುತ್ತೇನೆ.

ಬೆಂಗಳೂರು ಪ್ರಮೋದೂತ ಸಂ॥<br>
ಶ್ರಾವಣ ಬಹುಳ ಏಕಾದಶಿ

ಶ್ರೀನಿವಾಸ

# ವಿಷಯಸೂಚಿಕೆ

## ತಾವರೆ

೧

ಕೆಸರಿನಲಿ ಹುಟ್ಟಿಯೂ ಹೆಸರಾದೆ ನೀ ಜಗದೆ
ತಾವರೇ ನಿನ್ನ ಗುಣದತಿಶಯದಲಿ;
ಬಗೆಯ ಮೆಲ್ಲನೆ ಹಿಡಿವ ಸೊಗಸಿನನುನಯ ನಿನ್ನ
ಕಾವು ದಳ ಮಡಿಲಿನಲಿ ಪಸರಿಸಿಹುದು.
ವಿಮಲವಿಶದತೆಗೆ ಸರಿಸಮನಾಗಿ ಪಾವನತೆ
ಕೋಮಲತೆ ಬೆರೆತಿರಲು ಸುಗುಣಕೆಲ್ಲ
ಆಕರನು ನೀನೆಂದು ಲೋಕದಲಿ ಕಲಿತವರು
ಪಾಮರರು ಎಲ್ಲ ಮೆಚ್ಚಿಹರು ನಿನ್ನ.

೨

ನೀರೊಳಗನುಳಿದು ಗಂಭೀರಭಾವದೊಳಿದ್ದು
ಬಳುಕಿ ನಿಂದಿಹ ನಿನ್ನ ಕಾವ ಬೆಡಗು;
ಮೇಲೆ ದಳವನು ದಳಕೆ ಕೀಲಿಸಿಹ ಕುಂದಣದ
ಚೆಲುಗೆಲಸದಲಿ ಕಾಂಬ ಹಿರಿಯ ಚಳಕ;
ಬಳಸಿ ನಿಂದಿಹ ನೂರುದಳದ ಮಧ್ಯದೊಳೆಸೆವ
ಮೆದುವೊಡಲ ಮೇಲ್ಮೆಯ್ಯ ಪೀಠದೆಸಕ;
ಇವನೆಲ್ಲ ಒಂದುಕಡೆ ಹವಣಿಸಿಹ ರೀತಿಯಿವು
ಪುದುವಾಗಿ ಬೆಳಸಿಹವು ನಿನ್ನ ಸೊಗಸ.

೩

ಕೆಂಪು ಬಿಳುಪನು ತೆಗೆದು ಸೊಂಪಾಗಿ ಸೇರಿಸುತ
  ಕಣ್ಣುಮನಗಳಿಗೆ ಹಿತವೀಯಲೆಂದು,
ಮೃದುವೆಂಬ ಗುಣಕಿಲ್ಲಿ ಒದವಿತೋ ರೂಪೆನಲು
  ಬಣ್ಣನೆಗೆ ಸಿಲುಕದಿಹ ಮೆಲುದಾರದಿ
ಎಸಗಿದಂತಿಹ ದಳದೆ ಪಸರಿಸಿದ ಸೊಬಗಿದನು
  ಇನ್ನೆನಿತು ಹೊಗಳಿದರು ಅತಿಯಾಗದು.
ಒಡಲ ಮಾರ್ದವವಿಂತು ಗೆಡೆಯಾಗೆ ವರ್ಣದಲಿ
  ಚಿನ್ನವನು ನರುಗಂಪು ನೆರೆದಂತಿದೆ.

೪

ರೂಪದೊಳಗಿಂತೊಂದು ಸೈಪು ಮೈವೆತ್ತಂತೆ
  ಈ ಸೌರಭದೊಳೊಂದು ಸೈಪೆಸೆವುದು.
ತಿಳಿದು ತಿಳಿಯದ ನಿನ್ನ ಮೆಲುಸೋಂಕ ಮೆಯ್ಗಂಪು
  ನಾಸಿಕದ ಸೀಮೆಯನು ಸೇರ್ವ ಮೊದಲೆ
ಹೃದಯದೊಳಹೊಗುತೆ ಆದ ಕದಿಯುವುದು; ಕೃತ್ರಿಮವ
  ಅರಿಯದೆಳೆಯರು ತಮ್ಮ ಕಾಣದವರ
ಬಗೆಯ ಸಿರಿವೊಗದಿನಿಸು ನಗೆಯಿಂದ ಗೆಲ್ವಂತೆ;
  ಸರಿ ಅವರ ಮಾಯೆಗೀ ನಿನ್ನ ಮಾಯೆ.

೫

ಅತಿಯಾಗೆ ವಿಷವಹುದಮೃತವಹುದು ಮಿತದಿಂದ
  ಎಂದು ಲೋಕಕೆ ಕಲಿಸಲೆಂಬ ತೆರದೆ,
ಕುಸುಮಗಳ ಕುಲದಲತಿಹೆಸರಾದ ಗೆಳತಿಯರ
  ಸೌಂದರ್ಯ ಸೌಭಾಗ್ಯ ಸೌರಭವನು

ಮಿತಿಮೀರದೊಲು ಜಗಕೆ ಹಿತವಾಗಿ ಸೊಗಯಿಪೊಲು
ಮೇಳವಿಸಿ ಸೊಬಗಿಗಾದರ್ಶವಾಗಿ
ಹರಿಯು ಸೃಷ್ಟಿಯೊಳಿದಕೆ ದೊರೆಯಿಲ್ಲವೆಂದು ಜಗ
ಬಾಳುವೆಗೆ ಬೆರಗಾಗೆ ಮೆರೆವೆ ನೀನು.

೬

ಇದರಿಂದಲೇ ಜಗದೆ ಪದದ ಸೊಗದಲಿ ಅರ್ಥ
ಬೆರೆದು ಕಾವ್ಯದ ಜಾತಿ ಉದಯವಾದ
ಅಂದಿನಿಂದೀವರೆಗೆ ಬಂದ ಕವಿಗಳ ನುಡಿಯು
ನೆರಿಗೆಗೆಲ್ಲಕು ನೀನು ವಿಷಯನಾಗಿ,
ಸಿರಿಯ ಮನೆಯೆಂದು ನೇಸರನ ಪ್ರಿಯಸಖಿಯೆಂದು
ಬೊಮ್ಮನಿಗೆ ತೌರೆಂದು ಕೀರ್ತಿವೆತ್ತು
ಕುಸುಮಗಳ ಕುಲದ ಹಿರಿಜಸದ ಪ್ರತಿನಿಧಿಯೆಂದು
ಸನ್ಮಾನವನು ಧರಿಸಿ ಜಗದೆ ನಿಂತೆ.

೭

ಹಿರಿಯತನವಿದು ನಿನಗೆ ಅರಸಿ ಬರಲಿಲ್ಲವಲೆ
ಯಾರನೂ ನೀ ಕೂಗಿ ಕರೆವುದಿಲ್ಲ;
ಬೆಳೆದ ತಾಣದಿ ನೀನು ಕಳೆವೆರೆದು ನಿಂದಿರಲು
ದಾರಿಹೋಕರು ನಿನ್ನ ನೋಡಿ ತಣಿದು,
ತಮ್ಮ ತಾವರಿಯದಂತುಮ್ಮಳಗಳನು ಮರೆದು
ಅರಿಯದೆಯೆ ಮನದೆ ಶಾಂತಿಯ ಪಡೆವರು;
ಒಳಗಿರುವ ಗುರು ಜನಕೆ ತಿಳಿಯದೆಯೆ ಚೇತನವ
ಸರಿಪಡಿಸುವಂತಾಯ್ತು ನಿನ್ನ ಹದನು.

೮

ಪಂಕದಲಿ ಹುಟ್ಟಿ ಅದರಂಕದಲಿ ಹಿರಿದಾಗಿ
  ಅದರ ವಿಮಲಾಂಶವನು ಬೇರೆವಡಿಸಿ
ಚಾರುರೂಪವ ಧರಿಸಿ ನೀರಿನೊಡನಾಡುತಲಿ
  ಚದುರನಗೆಯಿಂದೆ ಗಾಳಿಯನು ಸಾರ್ದು
ನೆಲನಿಂದಲೆಂತಂತನಿಲನಿಂದ ಜಲದಿಂದ
  ಒಳ್ಳಿದಹ ಕಣಗಳನೆ ಆಯ್ದು ತೊಟ್ಟು
ಒಳಹೊರಗೆ ಚೆಲುವ ನೀನಳವಟ್ಟ ರೀತಿಯಿದು
  ಉಲ್ಲೇಖಿಪುದು ನಿನ್ನ ಸೌಜನ್ಯವ.

೯

ಘನತೆ ಇದು ನಿನಗೊಗೆಯೆ ಎನಿತು ಯುಗ ಯತ್ನಿಸಿದೆ
  ದೋಷವೆನಗೇಕೆ ಗುಣವಿರಲಿ ಎಂದು ?
ಎನಿತು ಸಾಸಿರ ಜನ್ಮ ಅನವರತ ಆಶಿಸಿದೆ,
  ಮಾಸಲಾಗಿಸಿದೆ ಈ ನೆಲೆಗೆ ಬದುಕ ?
ಹರಿ ನಿನಗೆ ಆತುಮವನೆರೆವ ದಿನದಲಿ ಅವನ
  ಯಾವ ವರವನು ನೀನು ಕೇಳ್ದ ಕತದಿ
ಎಲೆಗಳಲಿ ಬೇರಿನಲಿ ದಳಗಳಲಿ ಕಾವಿನಲಿ
  ಈ ವಿವೇಚಕಗುಣವ ಹೊಯ್ದನವನು ?

೧೦

ದೇವನಿರವಿಗೆ ಜಗದೆ ಪಾವನತೆ ಸಲೆ ಸಾಕ್ಷಿ
  ಮಿಗಿಲಾಗಿ ಪ್ರೇಮಸೌಂದರ್ಯದಿಂದ;
ಪ್ರೇಮ ಕಾಂಬುದತಿಕ್ಷಮಾಮತಿಯೊಳೊಮ್ಮೊಮ್ಮೆ
  ಅಘದೊಡನೆ ನೇಹವನು ಬೆಳೆಸಿದಂತೆ;

ಚೆಲುವು ಬಲ್ಲುದು ಮನವ ಗೆಲುವುದನು, ಬಹುವೇಳೆ
ಎದೆಯ ತುಂಬದು ಭಕ್ತಿಭಾವದಿಂದ;
ಪಾವನತೆಯೊಂದು ಇದ ಗೈವುದೆಲ್ಲೆಡೆ ಸಮಯ;
ಆದರಿಂದೆ ನಿನಗೆ ನಾ ವಂದಿಸುವೆನು.

೧೧

ಹಿಂದಾವ ಜನಕೆ ಏನೊಂದು ಸತ್ಯವ ಸಾರಿ
ನಯದೊಳವರನು ನೀನು ನಡೆಯಿಸಿದೆಯೊ;
ಇಂದು ನನ್ನವೊಲೆನಿತು ಮಂದಿಗಿನ್ನಾವುದನು
ದಯೆಗೆಯ್ದು ನೀನಿಂತು ತಿಳಿಸುತಿಹೆಯೊ;
ಮುಂದೆ ಬಹ ಬಹುಶಿಷ್ಯವೃಂದಕಾವುದನಿಂತೆ
ಕಲಿಸಲಿಹೆಯೋ ದೇವದೂತ ನೀನು;
ಸುಂದರಾಕೃತಿಯೆ ಆನಂದದಾಶ್ರಯವೆ ಇದ
ನಿಲುಕಲಾರದೆ ಇಹೆನು ಎನ್ನ ಮನದಿ.

೧೨

ಬಾಳ್ವೆಯ ದೇವವ್ವೈತಾಳಿಕನೆ ಬಹುಕಾಲ;
ಮೆಲುನುಡಿಯೊಳೊಡೆಯನನು ಇಂತು ಸಾರು;
ಸ್ತುತಿಸವನ ಕಾರುಣ್ಯದತಿಶಯವನವನಿಂತು
ಹಲಗುಣವ ನಿನಗೆ ದಯೆಗೆಯ್ದ ಕತದಿ;
ಫಲಿಸುವೊಡೆ ಬಾಳು ಹರಿಯೊಲವು ಬೇಕದರಂತೆ
ತೃಷೆ ಬೇಕು ಹೃದಯದಲಿ ಎನುತೆ ನಿನ್ನ
ಎದೆವೊಗುವ ರೀತಿಯಲಿ, ಚದುರ, ಲೋಕಕೆ ಸಾರಿ
ಎಸೆದು ನಿಂದಿರು ಇಂತು ನಿತ್ಯನಾಗಿ.

# ಗಾಂಧಿಯವರ ದರ್ಶನ

ಇಂದು ನಮ್ಮ ಮಹಾತ್ಮ
ಗಾಂಧಿಯನು ನೋಡಲಿಕೆ
ಬಂದೆವಿಲ್ಲಿಗೆ ಲೋಕ
ಬಾಂಧವನ ದರುಶನಕೆ.

ಜನದ ಸೇವೆಯಲಿ ಮೆಯ್
ಸೋತನಿವನೆಂದರು.
ಅನುಮಾನ ಬರಿದು ಇದು,
ಭೀತಿ ಬಹುಬರಿದು.

ಸೋತವನ ಮೆಯ್ಯೆ ಇದು?
ಅಲಸಿದನೆ ಇವನು?
ಈತ ಸೋತಿಹನೆನಲು
ಗೆಲಿದವರು ಎಲ್ಲಿ?

ಎಳೆಯ ಮಗುವಿನ ಮೊಗದ
ನಗೆಯಿಹುದು ಮೊಗದೆ;
ಇಳೆಯರಸರಿಗೆ ಬರದ
ಬಗೆಯ ಗಾಂಭೀರ್ಯ;

## ತಾವರೆ

ಅನುಜರೊಡನಾಡುತಿಹ
ಹಿರಿಯನುರುಸರಸ;
ಮನುಜರಾಟವ ನೋಡಿ
ಕರಗಿರುವ ಕರುಣೆ;

ತಾಪಸ ವೃತ್ತಿಯಲಿ
ಘನಿಸಿರಲು ತೇಜ
ದೀಪವೋ ದೇಹವೋ
ಎನಿಸುತಿಹ ಒಡಲು.

ಸೋಲೆಂಬ ಮಾತುಂಟೆ
ಕರುಮವೀರನಿಗೆ?
ಮೇಲಮೇಲ್ಮೇಲಲ್ಲೆ
ಹರಿಯ ದಾಸರಿಗೆ?

ಹರಿಯ ಹಿರಿಯಾಳಿವನು
ಗಾಂಧೀ ಮಹಾತ್ಮ.
ಕರುಣಿಸನು ಹರಿ ತನ್ನ
ಬಾಂಧವಗೆ ಶುಭವ.

ಸಾಕು ಸದ್ಯಕೆ ಸೇವೆ
ಎಂದು ಹರಿ ಇವನ
ಬೇಕೆಂದೆ ಕುಳ್ಳಿರಿಸಿ
ನಿಂದಿಹನು ಕೆಲದೆ.

ಬಿಡುವ ಕೇಡೆಂದೆನುವ
ಮರುಳುತನ ಒಂದು
ಕಡೆಗಿರಲಿ; ಬಂದೆಲ್ಲ
ಎರಗಿ ಹಿರಿಯನಿಗೆ.

ಭರತಮಾತೆಯ ಹಿರಿಯ
ಕುವರನಿಗೆ, ಹರಿಯ
ಹಿರಿಯ ದಾಸಗೆ, ಬಂದು
ಇವನಿಗಿಂದೆರಗಿ.

ಇವನ ಧರಿಸಿದ ಭೂಮಿ
ಪುಣ್ಯಭೂಮಿ ಇದು;
ಇವನ ನೋಡಿದ ನಾವು
ಧನ್ಯರಾವಿಂದು.

# ಕೋಗಿಲೆ

ಕೋಗಿಲೆ! ಕೋಗಿಲೆ!
　ಎಂತ ಹೆಸರು ಊರಿಗೆ!
ಹೇಗೆ ಇಹುದೊ, ಎನಿತು ಸೊಗಸೊ,
　ಇಂತ ಹೆಸರ ಊರದು!

ಕೊಟಗೆಹರ ತೆರುವಿಗೆ
　ಏಳು ಕೂಗು ದೂರದೆ,
ಎಟುಕಿಸಿಕೊಳಬಹವೊಲಿರುವ
　ಮಾಲೆಯಾದ ಮಲೆಯೆಡೆ;

ಮೂರು ನೀರನುಳಿಯುತ
　ಮಲೆಯ ತಲೆಯ ಮುಟ್ಟುತ
ಧೀರವಾಗಿ ಪಡುವಣಿಂದ
　ಸುಳಿಯುವೆಲರೊಳಾಳುತ;

ತಳಿರು ಹೂವು ಸೊಗಯಿಸೆ
　ಪರಿಮಳಿಸುವ ವನದಲಿ;
ಮಲೆಯ ನೀರು ಸೇರಿ ನಡೆವ
　ಸರಳಿನೊಂದು ಬದಿಯಲಿ;

ಇಲ್ಲಿ ಇಹುದು ಕೋಗಿಲೆ.
   ಎಂತ ಸೊಗಸ ಊರದು !
ಮೆಲ್ಲನುಸುರು ಹೆಸರನು ;
   ಅಂತ ಸೊಗಸ ಹೆಸರದು.

ತಳಿರ ಮರೆಯೊಳಿರುತ ಕರೆದು
   ಕಾಣದಿಹುದೆ ಕೋಗಿಲೆ;
ಸಲುವುದಿದೇ ಬಣ್ಣನೆ
   ಜಾಣು ನಮ್ಮ ಊರಿಗೆ.

ಉಳಿದ ಊರು ಮನೆಯ ಗುಂಪು,
   ಕಡೆಗೆ ಎರಡು ಮರಗಳು ;
ಮಲೆಯೆ ವನವೆ ಊರು ಇಲ್ಲಿ ;
   ನಡುವೆ ಎಲ್ಲೊ ಮನೆಗಳು.

ಉಳಿದ ಊರು ಬರಿಯ ಜನದ
   ಬಾಳು ಬೀಳು. ಕೋಗಿಲೆ
ಎಲರ ಮಲರ ಕಂಪು ಸೊಂಪು
   ಮೇಳವಿಸಿದ ಆರವೆ.

ಪಾರಿವಗಳ ಕೂಜನದ,
   ಗಿಳಿಯ ನಲವ ಕೂಗಿನ,
ನೂರು ತೆರನ ಹಕ್ಕಿಯ
   ಉಲಿವ ಮೇಳ ಕೋಗಿಲೆ.

## ತಾವರೆ

ಹೇರಿಳೆ ಮಲ್ಲಿಗೆ
　ಜೇನು ಹೂವ ಬಳ್ಳಿಯು
ಬೇರಿನಿಂದ ಕಾವಹಲಸ
　ತಾಣ ನಮ್ಮ ಕೋಗಿಲೆ.

ನನ್ನ ಜನದ ಮನದ ನಯ
　ಸಂತಸವನು ಸಾರುವ
ಚಿನ್ನದಂತ ಹೆಸರ ಮೆರೆವ
　ಶಾಂತಿಯೋಣಿ ಕೋಗಿಲೆ.

ಕೋಗಿಲೆ! ಕೋಗಿಲೆ!
　ಎಂತ ಹೆಸರು ಊರಿಗೆ!
ಹೋಗಿ ನೋಡು, ಊರನು,
　ಶಾಂತಿಯೊಂದು ನೆಲೆಯುನು.

# ಮೋಂಬಿ

೧

ಮೋಂಬಿ ನಮ್ಮ ನಾಯಿ ಹೆಸರು.
ಕಣ್ಣುಬಿಟ್ಟು ಹತ್ತು ದಿವಸ
ತುಂಬುವುದಕೆ ಮೊದಲೆ ಅದನು
ಕೊಂಗರವನು ಕರಿಯನೊಬ್ಬ
ನಾಯಿ ಮರಿ ಬೇಕೆ ಎಂದು
ನಮ್ಮ ಬೀದಿಯಲ್ಲಿ ತಂದ.
ತಾಯಮೊಲೆಯ ಬಿಡಿಸಿ ಇಷ್ಟು
ಚಿಕ್ಕಮರಿಯ ತರುವರೇನೊ
ಎಂದು ಅವನ ಬಯ್ದು ಅಮ್ಮ
ನಾಲ್ಕು ಹಣಕೆ ಕೊಂಡಳದನು.
ಅಂದು ಮೋಂಬಿ ನಮ್ಮದಾಯ್ತು;
ನಮ್ಮ ಮೋಂಬಿ, ಮುದ್ದು ಮೋಂಬಿ.

೨

ಮೋಂಬಿ ಹೆಸರು ಮೋಂಬಿ ಅಲ್ಲ;
ರೂಬಿ. ನಮ್ಮ ಚಿಕ್ಕಅಣ್ಣ
ಸಾಂಬಮೂರ್ತಿ ಅದನು ಅಂದೆ
ರೂಬಿ ಎಂದು ಕರೆದ; ತಾತ
ನಾಯಿಗೇಕೊ ನಾಮಕರಣ
ಎಂದು ಕೋಪಿಸಿದರು. ಶುಂಡಿ,
ಬಾಯಿ ತಿರುಗದಿರುವ ಕೂಸು,
—ನಮ್ಮ ಹಾಗೆ ಮಾತು ಬರದು—

ತೊದಲಿ ಮಾಂಬಿ ಎಂದಳದನು.
ಅವಳಿಗಾಗಿ ನಾವು ಕೂಡ
ಮೊದಲು ಆಟಕಂತೆ ಕರೆಯೆ
ಮಾಂಬಿ ನಿಂತು ರೂಬಿ ಹೋಯ್ತು.

೩

ಬಂದ ದಿವಸ ನಮ್ಮ ಮಾಂಬಿ,
ತಾಯ ನೆನೆದುಕೊಂಡೊ ಏನೊ,
ಕಂದನಲ್ಲೆ, ಮಂಕನಂತೆ
ಸುಮ್ಮನಿತ್ತು. ಬಾಗಿಲಲ್ಲಿ
ಇಳಿಸಿದೊಡನೆ ಬಹಳ ದಿವಸ
ಮನೆಯ ಕಂಡ ನಾಯಿಯಂತೆ
ಚಳಿಗೆ ಅಡಕವಾದ ಒಂದು
ಮೂಲೆಯಲ್ಲಿ ಮಲಗಿತು. ಇದು
ಏಕೊ ಎಂದು ನಾವು ಹೋಗಿ
ಎಬ್ಬಿಸೋಣ ಎನಲು, ಅಮ್ಮ,
ಸಾಕು ಬಿಡಿರೆ, ಹೊಸದು, ಪಾಪ,
ಇರಲಿ, ಎಂದು ಗದರಿಸಿದಳು.

೪

ನಮ್ಮ ಮುದ್ದು ಮಾಂಬಿ ಅಂದು
ಒಂದು ದಿವಸ ಮಾತ್ರ ತನ್ನ
ಅಮ್ಮನನ್ನು ನೆನೆದು ಮರುಗಿ
ಬಳಿಕ ಅವಳ ಮರೆತೆಹೋಯ್ತು.

ಮಾರನೆ ದಿನ ನಾವು ಎಲ್ಲ
ಏಳುವುದಕೆ ಮುನ್ನ ಎದ್ದು
ತಾರಮಾರ ಮನೆಯಲೆಲ್ಲ
ಅಲೆಯುತಿತ್ತು. ನಾನು ಎದ್ದು
ಹಾಸಿಗೆಯಲಿ ಕುಳಿತುಕೊಳಲು,
ಬಳಿಗೆ ಬಂದು ಬಾಲವನ್ನು
ಕಾಸಿನಷ್ಟು ಆಡಿಸುತ್ತ
ನ್ಯಾಸ್ತಬೇಡಿ ನಿಂತಿತಲ್ಲಿ.

೫

ಎಂತ ಮುದ್ದು ನಾಯಿ ಮಾಂಬಿ!
ಅದರ ಮೂಗು, ಅದರ ಬಾಯಿ,
ದಂತದಂತ ಆದರ ಹಲ್ಲು,
ಕೆಂಪು ಹೊಳಪ ಆದರ ಕಣ್ಣು,
ಜೋಲು ಕಿವಿ; ಎಷ್ಟು ಚೆನ್ನ!
ಚೆಲುವನಾಯಿ ನಮ್ಮ ಮಾಂಬಿ.
ಬಾಲ ಬಿಲ್ಲಿನಂತೆ ಬಾಗಿ
ಎಲ್ಲಕಿಂತ ಬಹಳ ಚೆನ್ನ;
ಹುಬ್ಬುನೋಡೆ ಸಿಂಹದಂತೆ
ಭೀತಿಯಾಗುವಂತೆ ಇಹುದು;
ಅಬ್ಬರಿಸುವ ಕೂಗು ಬೇರೆ;
ಎಳೆಯ ಸಿಂಹ ನಮ್ಮ ಮಾಂಬಿ.

೬

ಹಾಲಿಗೊಂದು ತಟ್ಟೆ ಅದಕೆ;
ಕೊರಳಿಗೊಂದು ತೊಗಲಪಟ್ಟಿ;
ಮಾಲೆಯಂತೆ ಎರಡು ಅಡಿಯ
ತೆಳುವ ಕೊಂಡಿ ಸರಪಳಿ;
ಮಲಗುವುದಕೆ ಗೋಣಿಪಟ್ಟೆ;
ಇರಲು ಬೀದಿ ಬಾಗಿಲ ಬಳಿ
ಚಳಿಗೆ ಬೆಚ್ಚಗಿರುವ ಮೂಲೆ;
ಎಲ್ಲ ನೆಟ್ಟಗಾಯಿತಿಂತು.
ಒಳ್ಳೆ ಸುಟಿಯ ನಾಯಿ, ಮಾಂಬಿ;
ಇದನು ನೋಡಿ ಇನ್ನು ತಾನು
ಇಲ್ಲೆ ಇಹುದ ತಿಳಿದು ಮನೆಯ
ಹೊಂದಿಕೊಂಡಿತೆನ್ನದೆಂದು.

೭

ಯಾರು ಬರಲಿ, ಬಾಗಿಲ ಬಳಿ
ಗೊರ್ ಎಂದು ಹೆದರಿಸುವುದು;
ದಾರಿಯಲ್ಲಿ ಜನರು ನಡೆಯೆ
ಅವರ ನೋಡಿ ಬಗುಳುವುದು;
ತಾನು ಏನೊ ಹಿರಿಯ ಕೆಲಸ
ಮಾಡಿದಂತೆ, ಜಂಭದಿಂದ
ಏನೊ ಒಂದು ಠೀವಿಯಿಂದ,
ನಮ್ಮ ಕಡೆಗೆ ನೋಡುವುದು;
ಒಮ್ಮೆ ನಾವು ಬರಲು ಬಗುಳಿ,
ನಾವು ಎಂದು ತಿಳಿದಮೇಲೆ
ಸುಮ್ಮನಾಗಿ ಮೂಲಗುತ್ತ
ಕ್ಷಮೆಯ ಬೇಡಿ ಎರಗುವುದು.

೮

ಮೂಂಬಿ ಬಂದ ಮೇಲೆ ನಮ್ಮ
ಸುಂದರೀಗೆ ಆಡುವುದಕೆ
ಗೊಂಬೆ ಬೇಡವಾಯ್ತು; ಅವಳು
ಅದರ ಬಳಿಯೆ ಕುಳಿತು ಅದರ
ಕಾಲ ಹಿಡಿದು ಎಳೆದು, ಕಿವಿಗೆ
ಕೈಯನಿಕ್ಕಿ ಆಡಿಸುವಳು;
ಬಾಲ ನುಲಿಚಿ ಗೊರ್ ಎನಲು
ನೋಡಿ ಬಹಳ ನಗುವಳು;
ಪೇಟೆಯಿಂದ ತಂದ ಗೊಂಬೆ
ಹೀಗೆ ಇಹುದೆ? ಇನ್ನು ಇವಳ
ಕಾಟ ಇಲ್ಲ ಗೊಂಬೆಗೆಂದು
ಅಮ್ಮ ಅಂದು ಹೇಳಿದಳು.

೯

ನಾವು ಅದಕೆ ಕೊಟ್ಟ ಬೆಲೆ
ಬಹಳ ಕಮ್ಮಿ ಎನ್ನಬೇಕು.
ಕಾವಲಾಯ್ತು ಮನೆಗೆ, ನಮಗೆ
ಜೊತೆ, ನಮ್ಮ ಸುಂದರೀಗೆ
ಗೊಂಬೆ; ಎಲ್ಲ ನೋಡಿ ತಾತ
ನಾಯಿಮರಿಯ ಕೊಂಡುದೇನೊ
ತುಂಬ ಒಳ್ಳೆ ಕೆಲಸವಾಯ್ತು,
ಎಂದು ಒಮ್ಮೆ ಹೇಳಿದರು.
ಅಣ್ಣ ಅದಕೆ, ಮೂಂಬಿಗಿಂದು
ಪ್ಯಾಸು ಆಯ್ತು ಎಂದು ನಕ್ಕ.
ಸಣ್ಣನಾಯಿ; ಆದರೇನು?
ಬುದ್ಧಿ ಇರಲು ಪ್ಯಾಸು ಇಲ್ಲೆ?

೧೦

ಹೀಗೆ ಇರಲು, ಒಂದು ವರುಷ,
ಮಾಂಬಿಯೊಡನೆ ಆಟದಲ್ಲಿ
ಹೇಗೆ ಎಂದು ತಿಳಿಯದಂತೆ
ಒಂದು ವರುಷ ಕಳೆದುಹೋಯ್ತು.
ಎಲ್ಲಿ ಎಲ್ಲು ನಮ್ಮ ಮಾಂಬಿ;
ಮನೆ ಬೀದಿ ಕೋಟೆ ಪೇಟೆ
ಹಳ್ಳಿ : ಎಲ್ಲ ಕಡೆಯು ನಮ್ಮ
ಜೊತೆಯೊಳಿಹುದು; ನಮ್ಮ ಸುತ್ತ,
ಇವರ ಮನೆಯ ನಾಯಿ ಬಹಳ
ಒಳ್ಳೆ ನಾಯಿ, ಎಂದೆನುವರು;
ಅವರು ಇವರು ಇಲ್ಲ, ಎಲ್ಲ
ಜನವ ಮಾಂಬಿ ಮೆಚ್ಚಿಸಿತ್ತು.

೧೧

ಒಂದು ದಿವಸ ಪೇಟೆಯಲ್ಲಿ
ಅಣ್ಣನೊಡನೆ ಹೋಗಿ, ಒಂದು
ಸಂದಿಯಲ್ಲಿ ಬರುತ ಮಾಂಬಿ
ದಾರಿ ತಪ್ಪಿ ಎಲ್ಲೊ ಹೋಯ್ತು;
ಸುತ್ತಲೆಲ್ಲ ಹುಡುಕಿ ಅಣ್ಣ
ಸಿಕ್ಕದಿರಲು ಚಿಂತೆಯಿಂದ
ಎತ್ತ ಹೋಯ್ತು ಎಂದು ಮನೆಗೆ
ಒಂಟಿಯಾಗಿ ಬಂದರಂದು.
ಹೋದ ನೋವ ನುಂಗಿ ನಾವು,
ಮಾತನಾಡೆ ಅಣ್ಣನನ್ನು
ಬೈದಹಾಗೆ ಆಗೊದೆಂದು,
ಬಾಯತೆರೆಯದಿದ್ದೆವೆಲ್ಲ.

೧೨

ಮೂರು ದಿವಸ ಹೀಗೆ ಇರಲು
ಮಾಂಬಿ, ಗ್ರಹಣ ಹಿಡಿದು ಬಿಟ್ಟ
ಸೂರ್ಯನಂತೆ, ನಾಲ್ಕನೆ ದಿನ
ಉದಯದಲ್ಲಿ ಮನೆಗೆ ಬಂತು.
ಬೀದಿಯಲ್ಲಿ ನಾಲ್ಕು ಕಾಲ
ಓಟದಲ್ಲಿ ಹಾರುತಿಹುದು ;
ಏದುತಿಹುದು ಓಡಿ ಓಡಿ ;
ಏನು ಆದರ ಸಂತಸವೊ !
ಏನು ಹೆಮ್ಮೆ ಏನು ಕುಣಿತ !
ಏನು ಓಟ ತಾರಾಟ !
ಮಾನ ಇಷ್ಟು ಇಲ್ಲದಂತೆ
ಆಡಿತು ಅತಿಸಂತಸದಲಿ.

೧೩

ನಮಗು ಬಹಳ ತುಷ್ಟಿಯಾಯ್ತು ;
ಅದನು ಮೆಚ್ಚಿ ಮುದ್ದಿಸಿದೆವು ;
ಭ್ರಮೆಗೆ ಅಮ್ಮ ಮೂರುದಿನದ
ಹಾಲ ಒಮ್ಮೆ ಕೊಟ್ಟಳದಕೆ.
ತಾತ, ಮಾಂಬಿ ಒಳ್ಳೆ ನಾಯಿ,
ಮನೆಯರಿಯಿತು, ಇನ್ನುಮೇಲೆ
ಭೀತಿಯಿಲ್ಲ ದಾರಿತಪ್ಪಿ
ಎತ್ತಹೋಯ್ತೊ ಏನೊ ಎಂದು,
ಎಂದು ಅದನು ಹೊಗಳಿದರು.
ಮೂರು ದಿವಸ ಅಳುತಲಿದ್ದ
ಸುಂದರೀಗೆ ಆಟಕದರ
ಬಾಲ ಮತ್ತೆ ಸಿಕ್ಕಿತಂದು.

೧೪

ನನಗೆ ಒಂದು ನೋವು ಈಗ.
ನಮ್ಮ ಆಳು ನರಸ, ಅವನ
ಮನೆಯಲಿರಡು ಪಾರಿವಾಳ
ಸಾಕುತಿದ್ದ. ಒಂದು ದಿವಸ
ಮಾಂಬಿ ಅವನ ಜೊತೆಗೆ ಹೋಗಿ
ಅಂಗಳದಲಿ ಕುಳಿತು ಇದ್ದು,
ನಂಬಿಕೆಯಲಿ ಪಾರಿವಾಳ
ಬಳಿಗೆ ಬರಲು, ಅದನು ಹಿಡಿದು
ಕೊಂದಿತಂತೆ. ನರಸ ಅದನು
ಬಿಡಿಸಲೆಷ್ಟೊ ಮಾಡಿದನು.
ಒಂದೆ ಪಟ್ಟು ಹಿಡಿದು ಅದನು
ತಿಂದೆಬಿಟ್ಟಿತಂತೆ ಮಾಂಬಿ.

೧೫

ಮಾಂಬಿಗಂದು ಅಣ್ಣನಿಂದ
ಬಹಳ ಏಟು. ಅವರು ಅದನು
ಕಂಬಕದರ ಸರಪಳಿಯಲಿ
ಕಟ್ಟಿ, ಅದರ ಮುಖದಮೇಲೆ,
ಕಾಲಮೇಲೆ, ಬೆನ್ನಮೇಲೆ,
ಇಲ್ಲಿ ಅಲ್ಲಿ ನೋಡದಂತೆ,
ಸೀಳುವಂತೆ ಹೊಡೆದರದನು.
ಇಲ್ಲ, ಇನ್ನು ಇಲ್ಲ, ಎಂದು
ಹೇಳುವಂತೆ, ಮಾಂಬಿ ಬಹಳ
ಕೂಗಿ ಕೂಗಿ ಅತ್ತಿತಂದು.
ಹಾಳು ಹಕ್ಕಿ ಬಳಿಗೆ ಬರಲು
ಮಾಂಬಿಗಿಷ್ಟು ಗಾಸಿಯಾಯ್ತು!

೧೬

ಮರಳಿ ಮಾಂಬಿಯನ್ನು ಯಾರೊ
ಕದ್ದುಕೊಂಡು ಹೋದರೊಮ್ಮೆ.
ಅರಿತ ನಾಯಿ ಸಮಯನೋಡಿ
ಮನೆಗೆ ತಾನೆ ಬರುವುದೆಂದು
ನಮ್ಮ ತಾತ ಹೇಳಿದರು.
ಮಾರನೆದಿನ ಬಂದೆಬಂತು.
ಚಿಮ್ಮಿಹಾರಿ ಕುಣಿದು ತನ್ನ
ಸಂತಸವನು ಸೂಚಿಸಿತು.
ಓಡಿಹೋಗಿ ಮರಳಿ ಬಹುದು
ಆಟವಾಯ್ತು, ನಿನಗೆ ಏನು
ಧಾಡಿ ಬಂತು, ಎಂದು ಅದನು
ಮತ್ತೆ ನಾವು ಮುದ್ದಿಸಿದೆವು.

೧೭

ಎರಡನೆ ಸಲ ಹೀಗೆ ಹೋಗಿ
ಬಂದ ಮಾಂಬಿ, ಏಕೊ ಏನೊ,
ಚುರುಕು ತಪ್ಪಿ ಮಂಕನಾಯ್ತು;
ಅದರ ಹೊಟ್ಟೆ ಉಬ್ಬರಿಸಿತು;
ಏನು ಇಲ್ಲ ಎಂದೆ ಇರಲು
ಕುಡಿವ ಹಾಲು ಕಡಿಮೆಯಾಯ್ತು;
ಮೌನವಾಗಿ ಮೂಲೆಯಲ್ಲಿ
ಮಲಗಿ ಇಹುದು ಬಹಳವಾಯ್ತು;
ದನದ ವೈದ್ಯರನ್ನು ಕೇಳೆ
ಅದಕೆ ಏನೊ ಒಂದು ರೋಗ,
ಗುಣಕೆ ದಾರಿಯಿಲ್ಲ, ನಾಯಿ
ಉಳಿವುದಿಲ್ಲ, ಎಂದರವರು.

೧೮

ಮೂಗು ಜೀವ! ಹೇಳಬರದು;
ಆದರೇನು ನೋವು ಉಂಟು;
ರೋಗ ಹಾಗೆ ಹೆಚ್ಚು ಆಯ್ತು;
ದಿನಕೆ ದಿನಕೆ ಹಾಲೆ ಬೇಡ.
ತಾತ, ಅದರ ಪಾಡು ನೋಡಿ,
ಅಯ್ಯೊ ಪಾಪ ಎಂದು ಬಹಳ
ಪ್ರೀತಿಯಿಂದ ಬಳಿಗೆ ಹೋಗಿ,
ಸ್ವಲ್ಪ ಕುಡಿ, ಎನ್ನುವರು,
ಎನಲು ಮೊದಲು ಸ್ವಲ್ಪ ನೆಕ್ಕಿ,
ಬಾಯ್ಗೆ ಬೇಡ, ಸುಮ್ಮನಿಹುದು.
ತನಗೆ ಕೃಪೆಯು ತೋರಿದುದಕೆ
ವಂದಿಸುತ್ತ ಮೂಲಗುವುದು.

೧೯

ದಿನಕೆ ದಿನಕೆ ಹೀಗೆ ಮಾಂಬಿ
ಮರುಗಿ ಕೊರಗಿ ಕುಸಿದು ಹೋಯ್ತು,
ಕೊನೆಯ ದಿವಸ ಮನೆಯ ಹೊರಗೆ
ಕಲ್ಲು ಮಂಚದಡಿಗೆ ಹೋಗಿ,
ಮುನ್ನ ಕಾಲ ಚಾಚಿ, ತಲೆಯ
ನೆಲದೊಳಿಟ್ಟು ಮಲಗಿತಲ್ಲಿ.
ಚಿನ್ನ, ಮಾಂಬಿ, ಹೇಗಿರುವೆ,
ಎಂದು ನಾವು ಹೋಗಿ ನುಡಿಸೆ,
ಕಷ್ಟವೆಂದು ಹೇಳುವಂತೆ
ಮೂಲಗುವುದು ಮರುಗುವುದು.
ಅಷ್ಟು ದಿನದ ಆಟದ ಸುಖ
ನೋವಲೆಮಗೆ ಮರೆಯಿತೆಂದು.

೨೦

ಅಂದು ಸಂಜೆ ಹೋಯ್ತು ಮಾಂಬಿ.
ನಾನು ನೋಡಲಾರದತ್ತೆ;
ಸುಂದರೀಗೆ ಇನ್ನು ಜೀವ
ಗೊಂಬೆಯಿಲ್ಲ ಎನುತ ತಾತ
ಮೋರೆಯನ್ನು ಒಂದು ಕಡೆಗೆ
ತಿರುಗಿಸಿದರು; ಕಣ್ಣಿನಲ್ಲಿ
ನೀರು; ಅಣ್ಣ ಅಮ್ಮ ಎಲ್ಲ
ಕಣ್ಣುನೀರು ಹಾಕಿದರು;
ಕೊನೆಗೆ ನರಸ ಶವವನೆತ್ತಿ
ಹೂಳುವುದಕೆ ಕೊಂಡುಹೋದ;
ನನಗೆ ಮನಸು ಮನೆಗೆ ಮನೆಯೆ
ಬರಿಯದಾದ ರೀತಿ ಇತ್ತು.

೨೧

ಆಳದೊಂದು ಹಳ್ಳಮಾಡಿ
ನಾಲ್ಕು ಹಿಡಿ ಉಪ್ಪುಹಾಕಿ
ಹೂಳಿ ಅದನು ನರಸ ಮತ್ತೆ
ಬರಿಯ ಕೈಲಿ ಮನೆಗೆ ಬಂದ.
ದಾರಿತಪ್ಪಿ ಊರಲೆಲ್ಲೊ
ಹೋಗಬಾರದಿತ್ತೆ ಮಾಂಬಿ!
ಮಾರನೆಯಲೊ ಮೂರರಲ್ಲೊ
ಮನೆಗೆ ಮರಳಿ ಬರುತಲಿತ್ತು!
ಬರದೆ ಇದ್ದರೂವೆ ಸಮನೆ;
ಜೀವದಿಂದ ಇರಲು ಸಾಕು.
ಮರಳಿ ಬರದ ತೆರದಿ, ಎಲ್ಲು
ಇರದ ತೆರದಿ, ಹೋಯ್ತು ಮಾಂಬಿ.

೨೨

ಅಣ್ಣ, ಅದನು ಒಂದು ದಿವಸ
ಬಹಳ ಹೊಡೆದೆ, ಎಂಬರೊಮ್ಮೆ;
ಇನ್ನು ಸ್ವಲ್ಪ ಅನ್ನಹಾಲು
ಕೊಡದೆ ಹೋದೆ ಎಂಬಳಮ್ಮ;
ಸಾಂಬಮೂರ್ತಿ, ಅದನು ಬಹಳ
ಓಡಿಸಿದೆನು, ಎನುತಲಿಹನು;
ಮಾಂಬಿಯನ್ನು ನಾನು ಕೂಡ
ಇನ್ನು ಸ್ವಲ್ಪ ಪ್ರೀತಿಯಿಂದ
ಕಾಣಲಾಗುತಿತ್ತು ಎಂದು
ಒಮ್ಮೆ ನಾನು ಯೋಚಿಸುವೆನು;
ಏನುಮಾಡುವುದಕು ಈಗ
ಸಮಯವಲ್ಲ; ಮಿಂಚಿಹೋಯ್ತು.

೨೩

ಮಾಂಬಿ ಹೋಗಿ ಇಂದಿಗೀಗ
ಹತ್ತುದಿವಸವಾಗಿ ಹೋಯ್ತು;
ನಂಬುವುದಕೆ ಸಾಧ್ಯವಿಲ್ಲ
ಇಷ್ಟುದಿವಸವಾಯಿತೆನಲು;
ಮಾಂಬಿ ಎಲ್ಲಿ ಅಕ್ಕ ಎಂದು
ನನ್ನ ತಂಗಿ ಇಂದುಕೇಳೆ
ಸಾಂಬಮೂರ್ತಿ ಅಳುತ ನಿಂತ;
ಅಣ್ಣ ಅದಕೆ, ಯಾಕೆ ಅಳು,
ಬೇರೆ ನಾಯಿ ತರುವ, ಎನಲು
ಸಾಂಬಮೂರ್ತಿ ಕೋಪದಿಂದ,
ಯಾರಿಗಣ್ಣ, ನನಗೆ ಬೇಡ,
ಎಂದ. ನಾನು ಹಾಗೆ ಎಂದೆ.

೨೪

ಮಾಂಬಿ ಹೋದಮೇಲೆ ಇನ್ನು
ಬೇರೆ ನಾಯಿ ಏಕೆ ನಮಗೆ?
ರಂಭೆಯಂತ ನಾಯಿ ಮಾಂಬಿ.
ಇನ್ನು ಅಂತ ನಾಯಿ ಉಂಟೆ?
ನಿನ್ನೆ ರಾತ್ರಿ ಕನಸಿನಲ್ಲಿ
ಮಾಂಬಿಯನ್ನು ಕಂಡು ನಾನು
ನನ್ನ ಮಾಂಬಿ, ಸತ್ತೆ ನೀನು
ಎಂದೆವಲ್ಲ, ಸುಳ್ಳು ಅದು!
ಎನುತ ಅದನು ಹಿಡಿಯಹೋಗಿ
ಎದ್ದು ಕುಳಿತು ಕನಸನರಿತೆ.
ಕನಸೆ ಸರಿ, ಇನ್ನು ಮಾಂಬಿ,
ಬರಿಯದೊಂದು ಕನಸು ನೆನವು.

# ನಟರಾಜ

ನಿನ್ನ ನಾಟ್ಯವನು ಬಣ್ಣಿಸೆ, ಪರಶಿವ,
ಪನ್ನಗೇಶನಿಗು ಅಸದಳವಪ್ಪುದು;
ನಿನ್ನ ನಾಟ್ಯವಿದು ಭಾವಕು ಅಸದಳ
  ನಟರಾಜಾ! ನಟರಾಜ.

ಉಂಗುಟದಂಚಿನ ತುದಿಯೊಳು ನಿಂದಿಹ
ಅಂಗೋಪಾಂಗದ ವೈಖರಿಯಂದದ
ಭಂಗಿಯು ಚಿತ್ರವಿಚಿತ್ರವಾಗಿಹುದು
  ನಟರಾಜಾ! ನಟರಾಜ.

ತಾಂಡವದಾವರ್ತದೊಳಖಿಳ ಬ್ರ
ಹ್ಮಾಂಡದ ಸರಣಿಯನೆಸಗುತಲೆಲ್ಲವ
ಭಾಂಡವನೊಡೆವವೊಲೊಡೆಯುವೆ ನೀನೇ
  ನಟರಾಜಾ! ನಟರಾಜ.

ಭೂಲೋಕ ಭುವರ್ಲೋಕಾದಿ ಲೋಕ
ಮಾಲೆಯು ಸಾಲ್ಗಳು ನಿನ್ನ ನಾಟ್ಯದಲಿ
ಕಾಲದಿ ಬರುವುವು ಕಾಲದಿ ಮರೆವುವು
  ನಟರಾಜಾ! ನಟರಾಜ.

ತಾಂಡವವಿದರೀ ಭರದೊಳಖಿಳ ಮಾ
ರ್ತಾಂಡರು ಚಂದ್ರರು ಉಡುಗಣ ಗಗನದ
ಭಾಂಡದಂತರದೆ ಚಲಿಸುತಲಿರುವರು
  ನಟರಾಜಾ! ನಟರಾಜ.

ಕಡುವೇಗದಿ ನೀ ಸುತ್ತುತಲಿಂತಿರೆ
ಪಡು ಮೂಡಲು ಕೀಳ್ಮೇಲೆಂದೆಂಬದು
ಬಡಗು ತೆಂಕಣವು ಮರೆದಿವೆ ನಿನ್ನೊಳು
ನಟರಾಜಾ! ನಟರಾಜ.

ಕೇಶದಾಮವಿದು ನಾಟ್ಯದ ತೀವ್ರಾ
ವೇಶದಿ ಕೆದರುತೆ ಸೃಷ್ಟಿಗೆ ತಾನಾ
ಕಾಶದ ವಿಸ್ತರವಾಗಿ ಕಾಣುತಿದೆ
ನಟರಾಜಾ! ನಟರಾಜ.

ವೇಗದ ಸುತ್ತಿನ ರಭಸದಿ ಪೃಥ್ವಿ
ಸಾಗರ ಬಾಂದಳ ತಿರುವ ಬುಗರಿಯೊಲು
ವೇಗದೊಳೇ ನಿಶ್ಚಲವೆನೆ ತೋರ್ಪುವು
ನಟರಾಜಾ! ನಟರಾಜ.

ತಾರುವಾರು ಓಡಾಡುತಲಿಹವೊಲು
ತೋರುವ ಲೋಕದ ನಡೆನುಡಿಯೆಲ್ಲ
ಸೇರಿಯೆ ಇಹುದೀ ನಾಟ್ಯದ ಲಯದಲಿ
ನಟರಾಜಾ! ನಟರಾಜ.

ಡಮರುಕ ಡಕ್ಕಿಯ ಶಬ್ದವಿತಾನ
ಕ್ರಮದಿಂ ಸೃಷ್ಟಿಯನೆಲ್ಲ ತುಂಬಿರಲು
ಭ್ರಮೆಯಿಂ ಚೇತನ ನಾನೆನ್ನುತಲಿವೆ
ನಟರಾಜಾ! ನಟರಾಜ.

ಕುಬ್ಜಮಾನಿಸನ ನಿನ್ನಯ ಮೃದುಪದ
ದಬ್ಜದ ತುದಿಯಂ ತುಳಿದಿಹೆ; ಉದಯದ
ಅಬ್ಜದವೊಲು ಮೊಗ ಕಣ್ಗಳು ನಗುತಿವೆ.
ನಟರಾಜಾ! ನಟರಾಜ.

ಭೀಕರವಾಗಿದೆ ಕಾಲಿನ ತುಳಿತ;
ಆಕಾರವೆತ್ತ ದಯೆಯೊಲು ನಗೆಯಿದೆ;
ಶ್ರೀಕರ ಶುಭಕರ ಶಂಕರ ಪರಶಿವ,
ನಟರಾಜಾ! ನಟರಾಜ.

ಕೆಟ್ಟುದ ಕಳೆದದರೆಡೆಯಲಿ ಒಳ್ಳಿದ
ಇಟ್ಟದನೆಲ್ಲೆಡೆ ಸಂತತ ಬೆಳೆಯಿಪ
ದಿಟ್ಟತನದ ನಟವಿದ್ಯೆಯಿದಪ್ಪುದು
ನಟರಾಜಾ! ನಟರಾಜ.

ಎನ್ನೀ ಹೃದಯದ ದೋಷವನೆಲ್ಲವ
ನಿನ್ನಿಯ ನಗೆಯಲಿ ಮೆಲ್ಲನೆ ಕಳಚಿ
ನಿನ್ನಡಿಗೆಡೆಯನು ಮಾಡಿಕೊ ನನ್ನಲಿ
ನಟರಾಜಾ! ನಟರಾಜ.

ಅಂದೀ ಬಾಳಿದು ಶಾಂತಿಯ ಕಾಂಬುದು,
ಚೆಂದದ ನಿನ್ನಯ ನಾಟ್ಯದಿ ಕಲೆವುದು,
ಕುಂದದ ಸುಖದಲಿ ತನ್ನನು ಮರೆವುದು,
ನಟರಾಜಾ! ನಟರಾಜ.

# ನಾಲ್ವತ್ತರ ನಲುಗು

ದಸಿ :

ಅತ್ತೆಯ ಮಗಳೆ, ಮುತ್ತಿನ ಚೆಂಡೆ,
ಯಾವೆಡೆಯಿಂದ ಹೊರಟನ್ನಾವೆಡೆ
ಸುತ್ತಿ ಸುಳಿದು ನನ್ನನು ಕಂಡು
ಜೀವನವಿದ ಬೆಳಗಲು ನೀ ಬಂದೆ?

ಮಾವನ ಮಗಳೆ, ಮಲ್ಲಿಗೆಯರಳೆ,
ಲೋಕದ ಮಾತೆ ನನ್ನಯ ಬಾಳ
ಪಾವನಗೆಯ್ಯಲು ತಾನೊಲುಮೆಯಲಿ
ಸಾಕಿದ ನಿನ್ನನು ಕಳುಹಿದಳಹುದು.

ಬಾಳಿನ ಬೆಳಕೆ, ಜೀವದ ಕಳೆಯೆ,
ಒದವಿದ ಸೊಗಸೆ, ನೀತಿಯ ನೆಲೆಯೆ,
ಹೇಳದೆ ಧರ್ಮವ ಕಲಿಸುವ ಗುರುವೆ,
ಬದುಕಿದು ಬದುಕೆ ನೀನಿದನುಳಿಯೆ?

ಪಾರ್ದನಿ :

ಎನ್ನರಸ, ಚೆನ್ನರಸ,
ನಿನ್ನಡಿಯ ಸೋಂಕಿನಲಿ
ಎನ್ನೆದೆಯ ಕಲ್ಲರಳಿ
ಹೆಣ್ಣಾದೆ ನಾನು.

ಎನ್ನರಸ, ಪೊನ್ನರಸ,
ಚೆನ್ನಿಗನೆ ನೀನಾಗಿ
ತನ್ನದೆಂದೆನ್ನಸುವ
ಮನ್ನಿಸಿದನಹುದು.

ಚೆನ್ನರಸ, ದೊರೆ, ಎನ್ನ
ಕಣ್ಣ ತಣಿಸುವ ಹಸುರೆ,
ಎನ್ನುಸಿರಿನೊಳ ಉಸಿರೆ,
ರನ್ನ, ಸಂಪನ್ನ.

# ಹನುಮನ ಗಿರಿ

ಹನುಮನಗಿರಿಯೆ ಸೊಗಸಿನ ನೆಲೆಯೆ
ಎನಿತೀ ನಿನ್ನಯ ಸೊಗಸೆನಿತು;
ಎನಿತೀ ನಿನ್ನಯ ಶಾಂತಿಯ ತನಿರಸ
ಎನಿತೀ ನಿನ್ನಯ ವಿಮಲತೆಯು.

ನಿನ್ನನು ನೋಡಿದ ಮೊದಲಲೆ ನಾನು
ಸೋತೆನು ನಿನ್ನೀ ಗುಣಗಳಿಗೆ;
ನಿನ್ನಯ ಸಖ್ಯವನಾಶಿಸಿ ನಿನ್ನನು
ಪ್ರೀತಿಸಿ ಬಳಿಯನು ಸಾರಿದೆನು.

ಅಡಿಯಲಿ ಸುಳಿಯುತ ಭುಜದಲಿ ನಡೆಯುತ
ನೋಡುತ ನೋಡುತ ನಿನ್ನನು ನಾ,
ಕಡೆಮೊದಲಿಲ್ಲದ ನಿನ್ನೀ ಸೊಬಗಿನ
ಗಾಡಿಯನರಿತೆನು ಬಳಕೆಯಲಿ.

ಊರನು ಬಿಟ್ಟು ಹೊಲದಲಿ ಬಿದ್ದು
ಅಡಿಯನು ಸೇರುತಲೀ ದಾರಿ
ಏರುವುದಿಪ್ಪೆಯ ನೆಳಲಲಿ ನಿನ್ನಯ
ನಡುಗನು ಕಾಣದ ಭುಜದೆಡೆಯ.

ಬಹುದಿನ ನಿನ್ನಯ ಸ್ನೇಹದಿ ಬೆಳೆದಿಹ
ಅರಳಿಯ ಮರವಿದು ಸೊಗಸುವುದು.
ಸಹಜ ಸಖ್ಯವಿದು, ವಿಮಲತೆ ಉನ್ನತಿ
ಸರಳತೆಯಲಿ ಸರಿಯುಹ ನಿಮಗೆ.

ಭುಜದಲಿ ನಿಂದು ಈ ಕಡೆ ನೋಳ್ಪೆನೆ
 ನೂರರ ಸಾವಿರದಲಿ ನೆರೆದ
ಪ್ರಜೆಯನು ಪೊರೆಯುವ ನಗರವು ದಿಕ್ಕಿನ
 ಮೇರೆಗೆ ಹಬ್ಬಿದೆ; ಈ ಕಡೆಗೆ

ತಳಿರಿನ ಮರಗಳ ದೂರದ ಊರ್ಗಳ
 ದಾರಿಯು ಗುರುತಿನ ಸಿಂಗರದಿ
ಮೆಲುಮೆಲನಿಳಿಯುತ ಮೆಲುಮೆಲನೇಳುತ
 ಮೇರೆಗೆ ಹರಡಿದೆ ಹೊಲಬಯಲು.

ಸುತ್ತಲು ಸೊಗಸಿನ ತಾಣಗಳಿಲ್ಲಿ;
 ಅವುಗಳಿಗೆಲ್ಲಕು ಮಿಗಿಲಾಗಿ
ಉತ್ತುಂಗಾಕೃತಿಮಧ್ಯದಿ ನೀನಿಹೆ;
 ರವಿಯೆನೆ ಗ್ರಹಗಳ ವ್ಯೂಹದಲಿ.

ಇಲ್ಲೀ ತೋಪು; ಗೋಪುರ ಕಟ್ಟಿಹ
 ನರಹರಿರಾಯನಗಿರಿ ಇಲ್ಲಿ;
ಇಲ್ಲೀ ಊರು; ಸಾರೆಗೆ ಗೌಡನ
 ಕೆರೆಯುರುನೀರಿನ ಹರಹಿಲ್ಲಿ.

ಒಂದೆಡೆ ಮರಳಿನ ಶಯ್ಯೆಯ ಕಾಲುವೆ
 ಹೊಂಗೆಯ ಮರದಡಿ ಕಾಣುವುದು;
ಒಂದೆಡೆ ಮರಗಳ ಮನೆಗಳ ಮಧ್ಯದೆ
 ಗಂಗಾಧರನೀ ದೇಗುಲವು.

ದೂರದೆ ತಗ್ಗಿನ ಹೊಲದಲಿ ಕೊಳ; ಆ
ಬದಿಯಲೆ ಮಂಟಪ; ತಗ್ಗಿನಲಿ
ಓರಣೆ ಮರೆಯದೆ ಮರಗಳ ಸಾಲು
ಹುದುಗಿದೆ ದೆಸೆಗಳ ಕೊನೆವರೆಗೆ.

ನಿನ್ನೊಳು ನಿಂದು ಎಲ್ಲವ ನೋಡಲು
ಎಲ್ಲವ ಸೊಗಸಲಿ ನೀ ತೋರ್ಪೆ;
ನಿನ್ನನು ಎಲ್ಲಿಂ ನೋಡಿದೆನಾದರು
ಎಲ್ಲಕೆ ನೀ ಮಿಗಿಲೆನೆಕಾಂಬೆ.

ಗೋಪುರಗಳಲಿ ನೆರೆಯೀಗಿರಿಗಳು
ತೊಳಗಲು ನೀನದ ನೋಡುತಲಿ
ತಾಪಸವೃತ್ತಿಯ ಶಾಂತಿಯೊಳಾಳುತ
ಎಳೆಯರ ಪೆರುಮೆಯೊಳುಬ್ಬಿರುವೆ.

ನೀನೇ ಪಾವನ; ಶಿರದಲಿ ಹನುಮನ
ಧರಿಸುತೆ ಪಾವನತೆಯ ಮುಡಿಸಿ,
ಸಾನುಕ್ರೋಶದಿ ಕೊಡುತಿಹೆ ಸಾರುವ
ಕರಗಿದ ಹೃದಯಕೆ ಶಾಂತಿಯನು.

ಹಿಮಗಿರಿ ಹಿರಿದು, ವಿಂಧ್ಯವು ಹಿರಿದ ;
ಆದರೆ ಅವು ಸರಿ ಹಿರಿಯರಿಗೆ;
ವಿಮಲನೆ ಅಲ್ಲದೆ ಸುಲಭನು ಆಗಿ
ಸೋದರ ನೀನಹೆ ಕಿರಿಯರಿಗೆ.

ನಿನ್ನಯ ಭುಜದಾಶ್ರಯವನು ಸೇರಿ
ಕವಿತೆಯನೆಸಗಿದೆ ನಾನೊಪ್ಪ್ರ;
ಅಣ್ಣನ ಭುಜವಡರ್ದೆಳೆಯನು ಹರುಷದ
ತವಕದೆ ನುಡಿಯುವ ಜಲ್ಪದೊಲು.

ಒಳ್ಳೆಯನಲ್ಲವು ನಿನ್ನೊಲು ನಾನು;
ಆದರು ನಿನ್ನಯ ಸಖನಾಗೆ
ಮೆಲ್ಲನೆ ಆಶಿಸಿ ಬಂದೆನು ನಿನ್ನೆಡೆ;
ಸಾದರನಾಗುತೆ ನೋಡೆನ್ನ.

ನಿನ್ನಯ ವಿಮಲತೆ ಸೌಮ್ಯತೆ ಸರಳತೆ
ನಿನ್ನೀ ಉನ್ನತಿ ಪರತೃಪ್ತಿ
ಇನ್ನಿನಿಸಾದರು ಬೆರೆಯಲಿ ನನ್ನಲಿ;
ಅಣ್ಣಾ ಸಖನಾಗಿರು ನನಗೆ.

ಹನುಮನಗಿರಿಯೆ ಸೊಗಸಿನ ನೆಲೆಯೆ
ಎನ್ನಯ ನಿನ್ನಯ ಕೆಳೆಯಿಂತು
ಅನುದಿನ ಬೆಳೆಯಲಿ, ನಿನ್ನೀ ಹಿರಿತನ
ಎನ್ನೀ ಬಾಳಲಿ ಕಾಣಿಸಲಿ.

# ಕನಕದಾಸರ ಕತೆಗಳು

ಮುನ್ನೊಮ್ಮೆ ನಾ ನಿಮಗೆ ನಮ್ಮ ಸೀಮೆಯ ಕೆಲವು
ಊರ ಹೆಸರನು ಕುರಿತ ಕತೆಗಳನು ಹೇಳಿದೆನು;
ನೆನಪಿಹುದೆ ಅದು? ಇಂದು ನಮ್ಮ ಹಿರಿಯರು ಜನಕೆ
ತಿಳಿವ ತರಲೆಂದು ಹೇಳಿರುವ ಕತೆಗಳು ಕೆಲವ
ಹೇಳುವೆನು, ಲಾಲಿಸಿರಿ. ಇವು ಬರಿಯ ಕತೆಯಲ್ಲ.
ರಾಮದೇವರು ತೆಲುಗು ಮಾತನಾಡಿದರೆನಲು
ನೀವಿಂದು ನಂಬಿರಲೆ; ಪರಶಿವನು ಕನ್ನಡದಿ
ಬಂದಳೀಕೆ ಎಂದು ಪಾರ್ವತಿಯ ಹೇಳಿದನು
ಎಂದು ನಾನೆನೆ ನಂಬಲಾರಿರಲೆ. ನುಡಿಯೆಲ್ಲ
ದೇವನಿಂದಲೆ ಬಹುದು; ದೇವನನೆ ಹೊಗಳುವುದು;
ಗೀರ್ವಾಣ ಭಾಷೆ ಹೂಣರ ಭಾಷೆಯಲಿ ಎಂತೊ
ಅಂತೆ ಕನ್ನಡವೆಂಬ ತೆಲುಗೆಂಬ ನುಡಿಗಳಲಿ
ಕೇಳಿಸುವುದವನ ನುಡಿಯೊಂದೆ. ಬದುಕಲಿ ನಡೆಯೆ
ದೇವರಾಡುವ ಮಾತು ಇಂತ ಅಂತಹುದಲ್ಲ,
ಯಾರಿಗೇತರಮಾತು ಬೇಕೆನಲು ಅದರಂತೆ
ಅವನು ನುಡಿಯುವನೆಂದು ತಿಳಿಯುವಿರಿ. ಅದು ಇರಲಿ.
ಇಂದು ನಾ ಹೇಳಲಿಹ ಕತೆ ಬೇರೆ ರೀತಿಯವು.
ಹರಿದಾಸರಲಿ ಹಿರಿಯರಲಿ ಗಣ್ಯರಾಗಿರುವ
ಕನಕದಾಸರ ಕುರಿತ ಕತೆ. ಅವರ ಬಾಳಿನಲಿ
ಅನುಭವಿಸಿ ತಿಳಿದ ಸಂಗತಿ. ಇದನು ಭಕ್ತಿಯಲಿ
ಸಾವಧಾನದಿ ಕೇಳಿ; ನಾ ಹೇಳ್ವ ರೀತಿಯಲಿ
ತಪ್ಪಿರಲು ಮನ್ನಿಸಿರಿ.

ಕನಕದಾಸರ ಜನ್ಮ

ಕುರುಬರಲಿ ಎಂಬುದನು ಕೇಳಿರುವಿರಲೆ. ಅವರು

ಬೇಡರಲಿ ಜನ್ಮವೆತ್ತಿದರೆಂದು ಕೆಲಜನರು
ಹೇಳುವರು; ಇದು ತಪ್ಪು; ದಾಸರೇ ಒಂದು ಕಡೆ
"ನಾವು ಕುರುಬರು ನಮ್ಮ ದ್ಯಾವರು ಬೀರೈಯ"
ಎಂದು ಹೇಳಿರುವರು. ಆ ಕೃತಿಯ ನಾ ಬಲ್ಲೆ.
ಯಾರೊ ಅವರನು ಇವನು ಕುರುಬ ಎಂದಿರಬೇಕು;
ಅದಕೆ ಪ್ರತಿಯಾಗಿ ದಾಸರು ಕೋಪವಮಾಡದಲೆ,
ನಾವು ಕುರುಬರು ಅಹುದು, ನಮ್ಮ ದ್ಯಾವರು ಕೂಡ
ಬೀರೈಯ, ನಮ್ಮಜ್ಜ ಕುರಿಗಳನು ಮೇಯಿಸುವ,
ನರಕುರಿಗಳನು, ಎಂದು ಮೊದಲಾಗಿ ಹೇಳಿದರು
ಎಂದು ಅರಿವಹುದೆನಗೆ. ದಾಸರಿಗೆ ಗುರುಗಳಲಿ
ಬಹುಗಾಢಭಕ್ತಿ. ಈ ತೆರನ ಗುರು ಬಲ್ಲರು;
ಆದರಿಂದ ದಾಸರನು ಪ್ರೀತಿಯಲಿ ನುಡಿಸುವರು.
ಸಲಿಗೆಯಲಿ ಬರುತ ಹೋಗುತ ಗುರುವ ಬಳಿಯಲ್ಲಿ
ಮಾತನಾಡುತ ನಿಲುವ ಕುರುಬರವನನು ನೋಡಿ
ಶಿಷ್ಯವರ್ಗದಲಿ ಕೆಲಜನಕೆ ಅಸಮಾಧಾನ.
ಏನು ಇವನದು ಹೆಮ್ಮೆ, ಎಷ್ಟಾದರೂ ಇವನು
ಕುರುಬರವ, ಜಾತಿಯಲಿ ನಮಗೆಲ್ಲ ಕಡಿಮೆಯವ,
ಇವನಿಗೇನೋ ನಮ್ಮ ಗುರು ಮರುಳುಹೋಗಿಹರು,
ಎಂದು ಈ ಜನ ಒರ್ವರೊರ್ವರಲಿ ಗೊಣಗುವರು.
ಗುರುಗಳಿಗಿದೇನು ತಿಳಿಯದೆ? ಅವರು ಒಂದು ಸಲ
ಈ ಮೂಢಜನಕೆ ಬುದ್ಧಿಯ ಕಲಿಸಬೇಕೆಂದು
ಎಲ್ಲರೂ ಇರುವಂದು ಇಂತೆಂದು ನುಡಿದರು.
"ಬುದ್ಧಿ ಸರಿಯೆಂದ ಮಾತ್ರಕೆ ತತ್ತ್ವ ಹೃದಯದಲಿ
ಸಿದ್ಧಿಯಾದಂತಲ್ಲ; ಬಹು ಕಷ್ಟ. ನಾವೆಲ್ಲ

ದೇವರೆಲ್ಲಿಹನೆನಲು ಎಲ್ಲೆಡೆಯು ಇಹನೆಂದು
ಒಡನೆ ನುಡಿವೆವು. ನಮ್ಮ ಬುದ್ಧಿ ಇದ ತಿಳಿದಿಹುದು.
ಆದರೂ ನಾವು ಎಲ್ಲೆಡೆ ಎಲ್ಲ ಕಾರ್ಯದೊಳು
ಹರಿ ಇಲ್ಲಿ ಈಗ ಇಹನೆಂದು ನಡೆಯುವುದಿಲ್ಲ.
ಬುದ್ಧಿಯೊಪ್ಪಿದ ತತ್ತ್ವ ಎಲೆಯ ಮೇಲಿಹ ಊಟ.
ಬದುಕಿನಲಿ ಸಿದ್ಧಿಯಾಗುವ ಮುನ್ನ ಅದು ನಮ್ಮ
ಹೃದಯದೊಳಹೊಕ್ಕು ರಕ್ತದಲಿ ಸೇರಿರಬೇಕು,
ಅಸ್ಥಿಗತವಾಗಿ ಬಾಳನು ತಿದ್ದಿ ನಿಲಬೇಕು.''
ಎಂದು ಬೋಧಿಸಿದ ಗುರುಗಳ ಮಾತ ಕೆಲಜನರು
ನಿಜವೆಂದು ಮನದೊಳೊಪ್ಪಿದರು. ಕೆಲಜನ ಇದಕೆ
''ದೇವರಿಹುದನು ಹೃದಯದೊಳಹೊಗಿಸಿ ರಕ್ತದಲಿ
ಸೇರಿಸೆಂದರೆ ಏನು? ಅಸ್ಥಿಗತವಾಗಲಿಕೆ
ಅದು ಏನು ಜ್ವರವೆ? ದೇವರು ಇರುವನೆಂಬ ನುಡಿ
ನಿಜವೆ ಸರಿ. ಎಲ್ಲಿಯೂ ಇಹನು. ಇದನರಿಯೆವೆ?
ಇದ ಮರೆದು ನಡೆವುದೆಂದರೆ ಏನು? ಏನು ಇದು?''
ಎಂದು ತಮ್ಮೊಳು ತಾವೆ ನೆನೆದುಕೊಂಡರು. ''ಕನಕ,
ನೀನು ಇದಕೇನು ಹೇಳುವೆ'' ಎಂದು ಗುರು ಕೇಳೆ,
''ನನ್ನೊಡೆಯ, ನಿಮ್ಮಡಿಗೆ ಇದ ಬಿನ್ನಯಿಸಲೇಕೆ?
ಪಾವನರ ಬದುಕಿನಲೆ ಬುದ್ಧಿಗೊಪ್ಪಿದ ತತ್ತ್ವ
ಎದೆಯನಪ್ಪುವ ಮುನ್ನ ಕಾಲ ಕಳೆದಿರಬೇಕು.
ಅದರಿಂದ ಇಂತು ಅಪ್ಪಣೆಯಾಯ್ತು; ತಾವು ದೊರೆ,
ಉಳಿದವರು ಆಳು; ತನುಗಾದುದಕೆ ನೂರುಮಡಿ
ಕಷ್ಟ ಇತರರಿಗಾಗಬೇಕು; ಇದು ನಿಶ್ಚಯ.
ಬುದ್ಧಿಯೊಪ್ಪಿದ ಪಾಟ ಮದುವೆದಿಬ್ಬಣದಾಟ;

ಸಿದ್ಧಿ ಮನವನು ಮನಕೆ ಮೆಚ್ಚಿಸುವ ತಿಳಿನೋಟ.
ನನ್ನ ದೇವರ ಇರವ ನಿಮ್ಮನುಗ್ರಹದಿಂದ
ಇಂದು ತಿಳಿದಿಹೆನು. ಇನ್ನೆಂದು ಕರುಣಿಸುವಿರೋ,
ಇನ್ನು ತಾವರೆತೆರನ ಅವನ ಪದಗಳನೆಂದು
ನಿಮ್ಮ ಕೃಪೆಯಿಂದ ಕಾಣುವೆನೊ" ಎಂದರು ಅವರು.
ಗುರು ಇದಕೆ ತಲೆಯ ತೂಗಿದರು; ಸಂತೋಷದಲಿ
"ಕನಕಣ್ಣ ತತ್ತ್ವವನು ವಿವರಿಸುವ ರೀತಿಯಿದು
ನಮ್ಮ ಹಿರಿಯರ ರೀತಿಯನು ಮನಕೆ ತರಿಸುವುದು.
ಚೆನ್ನಾಗಿ ಹೇಳಿದನು," ಎಂದವರ ಹೊಗಳಿದರು.
ಶಿಷ್ಯರಲಿ ತೃಪ್ತಿಗೇಡಿಗಳು ಇದ ಕೇಳುತ್ತೆ,
ಕುರುಬದಾಸನ ವೇಷ ನೋಡು. ಭೇಷಜ ನೋಡು,
ಕುರುಬ ಬಹು ಆಷಾಢಭೂತಿಯಾವನು ಎಂದು
ತಮ್ಮ ತಮ್ಮಲೆ ನೆಸೆದರು. ಮಾರನೆಯ ದಿವಸ
ಗುರು ಇವರನೊಮ್ಮೊಮ್ಮೆ ಓರೋರ್ವರನೆ ಕರೆದು
ಓರೋರ್ವನಿಗೆ ಒಂದು ಕಳಿತ ಬಾಳೆಯಹಣ್ಣ
ಕೈಗಿತ್ತು, "ಈ ಹಣ್ಣ ತಿನಲು ನಿನಗೊಳಿತಹುದು,
ಒಬ್ಬನೇ ಹೋಗಿ ಯಾರೂ ಇಲ್ಲದೆಡೆ ನೋಡಿ
ಇದ ತಿಂದು ಬಾ" ಎಂದು ಕಳುಹಿದರು. ದಾಸರನು
ಬಳಿಗೆ ಕರೆದವರಿಗಿತ್ತಂತೆ ಅವರಿಗು ಒಂದು
ಹಣ್ಣಿತ್ತು ಅವರಿಗೆಂದಂತೆಯೇ ಹೇಳಿದರು.
ಸಂಜೆಯಲಿ ಮತ್ತೆ ಗುರುವಿನ ಬಳಿಗೆ ಎಲ್ಲರೂ
ಬಂದು ಸೇರಿರಲು ಹಣ್ಣನು ಕೊಂಡ ಶಿಷ್ಯರಲಿ
ಗುರು ಒಬ್ಬನನು ಕರೆದು ಎಲ್ಲರೆದುರಲಿ ಅವನ
ಹಣ್ಣನಾವೆಡೆ ತಿಂದೆ ಎಂದು ಕೇಳ್ದರು. ಅವನು

"ಊರ ಮುಂಗಡೆ ತೋಪಿನಲಿ ದೊಡ್ಡ ಮರನಿಹುದು,
ಅದರ ಮರೆಯಲಿ ತಿಂದೆ" ಎಂದದಕೆ ಹೇಳಿದನು.
ಗುರು ಅದಕೆ ಒಳಿತಾಯ್ತು ಎಂದು ಮತ್ತೊರ್ವನನು
ನೀನು ಯಾವೆಡೆ ತಿಂದೆ ಎಂದು ಕೇಳಲು ಅವನು
"ನಮ್ಮ ಮನೆಯಲ್ಲಿ ದೇವರ ಮಂಟಪದ ಹಿಂದೆ
ಕತ್ತಲಾಗಿಹುದು, ಆ ಮರೆಯಲ್ಲಿ ಭುಜಿಸಿದೆನು"
ಎಂದು ಹೇಳಿದನು. ಗುರು ಲೇಸಾಯ್ತು ಲೇಸಾಯ್ತು
ಎಂದೆನುತ ಮತ್ತೊರ್ವನನು ಕೇಳಲವನೆಂದ
"ದೊಡ್ಡ ಕೊಳದಲಿ ನೀರಿನಲಿ ಮುಳುಗಿ ಅಲ್ಲಿ ಅದ
ತಿಂದು ಎದ್ದೆನು" ಎಂದು. ಹೀಗೆ ಗುರು ಎಲ್ಲರನು
ಓರೊರ್ವನಾಗಿ ಕೇಳುತ ಬರಲು ಅವನವನು,
ಕದದ ಸಂದಿಯಲಿ ತಿಂದೆನು ಎನ್ನುವವನೊಬ್ಬ,
ಕೋಣೆಯಲಿ ಕುಳಿತು ಬಾಗಿಲಿಗಗಳಿಹಾಕಿರಲು
ಒಬ್ಬನೇ ಕುಳಿತು ತಿಂದೆನು ಎನ್ನುವವನೊಬ್ಬ,
ಹಿತ್ತಲಿಗೆ ಹೋಗಿ ಮರೆಯಲಿ ಒಬ್ಬನೇ ನಿಂತು
ತಿಂದೆನೆನ್ನುವನೊಬ್ಬ, ಈ ರೀತಿ ಎಲ್ಲರೂ
ಒಂದೊಂದ ಹೇಳಿದರು. ಕೊನೆಗೆ ದಾಸರ ಕೇಳೆ
"ಗುರುದೇವ ನಿಮ್ಮಡಿಗೆ ನಾನು ಹಿರಿಯಪರಾಧಿ.
ಒಳಿತಹುದು ತಿನ್ನೆಂದು ಆ ಪ್ರಸಾದವನೆನಗೆ
ಕೊಡುವಂದು ಯಾವನೂ ನೋಡದೆಡೆ ತಿನ್ನೆಂದು
ಅಣತಿಯ ಮಾಡಿದಿರಿ. ಎಲ್ಲೆಲ್ಲಿಯೋ ಹೋದೆ
ತಿನ್ನಲಾಗದೆ ಹೋಯ್ತು. ಎಲ್ಲ ಕಡೆಯಲ್ಲಿಯೂ
ದೇವನಿರುವನು, ನಮ್ಮ ಕರ್ಮವನು ನೋಡುವನು,
ಎಂದು ತಾವೆಂದ ನುಡಿ ಎಲ್ಲೆಡೆಯು ನೆನವಾಯ್ತು.

ಎಲ್ಲಿ ತಿನ್ನುವುದು ಗುರು ಹರಸಿತ್ತು ಫಲವಿದನು.
ತಿನ್ನುವರೆ ಪ್ರಾಪ್ತಿ ಎನಗಿಲ್ಲವಾಯಿತು ಎಂದು
ಮತ್ತೆ ತಂದಿಹೆನಿದನು" ಎಂದವರು ಹೇಳಿದರು.
ಕೆಲದ ಶಿಷ್ಯರು ಕೇಳಿ ತಲೆಯ ತಗ್ಗಿಸಿದರು.
ಗುರು ಆಗ ಶಿಷ್ಯರಿಗೆ "ಎಲ್ಲ ತಾಣಗಳಲಿಯು
ದೇವನಿಹನೆಂಬ ನುಡಿ ತಿಳಿಯದಿಹ ಜನರಿಲ್ಲ.
ತಿಳಿದ ಈ ತತ್ತ್ವವನು ನೆನೆದು ನಡೆವವರಿಲ್ಲ.
ಬುದ್ಧಿ ಅರಿತರಿವು ಹೃದಯದಿ ಸಿದ್ಧಿಯಾಗುವರೆ
ಬಹುಕಾಲ ಕಳೆಯುವುದು. ತಿಳಿದುದನು ಮರಮರಳಿ
ಮನದಲೇ ತಿರುವಿ ಹಾಕುತ, ಸಿದ್ಧ್ರಿಯಲಿ ಕೂಡ
ಹೃದಯ ಆ ತತ್ತ್ವವನು ಅನುಸರಿಸಿ ನಡೆವಂತೆ
ಸಾತವಾಡಲು ತೊಡಗಬೇಕು" ಎಂದುಸುರಿದರು.

ಇನ್ನೊಮ್ಮೆ ಗುರು ಶಿಷ್ಯಮಂಡಲಿಯ ಮಧ್ಯದಲಿ
ಕನಕದಾಸರ ಕುರಿತು "ಕನಕಣ್ಣ ನಮ್ಮಲ್ಲಿ
ಯಾರಿಗೆಷ್ಟೆಷ್ಟುಜನ್ಮಕೆ ಮೋಕ್ಷ ದೊರೆಯುವುದು
ಹೇಳುವೆಯ" ಯೆಂದರು. ದಾಸರಾ ನುಡಿಕೇಳಿ
"ಗುರುಗಳರಿಯದ ವಿಷಯವೇನಿಹುದು? ಆದರೂ
ಕೇಳಿದರೆ ಹೇಳುವೆನು" ಎಂದು ನುಡಿದರು. ಅದಕೆ
ಗುರು "ನಮ್ಮ ಗುರುಗಳಿನ್ನೆನಿತು ಜನ್ಮಗಳಲ್ಲಿ
ಮುಕ್ತಿ ಪಡೆಯುವರು ಹೇಳು" ಎಂದು ಕೇಳಿದರು.
ಕನಕದಾಸರು "ನಾಲ್ಕು ಜನ್ಮದಲಿ" ಎಂದರು.
ಗುರು "ನಾನು" ಎಂದೆನಲು ಕನಕದಾಸರು ಅದಕೆ
"ಆರು ಜನ್ಮದಲಿ" ಎಂದರು. ಗುರುಗಳಾಮೇಲೆ

"ಹಾಗಾದರೀ ಜನ್ಮ ಮುಗಿದೊಡನೆ ಹೋಗುವರು
ಇಲ್ಲವಾದರೆ? ನೀನೊ?" ಎಂದೆನಲು ದಾಸರು
"ನಾನು ಹೋದರೆ ಹೋಗಬಹುದು" ಎಂದುಸುರಿದರು.
ಶಿಷ್ಯನಾಡಿದ ನುಡಿಯು ಕೇಳಿ ಗುರು ನಗುತಿರಲು
ಮಂಡಲಿಯ ಜನರೆಲ್ಲ ಕೇಳಿ ಕನಲಿದರೊಡನೆ.
"ಅತಿಯಾಯಿತೀನಮ್ಮ ಕುರುಬದಾಸನ ಜಂಭ.
ಗುರುಗಳಿಗೆ ಆರು ಜನ್ಮಗಳು ಕಳೆಯುಲು ಮುಕ್ತಿ;
ಗುರುವ ಗುರುವಿಗೆ ನಾಲ್ಕು ಜನ್ಮ ಕಳೆಯಲು ಮುಕ್ತಿ;
ಗುರುವ ಗುರುವಿನ ಹಿರಿಯ ಗುರು ನಮ್ಮ ಕುರುಬನಿಗೆ
ಈ ಜನ್ಮ ಕಳೆದೊಡನೆ ಮುಕ್ತಿ! ಬಹು ಚೆನ್ನಾಯ್ತು
ಇಂಥ ಕೊಬ್ಬಿನ ಮಾತ ಕೇಳಿಯೂ ನಮ್ಮ ಗುರು
ನಗುತಿಹರು. ಇವರಿಂತು ಸಡಿಲ ಕೊಡುತಿರಲಾಗಿ
ಗುರುಶಿಷ್ಯತನದ ಮರ್ಯಾದೆಯೇ ಅಳಿಯುವುದು"
ಎಂದು ಯೋಚಿಸುತಿಹರು. ಗುರು ಅವರ ಮುಖವರಿತು
"ಕನಕಣ್ಣ ನುಡಿದ ನುಡಿ ಕೇಳಿ ಕೋಪಿಸದಿರಿ.
ಗುರುವಿಗೂ ಹಿರಿಯಗುರುವಿಗು ಇಲ್ಲದಿಹ ಮುಕ್ತಿ
ತನಗೆ ಈ ಜನ್ಮಮುಗಿದೊಡನೆ ದೊರೆಯುವುದೆಂದು
ಆತ ಹೇಳುವನೆ? ನೀನೋ ಎಂದು ಕೇಳ್ದುದಕೆ
ನಾನು ಹೋದರೆ ಹೋಗಬಹುದು ಎಂದುದರರ್ಥ
ಮಮತೆ ಹೋದಂದು ಎಂಬುದು. ನೋಡೆ ಮನುಜರಿಗೆ
'ನಾನು' ಎಂಬುದು ಹೋದರಲ್ಲದಿಲ್ಲವು ಮುಕ್ತಿ.
ನಾನು ಹೋದರೆ ಹೋಗಬಹುದು ಮೋಕ್ಷಕೆ ಮನುಜ.
ನಾನಿರುವ ತನಕ ಸಂಸಾರದಲಿ ತೊಳಲುವನು.
ಇದನೆ ಕನಕಣ್ಣ, ಜನವನು ಮರುಳುಮಾಡುವರೆ,

ತಾನು ಈ ಜನ್ಮ ಕಳೆದೊಡನೆ ಮುಕ್ತನು ಎಂದು
ಡಂಭ ಹೇಳುವ ತೆರದ ನುಡಿಯಲ್ಲಿ ಹೇಳಿದನು.
ಕನಕಣ್ಣನಂತೆ ಸಿದ್ಧಿಯಲೀಸುತಿಹ ಜನಕೆ
ಮುಕ್ತಿ ದೊರೆವರೆ ಜನ್ಮ ಕಳೆವ ಮಾತೇನುಂಟು
ತಿಳಿದು ನಡೆಯುವ ಮನುಜನಿಗೆ ಒಂದು ದಿವಸದಲಿ
ಹಲಜನ್ಮ ಕಳೆಯುವುದು, ಮುಕ್ತಿ ಕೈಯೊಳಗಿಹುದು"
ಎಂದು ವಿವರಿಸಿ ದಾಸರರ್ಥವನು ತಿಳಿಸಿದರು.

ಇನ್ನೊಂದು ಕತೆ ಹೇಳಿ ಮುಗಿಸುವೆನು. ಒಂದು ದಿನ
ಕನಕದಾಸರ ಪತ್ನಿ ಅಡಿಗೆಮನೆಯಲಿ ಕೆಲವು
ರೊಟ್ಟಿಗಳ ಸುಡುತಿರಲು ಕನಕದಾಸರು ಅಲ್ಲಿ
ಬಳಿಯೊಳೇ ಕುಳಿತಿಹರು. ಕೆಲವು ಬೆಂದಿಹ ರೊಟ್ಟಿ
ಕೆಳಗೆ ಎಲೆಯೊಳಗಿಹವು, ಕೆಲವು ಬೇಯುತಲಿಹವು,
ಕೆಲವು ರೊಟ್ಟಿಯನಾಕೆ ತಟ್ಟುತಿರುವರು. ಆಗ
ಬೀದಿಯಲಿ ನಾಯೊಂದು ಹೋಗುಹೋಗುತ ಇಲ್ಲಿ
ರೊಟ್ಟಿಯನು ಸುಡುತಿರುವರೆಂದು ವಾಸನೆಯಿಂದ
ತಿಳಿಯಿತು. ಬೀದಿಯಲಿ ಸುಳಿಯುತಿಹ ಸೊಣಗನಿಗೆ
ಹಸಿವೆಂದು ಹೇಳಬೇಕೇನು? ಗೌಡನ ಮನೆಯ
ಜೀತದಲಿ ವೈ ಹೊರೆವ ಮೇಲ್ತರದ ನಾಯಿಗೂ
ಬೇಕೆನ್ನುವಷ್ಟು ಹಿಟ್ಟಿಲ್ಲ. ಬೀದಿಯ ನಾಯ್ಗೆ
ಹಸಿವೆ ಹೊಟ್ಟೆಯ ತುಂಬ. ರೊಟ್ಟಿ ಸುಡುತಿಹರೆಂದು
ಊಹೆಯಲಿ ತಿಳಿದ ಸೊಣಗನು ಆಸೆಯಲಿ ಸಿಲುಕಿ
ಬಾಗಿಲಿಗೆ ಬಂದು ಮೆಲ್ಲನೆ ಇಣಿಕಿ ನೋಡಿತು.
ರೊಟ್ಟಿ ಬಹು ಶಬ್ಬಿಯಾಗಿಹುದು; ಬಿಸಿಬಿಸಿ ರೊಟ್ಟಿ.
ಮೆಲ್ಲನೊಳಗಡೆ ಬಂದು ಸುತ್ತ ನೋಡಿತು ನಾಯಿ.

ಇಲ್ಲಿ ದಾಸರು ಕುಳಿತಿರುವರು; ಈ ಕಡೆ ಅವರ
ಪತ್ನಿ ರೊಟ್ಟಿಯ ಸುಡುತಲಿಹರು. ವಾಸನೆ ಬಹಳ
ಹತ್ತಿರಾದುದರಿಂದ ಆಸೆ ಬಹು ಬಲವಾಯ್ತು.
ಒಂದು ರೊಟ್ಟಿಯನೊಯ್ದು ನಡೆವೆನೇ ಎಂದೆನುತ
ಯೋಚನೆಯೊಳರ್ಧಚಣ ಆ ಸೊಣಗ ನಿಂದಿಹುದು.
ಕನಕದಾಸರು ಇದನು ನೋಡಿದರು. ಬಡನಾಯಿ
ಬಹಳ ಹಸಿದಿಹುದೆಂದು ಮನವರಿತು, ಮನೆಯಾಕೆ
ಇದ ನೋಡಿ ಎಲ್ಲಿ ಹೊಡೆಯುವಳೊ ಎನ್ನುತ ಮನದೆ
ಇನಿಸು ಚಿಂತಿಸುತಿಹರು. ಎಲ್ಲ ಅರೆಚಣದರ್ಧ.
ಈಸುಹೊತ್ತಿಗೆ ನಾಯಿ ಸ್ವಲ್ಪ ಧೈರ್ಯವಮಾಡಿ,
ರೊಟ್ಟಿಯಿಹ ಕಡೆಗೆ ಮೆಲುಮೆಲನೆ ಮುಸುಡಿಯ ನೀಡಿ,
ಒಂದು ರೊಟ್ಟಿಯ ಕಚ್ಚಿ, ನೋಡಿದರೊ ಎಂದಂಜಿ,
ಸದ್ದುಮಾಡದೆ ವೇಗದಿಂದ ಹೊರಹೊರಟಿತು.
ಕನಕದಾಸರ ಪತ್ನಿ ಆಗ ಇದ ನೋಡುತ್ತ,
ಗಂಡನನು "ಇದು ಏನು ಸುಮ್ಮನೆಯೆ ಕುಳಿತಿಹಿರಿ?
ನಾಯಿ ರೊಟ್ಟಿಯನೊಯ್ಯೆ ನೋಡುತ್ತ ಕುಳಿತಿಹುದೆ?"
ಎಂದು ಕೂಗಿದರು. ದಾಸರು ಅದಕೆ "ಅಯ್ಯಯ್ಯೊ
ಮರೆತೆನೇ? ನನ್ನ ದೇವರು ಎಷ್ಟು ಹಸಿದಿಹನೊ?
ಬರಿಯ ರೊಟ್ಟಿಯ ಕದಿಯೆ ಎಷ್ಟು ಹೊತ್ತಲೆದಾಡಿ
ಎಷ್ಟು ಹೊತ್ತೂಟವಿಲ್ಲದೆ ಕಷ್ಟಪಟ್ಟಿಹನೊ?
ಬರಿಯ ರೊಟ್ಟಿಯನೆಂತು ತಿನ್ನುವನು" ಎಂದೆನುತ
ಅಲ್ಲಿದ್ದ ತುಪ್ಪ ಬೆಲ್ಲವ ತೆಗೆದುಕೊಂಡೆದ್ದು
ನಾಯ ಹಿಂದೆಯೆ ಓಡಿದರು. ಅವರ ಹೆಂಡತಿ
ಇದು ಏನು ಮಾಡುತಿಹರೆಂದು ಅಚ್ಚರಿಯಿಂದ
ಬಾಗಿಲಲಿ ನಿಂದು ನೋಡುತಲಿರಲು ದಾಸರು

ಬಹಳ ಭ್ರಮೆಯಿಂದ ಸೊಣಗನ ಕರೆದು "ನನ್ನೊಡೆಯ
ಬರಿಯ ರೊಟ್ಟಿಯ ಕೊರಕಲೇಕೆ? ಬಾ ನನ್ನಪ್ಪ,
ತುಪ್ಪವನು ತಂದಿಹೆನು, ಬೆಲ್ಲವನು ತಂದಿಹೆನು,
ಎಲ್ಲವೂ ನಿನ್ನದೆಂದೆಣಿಸು, ಬಾ, ಇದ ಕೊಳ್ಳು"
ಎಂದು ಕೂಗಿದರು. ದಾಸರ ಪತ್ನಿ ನೋಡುತಿರೆ
ನಾಯಿ ದಾರಿಯಲಿ ನಿಂದುದು. ದಾಸರದರೆಡೆಗೆ
ಸಾರಿ ತುಪ್ಪವನು ಬೆಲ್ಲವನು ಮುಂದಿಟ್ಟರು.
ನಾಯಿ ಸಂತೋಷದಲಿ ತಿನ್ನುತಿರೆ, ದಾಸರು
ಅಲ್ಲಿ ನಿಂತದನು ಸಂತಸದಿ ನೋಡುತಲಿಹರು.
ಇದನು ದಾಸರ ಪತ್ನಿ ಅರೆನಿಮಿಷ ನೋಡುತಿರೆ,
ನಾಯಿ ಮರೆದುದು. ಅದರ ಬಳಿ ನೀಲಮೇಘದೊಲು
ಮನವ ಮರುಳಾಗಿಸುವ ಸೊಗದ ವರ್ಣದ ಒಂದು
ರೂಪು ಕಣ್ಗೆಸೆದು ತೋರಿತು. ನಾಲ್ಕು ಕೈಗಳಿವೆ.
ಒಂದು ಕೈಯಲಿ ಚಕ್ರ; ಶಂಖ ಗದೆ ಪದ್ಮಗಳು
ಉಳಿದ ಕೈಗಳಲಿ. ದಾಸರು ರೂಪವನು ನೋಡಿ
"ನನ್ನ ದೊರೆಯೇ ನಿನ್ನ ಕೃಪೆ ಎನಿತು? ಸೇವಕನು
ಮನೆಯ ಒಣ ರೊಟ್ಟಿಯನು ಕೊಡುವುದಕೆ ಹೆದರುವನು
ಎಂದೆನುತ ನೀನೆ ಶುನಕನ ರೂಪದಲಿ ಬಂದು,
ಕೌರವನ ಭವನವನು ಬಿಟ್ಟು ವಿದುರನ ಮನೆಗೆ
ಅಂದು ನಡೆತಂದಂತೆ ಸುಖದುಣಿಸುಗಳ ಬಿಟ್ಟು,
ಇಲ್ಲಿ ದಾಸನ ಬಳಿಗೆ ಬಂದೆಯಾ ನನ್ನೊಡೆಯ?"
ಎಂದು ನುಡಿಯುತೆ ನಮಿಸಿದರು. ರೂಪು ಮರೆಯಾಯ್ತು
ಮತ್ತೆ ಮೊದಲಿನ ಸೊಣಗ ರೊಟ್ಟಿಯನು ಬೆಲ್ಲವನು
ತಿನ್ನುತಿದೆ. ತಿಂದು ಮುಗಿಸುತೆ ಓಡಿ ಹೋಯಿತದು.
ಇತ್ತ ದಾಸರು ಮರಳಿ ಮನೆಗೆ ನಡೆತಂದರು.

ಎಲ್ಲವನು ಕಂಡ ಹೆಂಡತಿ ಇವರ ಪುಣ್ಯದಲಿ
ತನಗೆ ದೇವರ ನೋಟ ಸಿಕ್ಕಿತೆಂದೆಣಿಸುತ್ತ
ಏನೊಂದು ಮಾತನಾಡದೆ ದಿನದ ಕೆಲಸದಲಿ
ಎಂದಿನೊಲು ತೊಡಗಿದರು.

ಬೇಸರಾಯಿತೆ ಅಣ್ಣ ?
ಮುಗಿಸಿದೆನು. ಇಂತ ಕತೆ ದಾಸರವು ಬಹಳ ಇವೆ.
ಒಂದೊಂದು ಕತೆ ಒಂದು ರತ್ನ. ಇವುಗಳೊಳೆಲ್ಲ
ಹಿರಿಹಿರಿಯ ತತ್ತ್ವ ದಿನದಿನದ ಕಿರಿಮಾತಿನಲಿ
ಹಸುಳೆಯಲಿ ಜೀವಾತ್ಮನಡಗಿಹವೊಲಡಗಿಹವು.
ಇವನು ನಮ್ಮವರು ನಮ್ಮಂತೆ ಸಾಮಾನ್ಯರಿಗೆ
ಹರಿಕಥೆ ಪುರಾಣದಲಿ ಪಾಠಪ್ರಸಂಗದಲಿ
ಮರಮರಳಿ ಹೇಳುವರು. ನನ್ನ ಈ ಬದುಕಿನಲೆ,
ಹತ್ತಾರು ಸಲ ಚಿಂತೆ ಬಂದಾಗ, ನೆರೆಯವರು
ಹಿಂಸೆಯನು ಕೊಟ್ಟಾಗ, ನಾನು ಬೇರೆಯ ಜನಕೆ
ಕಾಠಿನ್ಯ ತೋರುವುದಕೆಂದು ಯೋಚಿಸಿದಾಗ,
ಹರಿ ಎಲ್ಲಕಡೆ ಇಹನು—ಎಲ್ಲ ಜೀವದೊಳಿಹನು—
ನಾನೆಂಬ ಮಮತೆಯಿಂದಲೆ ಕೋಪ—ಇದರಿಂದ
ಬದುಕು ಸೊಟ್ಟಾಗಿ ಬೆಳೆಯುವುದು—ಎಂಬೀ ತೆರದ
ನೆನವು ಬರೆ, ಚಿಂತೆ ಮರೆದಿಹುದು; ಕೆರಳಿದ ಕೋಪ
ಮರಳಿ ತಗ್ಗಿಹುದು; ಜನದಲಿ ಪ್ರೇಮ ಹುಟ್ಟಿಹುದು.
ಕನಕದಾಸರು ಇಂತು ತಮ್ಮ ಬದುಕನು ನಮ್ಮ
ಶುಭಕಾಗಿ ನೆಲದಿ ಬೆಳೆಯಿಸಿ ನೆನವ ಬಿಟ್ಟಿಹರು.
ಇಂತ ಕತೆಗಳ ನೀವು ಆರಯಿಸಿ ಮನವರಿದು
ಜನಕೆ ತಿಳಿಯಿಸಿ ನಡೆಯೆ ಬದುಕು ಹಸನಾಗುವುದು.

# ಗೋಮಟೇಶ್ವರ

ಘನಿಸಿತು ಸತ್ವ
ಘನಿಸಿತು ಚಿತ್ತ
ಘನಿಸಿತು ಆನಂದ;

ಘನಿಸುತ ಬೆರೆದು
ಮನುಜನ ಕಣ್ಣ
ತಣಿಸುತಲಿಹವಿಲ್ಲಿ.

ಬೆರೆದುವು ಇವನು
ಹಿರಿತನ, ತೇಜ,
ಕರುಣೆಯು ಚೆಲುವು, ಬಲ;

ನಾರಕಗಣವ
ಹೋರಿದಯುಕುತಿ,
ತಾರಕ ಶಕುತಿಗಳು;

ಎಲ್ಲವು ಬೆರೆದು
ಕಲ್ಲಲಿ ಒಡನೆ
ಪಲ್ಲವಿಸಿವೆ ನೋಡು.

ಧಾರುಣಿ ನೆನೆದ,
ಧಾರುಣಿ ನೆನೆಯದ,
ಧೀರತೆ, ಗಾಂಭೀರ್ಯ;

ಕಾಣುವುವಿಲ್ಲಿ.
ಏನಿದು ರಚನೆ!
ಮೇಣವೊ ಕಲ್ಲೊ ಇದು?

ಮೇಣವೊ ಕಲ್ಲೊ ?
ಮಾಣದು ಮಾಯೆ.
ಏನೆಸಗಿದೆ, ಶಿಲ್ಪಿ !

ಎಸಗಿದೆ ನೀನು ;
ಎಸಗರು ಹಲರು ;
ಎಸಗರು ನಿನ್ನವೊಲು.

ಕಚಕುಚಗಿಚಕೆ
ಉಚಿತವೆ ಬದುಕು ?
ಕುಚಗಿಚಗಳ ಕೊರೆವ

ಅಲ್ಪದ ಕುಟುಕು
ಶಿಲ್ಪವೆ ಕಲೆಯೆ ?
ಕಲ್ಪಗಳನು ಮಲೆವ

ಒಳಗಣ ಚೆಲುವು
ಶಿಲೆಯನು ಬೆಳಗಿ
ಹೊಳೆವವೊಲೆಸಗುವೊಡೆ

ಚೆಲುವು ಇದೆಂದು
ಉಲಿಯಲು ಶಿಲೆಗೆ
ಕಲಿಪೊಡೆ, ಅದು ಶಿಲ್ಪ.

ಗೋಮಟ ಗುರುವೆ,
ಪ್ರೇಮದ ತೌರೆ,
ನೇಮದ ಹಿರಿನೆಲೆಯೆ ;

ಲೋಕದ ಮನುಜಗೆ
ಸಾಕ್ಯೆ ಸಂಕಟ
ನಾಕವ ಹಿಡಿ, ಎಂದು ;

ಹಿಡಿಯ್ಯೆ ನಾಕವ,
ಹಿಡಿ ಅದು ನಿನ್ನೊಳೆ
ಅಡಗಿರುವುದು, ಎಂದು ;

ಕಿರಿದಾಗಿರುವುದು,
ಮರೆದಿರುವುದು, ಅದ
ಅರಳಿಸು ಹೋಗೆಂದು ;

ಒರೆದೂ ಒರೆಯದೆ
ಸರಸದಿ ನಗುತಿಪ
ದೊರೆಗಳ ದೊರೆ, ಹಿರಿಯ,

ಹೊಗು ಎನ್ನೆದೆಯ ;
ಹೊಗುತೀ ಬಗೆಗೆ
ಸೊಗಸಿನ ನಿಜವರಿವ

ನೀತಿಯ ಕಲಿಸು ;
ಪ್ರೀತಿಯ ತೋರು ;
ವೀತರಾಗ, ವಿಬುಧ.

## ಕಣ್ಣು

ಕಣ್ಣು ನಕ್ಷತ್ರದವೊಲಿಹುದೆಂಬ ಮಾತ
ಕವಿಯ ಬಣ್ಣನೆಯ ನುಡಿಯೆಂದೆನೀವರೆಗೆ.
ನಿನ್ನ ಕಣ್ಗಳ ಬೆಳಕ ನೋಳ್ಪುದಕೆ ಮುನ್ನ
ಸವಿಯು ಬರಿಮಾತಲ್ಲದದು ಬೇರೆಯಲ್ಲ.

ಮಲ್ಲಿಗೆಯ ಮಲರ ಮೆದುಬಿಳುಪ ಜಸವೆಸೆವ,
ತಾವರೆಯ ದಳದ ವಿಶದತೆ ಮೀರಿ ಹರಿವ,
ಫುಲ್ಲನೀಲೋತ್ಪಲದ ಕಾಂತಿ ಹರಹಿರುವ
ಭಾವಸರಸಿಯ ತುಂಬುನೀರಂತೆ ಕಾಂಬ,

ನೀರೊಳಿಹ ಮೀನಂತ ಚಲನ ಆಕೃತಿಯು,
ಈಯೆಲ್ಲತರದ ಕಣ್ಗಳ ನೋಳ್ದ ಹಿಂದೆ;
ತಾರೆಯುವೊಲಿಹವೆಂದು ಬಣ್ಣಿಸುವ ಕಣ್ಣ
ಮಾಯೆಯನು ನಿನ್ನ ಕಣ್ಣಲಿ ಕಂಡೆನಿಂದೆ.

ಹುಣ್ಣಿಮೆಯ ಆಗಸದ ತೇಜ ಈ ಮುಖದೆ
ತುಂಬಿ ಹರಿಯುತಲಿರಲು ಅದರಲ್ಲಿ, ಹೆಣ್ಣೆ,
ಚಿನ್ನ ನಯನದ ಶುಭ್ರತೇಜ ಹೊಳೆಯುತಿದೆ
ಇಂಬಾಗಿ ಎರಡು ತಾರೆಯ ಬೆಳಕ ತೆರದೆ.

ಅಂತೆ ನಿರ್ಮಲತೇಜ; ಅಂತೆಯೇ ಹೊಳವು;
  ಮರೆಮರೆದು ಮಿರುಗುತಿಹ ಸೊಬಗಂತೆ ಇಹುದು;
ಕಾಂತಿಯಲಿ ಬಣ್ಣದಲಿ ಬೆಳಕು ಸರಸದಲಿ
  ಸರಿಬಹವು ತಾರೆಯಲಿ ನಿನ್ನ ಕಣ್ಗಳಿವು.

ಸರಿಯೆಂದೆನಲ್ಲೆ? ಮಿಗಿಲೆನಬೇಕು ಇನಿಸು.
  ತಾರೆಗಳು ಒಂದೆ ಭಾವದಲಿ ಹೊಳೆಯುವುವು.
ಅರಿಯುವವು ಒಂದನೊಂದನುಸರಿಸಿ ಬರುವ
  ನೂರುಭಾವದ ನಿನ್ನ ಕಣ್ಣು ಒರಿಕಲಿವ.

ಕಣ್ಣು ತಾರೆಗೆ ಮಿಗಿಲೆ ಎಂದು ಅಚ್ಚರಿಯೆ?
  ಎರಡನೂ ರಚಿಸಿದವನೊರ್ವನೇ ನೋಡೆ.
ತನ್ನ ಕುಶಲತೆಯ ಹಂಚಿಹನು ಅಲ್ಲಲ್ಲಿ.
  ಸರಿಯೆಂದೊಡೇನು ಮಿಗಿಲೆಂದೊಡಿನ್ನೇನು?

ಅಲ್ಲಿ ಮಾರ್ತಂಡದೊಂದೆ ಬೆಳಕ ಕಳೆ ಇಟ್ಟು
  ಜೀವವನು ಅದರ ಜೊತೆಗಿಲ್ಲಿ ಕೊಟ್ಟಹನು;
ಅಲ್ಲಿ ಅಮರತೆ ಇರಲು ಇಲ್ಲಿ ಮರ್ತ್ಯತೆ ಕೊಟ್ಟು
  ಭಾವದಿಂದಲೆವ ಬೆಡಗಿದನಿಟ್ಟನು.

ಸೃಷ್ಟಿಯಲಿ ಇಂತ ಸೊಬಗಿರಿಸಿದಗೆ ವಂದನೆ.
  ಇದರಿಂದ ಊಹಿಪೆವು ಅವನಿರವನು.
ಕಷ್ಟ ಅವನರಿವು; ನಿನ್ನೀ ಕಣ್ಣು ಮಾತ್ರ
  ಸದಯನವನೆಂದು ನಮಗೊರೆಯುತಿಹವು.

## ಒಂದು ಹಕ್ಕಿಯನ್ನು ಕುರಿತು

ನಿನ್ನನೊಮ್ಮೆ ಅರಿವೆ ನಾನು
ಹಕ್ಕಿ ಬಾಲ್ಯದಿ;
ಮುನ್ನ ನಿನ್ನನರಿತು, ಇಂದು
ಅಣ್ಣ ಅದನು ಮರೆತು, ಇಂಥ
ಬಣ್ಣದುಡುಪ ಸೊಗಸ ಕಂಡು,
ಯಾರಿದೆಂಜೆನು.

ಅಂದು ನಮ್ಮ ಹಳ್ಳಿಯ ಲ್ಲಿ
ಬಳೆವ ದಿನದಲಿ,
ಒಂದು ಚಿಂತೆ ಆಸೆ ಭಯದ
ಕುಂದನರಿಯದೆಳೆಯತನದ
ಚೆಂದದೊಂದು ಕನಸದಿನವೆ
ನಿನ್ನನರಿವೆನು.

ದಾರಿಗಳಲಿ ಒಮ್ಮೆ ಒಮ್ಮೆ
ನಡೆಯುತಿರಲು ನಾ,
ಹಾರಿ ಬಂದು ನೀನು, ಬಳಿಯ
ಕಾರೆ, ಹೊಲದ ತೊಗರಿ, ಹಲಸ,
ನೇರಿಳೆಯಲಿ, ಲಕ್ಕೆಯಲ್ಲಿ,
ನಲಿದು ಸುಳಿಯುವೆ.

ಅಂದು ಕೂಡ ಹಕ್ಕಿ ನೀನು
ಸೊಗಸ ಪೊಂದಿಯೋ;
ಚೆಂದವಾದ ನಿನ್ನ ಸೊಗೆಯು
ಕಂದಿ ನೀಲಿ ಕಪ್ಪ ನಾನು
ಮಂದವಾದ ಕೆಂಪ ನೋಡಿ
ಮನದೆ ಮೆಚ್ಚಿದೆ.

ಕೊಕ್ಕು ಸ್ವಲ್ಪ ಉದ್ದ ಹೆಚ್ಚು
ನಿನಗೆ ಅಲ್ಲವೆ?
ಚಿಕ್ಕ ಮೈಗೆ ಸ್ವಲ್ಪ ಹಿರಿದು;
ಚಿಕ್ಕದಲ್ಲ ತೋಕೆ ಕೂಡ;
ಹಕ್ಕಿ ನಿನಗೆ ಕೋಪಬೇಡ
ನಿಜವ ನುಡಿದರೆ.

ಉದ್ದ ಕೊಕ್ಕು; ಆದರೆ, ಅರೆ,
ನೀರ ಮರೆಯಲಿ
ಕದ್ದು ನುಳಿವ ಮೀನ ಹಿಡಿವ
ಪೊದ್ದರಲ್ಲದಿಲ್ಲ ಬದುಕು;
ಉದ್ದ ಅದಕೆ ಕೊಕ್ಕು; ಏನ
ಮಾಳ್ಪ? ಅಲ್ಲದೆ,

ಬೇರೆ ಬೇರೆ ನೋಡೆ ಹಿರಿದು
ಕಿರಿದು ಎನಿಸುವ
ಮೋರೆ ತೋಕೆ ಮೈಯಿವೆಲ್ಲ
ಸೇರೆ, ಅಮ್ಮ, ನಿನ್ನ ಸೊಗಸು
ಮೀರಿ ಎಂತು ನಮ್ಮ ಮನವ
ಗೆಲುತಲಿರುವುದು !

ಇದು ವಿಚಿತ್ರವಲ್ಲ ನೋಡೆ;
ಬಲ್ಲ ಕರ್ಮಿಯು
ಎದೆಯ ಗೆಲುವ ಗೆಯ್ಮೆಗಳಲಿ
ಕುದುರಿದೊಂದು ಕೌಶಲದಲಿ
ಒದವಿಸುವನು ಸೊಗಸನಿಂತೆ.
ಏನಿದಚ್ಚರಿ ?

ಎಳೆಯ ದಿನದಿ ಬಲ್ಲ ನಾನು
ಮರೆದೆನಾದರೂ,
ಗೆಳೆಯ ನೀನು ಎನ್ನ ಬಿಡದೆ
ಬಳಿಗೆ ಮರಳಿ ಸಾರಿ, ಮುಂದೆ
ಸುಳಿದು, ಎನ್ನ ಮನದೆ ಆ
ಕಳೆದ ಕಾಲದ

## ತಾವರೆ

ಹಾರಿ ಹೋದ ಸೊಗಸ ನೆನವ
ಸುಳಿಸಿ, ಬದುಕಿನ
ದಾರಿಯಲ್ಲಿ ಬರಿಯು ಬೀತ
ಕಾರೆ ಬರಿಯುಲಕ್ಕೆ ಇಲ್ಲ,
ನೇರಿಳಿಹುದು, ಮಾವು ನಾನು
ಇರುವೆವೆನ್ನುತ,

ಎದೆಗೆ ತಂಪ ತಳಿದೆ; ಮುಂದೆ
ಬರುವ ದಿನದಲಿ,
ಬದುಕಿನಲ್ಲಿ ಎಂದೆ ಇರಲಿ,
ಮುದದ ಬಣ್ಣ ಬಾಡಿ, ಕ್ಲೇಶ
ಅದುಮಿ ಮನವ ಹಿಡಿದ ದಿನದೆ,
ಮತ್ತೆ ಇಂತೆ ಬಾ;

ಬಂದ ಮರಳಿ ಇಂತೆ, ಅಣ್ಣಾ,
ಕಣ್ಣ ಮುಂಗಡೆ
ಒಂದು ನಿಮಿಷ ಹಾರಿ, ತಿಳಿವ
ಮಾಂದ್ಯವನ್ನು ಹರಿದು, ಬಾಳು
ಚೆಂದವಪ್ಪುದೆಂದು ನೆನೆಸಿ
ಬದುಕ ಬೆಳಗಿಸು.

# ಸೋಮತೀರ್ಥದಲ್ಲಿ

ಬಂದೆನಿಲ್ಲಿಗೆ ನಿನ್ನ ಪ್ರೇರಣೆಯನನುಸರಿಸಿ
ಎನ್ನಣುಗುಕುವರಿ ಸುಮಕೋಮಲೆ ಶಕುಂತಲೆಗೆ
ಸಂದ ದುರ್ದೈವವನು ಹರಿಸೆಂದು ಬೇಡುವರೆ.
ಮನ್ನಿಸೀ ಮೌಢ್ಯವನು ; ಪೊರೆ ಅವಳನು.

ಪ್ರೇಮದಿಂದವಳನೆನ್ನವಳೆಂಬುದಿದು ಮೌಢ್ಯ;
ನಿನ್ನ ಬೇಡುವರೆ ಪಾಲಿಸಿಯು ತೀರವನುಳಿದು
ಸೋಮತೀರ್ಥಕೆ ಬಂದು ಬೇಡಬೇಕೆನೆ ಮೌಢ್ಯ;
ಇನ್ನೆಲ್ಲ ಚರ್ಯೆ ಇದು ಬರಿಯ ಮೌಢ್ಯ.

ಅರಿವೆನಿದ; ಆದೊಡೆಯು ಮಾಡದಿರಲರಿಯೆನೈ;
ಏನೊಂದನಾಶಿಸದ ಮನವಿದವಳಿಗೆ ಶುಭವ
ಕರಕರಗಿ ಬೇಡುವುದು; ಇದರ ಪರಿಯೇನೆಂದು
ನೀನರಿವೆ ದೇವ: ನಾನರಿವೆನೆಂತು?

ಸಂಸಾರಿಗಳ ಬಾಳು ಬೇಡೆಂದು ಬಾಲ್ಯದೊಳೆ
ಒದರಿ ನಿಂದೆನಗೆ ಇನ್ನೂ ಆಸೆ ಉಳಿದಿತ್ತು;
ಮಾಂಸದಾಸೆಯು ತೊರೆದು ದೂರದಲಿ ನಿಂದೊಂದು
ಮುದಿಮೀನ ಹೃದಯದಲಿ ಚಪಲವಿತ್ತು.

ಸಾವನಾಶಿಸಿ ನಿಂದ ತರುವ ಮಧ್ಯದಲಿನಿಸು
ಹಸಿ ಇರಲು, ಅದ ಮುಗಿಸೆ ತೆಂಗಾಳಿ ಅದರಲ್ಲಿ
ಹೂವ ಬಂದಣಿಕೆಯನು ತಂದಿರಿಸಿ ಸಲಹಿಸಿತು;
ಉಸುರಲಳವೇ ನಿನ್ನ ಸೂತ್ರವಿದನು.

ಅಂದವಳ ತಂದು ಅದು ನಿನ್ನ ಪ್ರೇರಣೆ ಎಂದೆ;
ಅವಳು ಬೆಳೆವಂದೆನ್ನ ಮನ ಉಬ್ಬಿ ನಲಿದಾಡೆ
ಎಂದೆನದನೂ ನಿನ್ನ ನಿತ್ಯ ಪ್ರೇರಣೆಯೆಂದು;
ನವನಿಸುವುದೆಲ್ಲವೂ ನಿನ್ನದೆಂದೆ.

ಇಂತವಳ ಎಳೆಯ ಬಾಳಿಗೆ ಎನ್ನ ಜೀವವನು
ಹೂಡಿ, ಸಾರಥಿಯಾಗಿ ನಡೆಯಿಸುತ, ಬಾಲಕಿಯ
ಸಂತಸಪನೆಳಸುವೀ ಹೃದಯದೊಳದಾವುದೋ
ಕೇಡಾಗಲಿಹುದವಳಿಗೆಂದುಸುರುವೆ.

ತಾಪಸದ ನೋಟದಲಿ ಮುಂದೆ ಬರುವುದ ನೋಡಿ
ಒಳಿತಲ್ಲವೆಂದು ತೋರುವ ಸಂಧಿಗಳ ತಡೆದು
ನಾ ಪೊರೆದ ಕಂದನಿಗೆ ಶುಭವೆಂಬುದನೆ ತರಲು
ಬಲವನಿತ್ತಿರುವೆ ನೀ ಕರುಣೆಯಿಂದೆ.

ಬಲವಿಹುದರಿಂದೆ ಮನ ಅಂತೆಸಗಲಾಶಿಪುದು;
ನಿನ್ನ ಸೂತ್ರವ ತಡೆಯೆ ತವಕಿಪುದು; ನಿನ್ನೆದುರು
ಮಲೆವ ಈ ಪೌರುಷವನು ಕಳೆದು ಪಾಲಿಸು ದೇವ,
ಎನ್ನರಿವು ಅರಿವೆ ನಿನ್ನರಿವ ಮುಂದೆ.

ಅವನರಿವ ಪರಿಮಿತಿಯನನುಸರಿಸಿ ಮಾನವನು
ಇದು ಒಳ್ಳಿತಿದು ಅಲ್ಲವೆಂದು ಭ್ರಮಿಸಿಸನು; ಯುಗದ
ಜವನಿಕೆಯು ಮರೆಯು ಫಲಗಳನು, ಆ ಫಲಗಳಲಿ
ಹುದುಗಿರುವ ಫಲಗಳನು, ಎಂತರಿವನು?

ಏನಾಗಲಿಹುದೆಂದು ಅರಿವ ಎನ್ನರಿವ ಪರಿ,
ಕೇಡಪ್ಪುದೆನೆ ಅದನು ತಡೆವೆನ್ನ ಬಲದ ಪರಿ,
ಮೌನಿವೃತ್ತಿಯು ಮರೆದ ನಾನು ಮಮತೆಯೊಳಿಳಿದು
ಮೂಢನಾಗುವ ಪರಿಯು, ಪರಿಕಿಸುವರೆ.

ನಾನವಳ ತಂದೆಯೆನೆ ನೀನು ನೂರ್ಮಡಿ ತಂದೆ;
ಕಷ್ಟವಹುದವಳಿಗೆಂವೆನ್ನ ಹೃದಯದಿ ನಾನು
ಮ್ಲಾನವಾಗಿರುವುದಕೆ ನೂರುಮಡಿ ನೀ ಬೇವೆ;
ದೃಷ್ಟವಿದು; ತಥ್ಯವಿದು; ಅರಿವೆನಿದನು.

ಈಗಾವ ನೋವನವಳೇಕೆ ಸಹಿಸಲಿಬೇಕೊ?
ಲೋಕ ಮುಂದಾವ ಕಲ್ಯಾಣವನು ಪಡೆವುದಕೆ
ಬೇಗೆಯಿದು ಬೇಕಿಹುದೊ? ನೀನಿದೆಲ್ಲವ ಬಲ್ಲೆ.
ಸಾಕುವನು ನೀನು, ನೂಕುವನು ನೀನು.

ತಥ್ಯವನು ನೋಡುವರೆ, ಅವಳ ಸಲುವಾಗಿಲ್ಲಿ
ಪ್ರಾರ್ಥಿಸಲು ಬಂದುದೆಂಬುದು ಅರ್ಧಮನ ಮಾತ್ರ;
ನಿತ್ಯಸೂತ್ರವನು ನಾನೆಂತಾದರೂ ತಡೆದು
ವ್ಯರ್ಥಗೆಯ್ವೆನೊ ಎಂಬ ಭೀತಿ ಅರ್ಧ.

ನಡೆವುದನು ನೀ ಬಲ್ಲೆ, ನೀನೆ ನಡೆಯಿಸುತಿರುವೆ;
  ನಿನ್ನ ಇಷ್ಟವನರಿದು, ಅದ ಬಿಡದೆ ಮುಂದರಿದು,
ಒಡೆಯನಾಣತಿಯೊಳಿಹ ಸೇವಕನ ತೆರದೊಳಿರೆ,
  ಧನ್ಯವಪ್ಪುದು ಬಾಳು; ಇಲ್ಲದಿಲ್ಲ.

ನಾಳೆ ಆಶ್ರಮದೊಳೇನೇನು ಎಂತಾಗುವುದು
  ನಿನ್ನ ಇಚ್ಛೆಯೊಳಿಹುದೊ ಅಂತೆ ಅದು ಆಗಲಿ;
ಮಾಲಿನೀತೀರದ ತಪೋವನವು ನಿನ್ನದು;
  ಕುನ್ನಿ ನಿನ್ನವಳು; ನೀನವಳ ಪೊರೆವೆ.

# ಮಾವಳಿಗಳ ಗೀತ

ಹರ ಮಹದೇವ್ ಹರ ಮಹದೇವ್
  ಹರ ಮಹದೇವ್ ಹರ ಮಹದೇವ್
ಹರ ಮಹದೇವ್ ಹರ ಮಹದೇವ್
  ಹರ ಹರ ಹರ ಹರ ಹರ ಮಹದೇವ್.

ಶಿವರಾಯನ ಮಹದೇವನು ಒಮ್ಮೆ
  ಬಾರೆಂದು ಬಳಿಗೆ ಕರೆಯಿಸುತ
ಶಿವ ನೀ ಧರ್ಮವ ಸಲಹಲು ಬೇಗನೆ
  ಭಾರತಭೂಮಿಗೆ ನಡೆಯೆಂದ.
ಹರ ಮಹದೇವ್ ಹರ ಮಹದೇವ್
ಹರ ಹರ ಹರ ಹರ ಹರ ಮಹದೇವ್.

ಅಂಬಾಭವಾನಿ ಲೋಕದ ತಾಯಿ
  ಶಿವನನು ಅಂದು ಹರಸಿದಳು
ಇಂಬಾಗಿ ವಿಜಯಲಕ್ಷ್ಮಿಯು ಸಂತತ
  ಬನವದಿ ನಿನ್ನಲಿ ನಿಲಲೆಂದು.
ಹರ ಮಹದೇವ್ ಹರ ಮಹದೇವ್
ಹರ ಹರ ಹರ ಹರ ಹರ ಮಹದೇವ್.

ಶಿವನಂದು ನಮ್ಮ ಭೂಮಿಗೆ ಬಂದ
  ಹರನಾಣತಿಯನು ನಡೆಸಲಿಕೆ;
ಆವನಾಣತಿಯನು ನಡೆಸಿದ ಮನುಜಗೆ
  ದೊರೆವುದು ಸುಖ ಇಹಪರಗಳಲಿ.
ಹರ ಮಹದೇವ್ ಹರ ಮಹದೇವ್
ಹರ ಹರ ಹರ ಹರ ಹರ ಮಹದೇವ್.

## ತಾವರಿ

ಶಿವರಾಯ ನಮ್ಮ ಶಿವರಾಯ,
  ಹಗೆ ಮುಗಿಲಿಗೆ ಇವ ಪವಮಾನ;
ಬವರದೊಳವನಾ ಉಜ್ವಲತೇಜವ
  ಬಗೆವುದು ಸಾಧ್ಯವೆ ಮನುಜರಿಗೆ?
ಹರ ಮಹದೇವ್ ಹರ ಮಹದೇವ್
ಹರ ಹರ ಹರ ಹರ ಹರ ಮಹದೇವ್.

ಶಿವರಾಯ ನಮ್ಮ ಶಿವರಾಯ,
  ಹಗೆಗಳಿಗಿವನು ಜವರಾಯ,
ಶಿವರಾಯನ ಹೆಸರುಸುರಿದ ಮನುಜಗೆ
  ಒಗೆವುದು ನೆರೆ ತುಂಬಿದ ತೇಜ.
ಹರ ಮಹದೇವ್ ಹರ ಮಹದೇವ್
ಹರ ಹರ ಹರ ಹರ ಹರ ಮಹದೇವ್.

ಶಿವರಾಯನ ಆಳ್ವಿಕೆಯೇ ಆಳ್ವಿಕೆ,
  ಅವನೂಳಿಗವೇ ಊಳಿಗವು;
ಶಿವರಾಯನ ಆಣತಿಯಲಿ ನಡೆದಗೆ
  ಸವನಿಸುವುದು ಸುಖ ಇಹಪರದಿ.
ಹರ ಮಹದೇವ್ ಹರ ಮಹದೇವ್
ಹರ ಹರ ಹರ ಹರ ಹರ ಮಹದೇವ್.

ಭಾರತಭೂಮಿಯು ಸಲಹಲಿಕೆಂದು
  ಶಿವರಾಯ ಬಂದ ಶಿವರಾಯ;
ಆರಿಯ ಧರ್ಮವ ನಿಲಿಸಲಿಕೆಂದು
  ಶಿವರಾಯ ನಿಂದ ಶಿವರಾಯ.
ಹರ ಮಹದೇವ್ ಹರ ಮಹದೇವ್
ಹರ ಹರ ಹರ ಹರ ಹರ ಮಹದೇವ್.

ಶಿವರಾಯ ಶತ್ರುರಾಯರ ಗಂಡ;
  ಶಿವರಾಯ ಹಗೆಯ ಜವರಾಯ;
ತವಕಿಪ ಮ್ಲೇಚ್ಛರ ಕತ್ತಲ ತಂಡಕೆ
  ಶಿವರಾಯ ಚಂಡಮಾರ್ತಾಂಡ.
ಹರ ಮಹದೇವ್ ಹರ ಮಹದೇವ್
ಹರ ಹರ ಹರ ಹರ ಹರ ಮಹದೇವ್.

ಶಿವರಾಯ ಸುಖದಿ ಸಂತತ ಬಾಳಲಿ;
  ಶಿವರಾಯ ನಮ್ಮ ಶಿವರಾಯ
ಭವನಾತಗೆ ಆಯುಷ್ಯವ ನೀಡಲಿ,
  ಭವೆ ನೀಡಲಿ ನಿಜವಿಜಯವನು.
ಹರ ಮಹದೇವ್ ಹರ ಮಹದೇವ್
ಹರ ಹರ ಹರ ಹರ ಹರ ಮಹದೇವ್.

ಹರ ಮಹದೇವ್ ಹರ ಮಹದೇವ್
  ಹರ ಮಹದೇವ್ ಹರ ಮಹದೇವ್
ಹರ ಮಹದೇವ್ ಹರ ಮಹದೇವ್
  ಹರ ಹರ ಹರ ಹರ ಹರ ಮಹದೇವ್.

## ಗುರುವಿಗೆ

ಗುರುದೇವ ನಿನ್ನಡಿಗೆ ಶರಣುಬಾಗಿದೆ ನಾನು;
ವರವಿನಾಯಕನೆಂದು, ವರದೆ ಸರಸತಿಯೆಂದು,
ಹರಿಯೆಂದು ಹರನೆಂದು ಹಿರಿಯ ಕವಿಗಳು ಹಿಂದೆ
ಕರೆದೆಲ್ಲ ಹೆಸರಿಂದ ಕರೆದು ನಿನಗೆರಗಿ.

ಮೊದಲರಿಯದೀಸೃಷ್ಟಿ ಮೊದಲಾದ ಕ್ಷಣದಲ್ಲಿ,
ಹುದುಗಿ ಕವಿದಿರ್ದ ಕಗ್ಗತ್ತಲೆಯ ತಂಡಗಳ
ಹೃದಯದಲಿ ಬೆಳಕ ಕಿರಿಕಿರಿಯ ಕಣಗಳನಿರಿಸಿ
ಸದೆವಡಿದೆ ತಮದ ಹಿಂಡುಗಳ ನೀನಂದೆ.

ಮಂಗಳಾತುಮ ಬೆಳಕ ಕಣಗಳವು ಲೋಕದಲಿ,
ಕಂಗಳಿಗೆ ಬೆಳಕೆನಿಸಿ ಮನಗಳಲಿ ತಿಳಿವೆನಿಸಿ,
ಸಂಗಡಿಸಿ ನಿಂದ ಜಡವನು ಜೀವಮಾಡಿ, ಹೃ
ದ್ರಂಗದಲಿ ಅರಿವಾಗಿ ಪಸರಿಸುತಲಿಹವು.

ಒಳ್ಳಿತಹ ಯೋಚನೆ, ಒಳ್ಳಿತಹ ಭಾವನೆ,
ಒಳ್ಳಿತೆಂದೆನುವ ಬಹುಪರಿಯ ನಡೆನುಡಿ ಕಥೆ,
ಎಲ್ಲವೂ ನೀನಿಟ್ಟ ಬೆಳಕಿಂದ ಬಳೆದಿಹವು;
ಎಲ್ಲ ಒಳ್ಳಿದಕೆ ನೀ ಗುರು, ದೇವದೇವ.

ಜಡದಿನಿಸ ತೆಗೆದದರ ಮಧ್ಯದಲಿ ನಿನ್ನಿರವ
ಕಿಡಿಯೊಂದನಿರಿಸಿ ನನ್ನನು ಮಾಡಿ, ನಾ ನಿನ್ನ
ಒಡೆಯ ಎಂದೆನೆ ಕಲಿಸಿ, ಎನ್ನ ಅಂತರ‍್ಯದಲಿ
ಒಡನಾಡಿಯಾಗಿ ನಿಂದಿರುವೆ ನೀ ದೊರೆಯೆ.

ಯುಗ ಯುಗ ಯುಗಾಂತರದೊಳುದಿಸಿದುದು ಮೊದಲಿನಗೆ
ಒಗೆದ ಬಹುಜನ್ಮದಲಿ, ಒಳ್ಳಿದನೆ ಆಶಿಸುತೆ
ಉಗುವ ಮನದಾಸೆಯನು, ಒಳ್ನುಡಿಗೆ ಸೋಲುತಿಹ
ಬಗೆಯ ತಿರುವನು, ಕೊಟ್ಟು ಗುರುವಾದೆ ನೀನು.

ಅಂತೆನ್ನ ಹೃದಯದಲಿ ಮನದಾಸೆಯನು ಬೆಳೆಸಿ,
ಸಂತತವು ಜಗದೊಳೆಲ್ಲೆಡೆಯಿಂದೆ ಒಳ್ಳಿದನು
ಅಂತರಂಗಕೆ ಸೊಗಯಿಸುವ ರೀತಿಯಲಿ ತೋರಿ,
ಎಂತೆಂತು ಎಲ್ಲಿ ಅಂತಲ್ಲೆಲ್ಲ ಕಲಿಸಿ;

ಒಳಗಿಂದ ಎಡೆಬಿಡದ ಪ್ರೇರಣೆಯ ಹಿಂಡುಗಳ
ಚಲನದಲಿ, ಹೊರಗಿಂದ ಒಳಿತು ಸೊಗಸೆಂಬುದರ
ಒಲವ ಗೆಲುವಂದದಲಿ, ಮನವ ನೀ ಕರಗಿಸುತೆ
ಸುಲಭದಲೆ ಬಾಳನುದ್ಧರಿಸುತಿಹೆಯೈಸೆ.

ಎನ್ನ ಹೃದಯದಿ ನಿಂದು ಎಲ್ಲ ಬದುಕಲಿ ಕಂಡು
ಎನ್ನ ಬದುಕನು ಒಳ್ಳಿದಕೆ ತಿದ್ದಿ ಪೊರೆಯುತಿಹ
ಸನ್ನುತಾ ಗುರುದೇವ ಲೋಕೇಶ ನಿನ್ನಡಿಗೆ,
ಪನ್ನಗಾದ್ರಿನಿವಾಸ, ನಮಿಸುವೆನು, ತಂದೆ.

122-47. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು

# ಮುನ್ನುಡಿ

ಈ ಕವಿತೆಗಳ ಗುಚ್ಛದಲ್ಲಿ ಸೇರಿರುವ ಅಂಗಾಮಿಾ ಪ್ರೇಮಗೀತವು ಅಸ್ಸಾಮ್‌ದೇಶದ ಅಂಗಾಮಿಾನಾಗರೆಂಬ ಕಾಡು ಜನರ ಒಂದು ಗೀತದ ಅನುವಾದ. ಈಗ ಇಂಡಿಯಾದೇಶದ ಸೆನ್ಸಸ್ ಕಮಿಾಷನರಾಗಿರುವ ಡಾಕ್ಟರ್ ಹಟನ್‌ರವರು ಈ ಜನರ ವಿಚಾರವಾಗಿ ತಾವು ಬರೆದಿರುವ ಒಂದು ಗ್ರಂಥದಲ್ಲಿ ಆ ಗೀತವನ್ನು ಇಂಗ್ಲೀಷಿಗೆ ಭಾಷಾಂತರಮಾಡಿದಾರೆ. ಅದನ್ನು ಓದಿದಾಗ ನನಗೆ ಕಾಡಿನವರೆಂಬ ಜನರ ಮನಸ್ಸು ಎಷ್ಟು ಸಂಸ್ಕೃತವಾಗಿರಬಹುದೆಂದು ತೋರಿ ಅನುವಾದದಲ್ಲಿ ಅರ್ಥವನ್ನು ಕೆಡಿಸಿಯೇನೆಂಬ ಭೀತಿಯಿದ್ದರೂ ಅದು ನಮ್ಮ ಜನಕ್ಕೆ ತಿಳಿದಿರಬೇಕೆಂಬ ಉದ್ದೇಶದಿಂದ ಅದನ್ನು ಕನ್ನಡದಲ್ಲಿ ಬರೆದಿದೇನೆ. ಗೀತದಲ್ಲಿ ಬರುವ ಸೊರೊಳು ಎನ್ನುವುದು ಒಂದು ಸ್ಥಳ; ಕೆಸ್ತೂರು ಎನ್ನುವುದು ಮೂಲದ ಕೆಟ್ಸೋರು ಎನ್ನುವುದಕ್ಕೆ ಭಾಷಾಂತರದಲ್ಲಿ ಸಂಭವಿಸಿದ ರೂಪಾಂತರ.

ಬೆಂಗಳೂರು, ಪ್ರಜೋತ್ಪತ್ತಿ ಸಂ॥
ಕಾರ್ತೀಕ ಬಹುಳ ತ್ರಯೋದಶಿ

ಶ್ರೀನಿವಾಸ

# ವಿಷಯಸೂಚಿಕೆ

## ಚೆಲುವ ದೇವಿ

ವಿಂಧ್ಯಪರ್ವತದ ಮಲೆಗಳ ಮಾಲೆ ಸುತ್ತ

ಸಾಗರದ ಅಲೆಯು ಮಾಲೆಯು ತೆರದೆ ಬಳೆದು,

ಚೆಂದದಲಿ ನೋಟವೋಡುವವರೆಗೆ ಹರಿದು,

ಆಗಸದ ಅಂಚನೆಲ್ಲೆಡೆಯು ಮುಟ್ಟಿಹುದು ;

ಬಣ್ಣಬಣ್ಣದ ಎಲೆಯು ಸೊಗಸಿನಲಿ ವನವು

ಕಣ್ಣ ತಣಿಸುತಲಿಹುದು ; ಸೋಲುತಿದೆ ಮನವು.

ನೇಸರಿಳಿದಿಹನು ಬಾಂದಳದ ಪಡುಗಡೆಗೆ,

ಪುಟವಿಡಿದ ಹೊಂದಟ್ಟಿವೊಲು ತೊಳಗುತಿಹನು ;

ಮಿಾಸಲಾಯ್ತೆಲ್ಲ ಜಸವಿಲ್ಲೆಂದು ಕಣ್ಣ

ಮಿಟಕಿಸದೆ ನಭವು ಅವನನೆ ನೋಡುತಿಹುದು ;

ಕಟ್ಟಕಡೆಯಾ ಗಿರಿಯ ಆತುಮದ ಕೂಗು

ಮುಟ್ಟಿತವನನು ; ಅದನು ಸೇರುವನು ಬೇಗ.

ಸೇರುವನು ; ಸೇರಿ ಮರೆಯುವನು ಇನಿತರೊಳೆ ;

ಆಮುನ್ನ ಜಗವ ಬೆಳಕಿಂದ ತುಂಬಿಹನು ;

ನೂರು ವರ್ಣದ ಎಲೆಯು ಸೊಬಗೆಸೆವ ವನಕೆ

ಪ್ರೇಮಪೂರಿತ ಹಾಸವನು ಸೂಸುತಿಹನು.

ಕಣ್ಣಿನಾಸೆಯ ತೀವಿ ಬಗೆಯ ಮಗಮಗಿಸಿ

ಎನ್ನೊಳಗ ಸೋಕಿಹುದು ಸಂಜೆಯಾ ಸೊಗಸು.

## ಚೆಲುವು

ಇಲ್ಲಿ ಮಲೆಗಳ ನಡುವೆ ಮಡುಗಳನು ಕೊರೆದು
    ತಿಳಿಯ ನೀಲದ ನೀರ ಹಿಡಿದು ಹೊಳೆಯೊಂದು,
ಕಲ್ಲು ಮಣ್ಣಿನ ಹಾಸಿನಗಲದಲಿ ಹರಹಿ,
    ಚಲಿಸುವುದೆ ತಿಳಿಯದೊಲು ಮೆಲುಮೆಲನೆ ಉರುಳಿ
ಹಿಂದಾದುದನು ನೆನೆವ ಮನ ನಿಂದು ನೆನೆದು
ಮುಂದರಿವ ತೆರದೆ ಮುಂದರಿಯುತಿದೆ ಜಸಿದು.

ಮೆಲುಗಾಳಿ, ಪೂರುವದ ಗಿರಿಗಳೆಡೆಯಿಂದ
    ಹರಿತಂದು, ಎದುರಿನಲಿ ಹರಿದು ಮುಂಬರಿವ
ತಿಳಿವೆಳಗ ಕಿರಣ ಸರಣಿಯ ಭರದೊಳಪ್ಪಿ,
    ಸರಸದಲಿ ಅದರೊಡನೆ ನಲಿದಾಡುತಿಹುದು.
ಒರ್ವ ದೇವಿಯು ಅವಳಿಮಕ್ಕಳವರೊಲವ
ಸರ್ವವನ ನೋಡಿ ಮೆಚ್ಚಿತು ತಳೆದು ನಲವ.

ನೀರು ನೆಲ ಮಲೆಸಾಲು ಹೊಂಬಿಸಿಲು ಗಾಳಿ
    ವನ ನಭಗಳನುಸರಣೆಯಲಿ ಸೇರಿ ಒಂದು
ಧೊರಣೆಯೊಳೀ ಸಂಜೆಗಿತ್ತ ಮೆರುಗಿದಕೆ
    ಧನದ ಕನಕದ ಹೊರೆಯು ಚೆಂದ ಎಣೆಯಹುದೆ?
ತಾಯಿ ಪ್ರಕೃತಿಯ ಮೊಗದವೀಕಾಂತಿ ಶಾಂತಿ;
ಈಯಂದ ಚಂದ; ಈ ಪ್ರೇಮವಿಭ್ರಾಂತಿ.

## ಚೆಲುವು

ಕಣ್ಣೀಗ ಕಾಣುತಿಹ ಚೆಲುವ ನೋಟಕ್ಕೆ
    ಮಿಗಿಲಾದ ಚೆಲುವು ಇರಬಹುದೆ ಲೋಕದಲಿ?
ಇನ್ನಿದಕೆ ಮೆರುಗಿಡುವ ಕಲೆ ಒಂದು ಉಂಟೆ?
    ಸೊಗಸು ಇನ್ನಿನಿಸಾದರೂ ಮುಂಚಬಹುದೆ?
ಎಂದು ಮನ ಆನಂದದಲಿ ಕೇಳುತಿರಲು
ಮುಂದೆ ಕಂಡುದು ಎಲ್ಲ ಚೆಲುವಿಕೆಯ ಹುರುಳು.

ನಗೆ ಮೊಗದ ತಿಳಿಗಣ್ಣ ನಳಿದೋಳ ಚೆಲುವೆ–
    ಬಳಿಯೂರ ಬಾಳ ಬೆಳಕಾಗಿರ್ಪಳಹುದು–
ಚಿಗರಿಯಂದದ ಹಗುರವಾದ ನಡೆಯಿಂದ
    ಹೊಳೆಗೆ ಕೊಡ ಹಿಡಿದು ತಾನಿಳಿತಂದಳಾಗ;
ಮುಟ್ಟಿದುದು ಮುಗಿಲನಾಕ್ಷಣ ಚೆಲುವ ಶಿಖರ;
ಸೃಷ್ಟಿಯಂದಕೆ ಹೆಣ್ಣಿನಂದ ಮಣಿಮುಕುರ.

ಮಗುವಾಗಿ ತಾಯ್ತಂದೆವಿರ ಮನವ ನಲಿಸಿ,
    ಸತಿಯಾಗಿ ಪತಿಯ ಹೃದಯದ ಸುಖವ ಸಲಿಸಿ,
ಜಗದಂಬೆಯವತಾರದಂತೆ ಕಳಕಳಿಸಿ
    ಸುತರ ಹಡೆದೆತ್ತಿ ಮುದ್ದಾಡಿ ಸಲೆಬೆಳೆಸಿ,
ಲಲನೆ ಅಂದುದ್ದೇಶಿಸದೆ ಕಣ್ಣ ತಣಿಸಿ
ಸುಳಿದಳೆದುರಿಗೆ ನನ್ನ ಆತುಮವ ಮಣಿಸಿ.

## ಚೆಲುವು

ಹೊರಗದಾವುದೊ ಚೆಲುವ ಮುಗುಳರಳುತಿಹುದು ;
ಒಳಗರಳುತಿಹುದಂತೆ ಅದನರಿವ ಶಕ್ತಿ ;
ನಿರುತವೂ ನಡೆವವೀ ಎರಡು ವಿನ್ಯಾಸ,
ಬೆಳೆವುದಿಂತನವರತ ಚೆಲುವಿನ ವಿಕಾಸ ;
ಅಂದಂದು ಕಾಂಬ ಚೆಲು ಹಿರಿದೆನಲು ಒಪ್ಪು ;
ಮುಂದುವರಿಯದು ಇನ್ನಿದೆನಲು ಅದು ತಪ್ಪು.

ಅದುವೊದಲು ಆಗಾಗ ಒಮ್ಮೊಮ್ಮೆ ನಾನು
ಅಂದಿನಂದವನು ನೆನೆವೆನು ಮನದಿ ಮರಳಿ ;
ಕದಲದಿಹುದಾ ಚೆಲುವೆ ಹೊಳೆಗಿಳಿದು ಬಂದ
ಒಂದು ನಿಮಿಷದ ಚಿತ್ರ ಎಲ್ಲವನು ಮರೆಸಿ.
ಕೊಳೆ ಸೋಕದೊಂದು ಮೆಚ್ಚುಗೆ ಉಕ್ಕಿ ಹರಿದು
ಒಳಗ ಬೆಳಗುವುದು ಬಣ್ಣಿಪ ನುಡಿಯ ಜರೆದು.

ಮನದ ಬಾಂದಳಕಿಂಥ ನೆನವು ನಕ್ಷತ್ರ ;
ತಾನೊಂದು ಬೆಳಗುವುದು ದೆಸೆಯೊಂದನೆಲ್ಲ.
ಮನುಜನನು ಗೆಲುವ ಚೆಲುವಿನ ತತ್ತ್ವ ಜಗದ
ಮಾನವತೆಯೆಂದೆನಗೆ ಕಲಿಸಿತಾ ಸಂಜೆ ;
ಮರೆಯ ಪರಮಾತುಮದ ಲೀಲೆಯೊಳಸಂಚು
ತೆರೆಯ ಮುಂದೆಸೆವೆಲ್ಲ ಚೆಲುವ ಸೆಳೆಮಿಂಚು.

## ಕಾಡುಹೂಗಳು

೧

ಕಲ್ಲು ಮಣ್ಣು ಹೆಂಟೆ ಮುಳ್ಳು :
ಅವುಗಳ ನಡುವೆ ಇದೆಕೊ ರತ್ನ;
ಮುಳ್ಳು ಮಣ್ಣು ನೊರಜಿನ ನಡುವೆ
ಇಕೊ ಹೊಚ್ಚ ಹೊಸ ಹೊನ್ನಕ್ಷತ್ರ.

ಇದೆಕೊ ದಾರಿಯ ಬದಿಯಲಿ ಹುಲ್ಲಲಿ
ವಿಷ್ಣುಕ್ರಾಂತಿಯ ಪರಿಮಿತ ನೀಲ;
ಇಲ್ಲಿ ಬೇರೆ ಯಾವುದೊ ಬಹು ನೀಲದ
ಮಡಲಲಿ ಹಳದಿಯ ಕುಸುರಿಯ ಲೋಲ.

ರಾಗಿಯ ಪೈರಿನ ಮಧ್ಯದಿ ಮುಳ್ಳಲಿ
ಕೊಂಬಿನ ಸುಂದರ ಇಕೊ ಗುಬ್ಬಚ್ಚಿ;
ಬದುವಿನ ಗಿಡದಲಿ ಊದಾ ಬಣ್ಣದ
ಚಳತುಂಬಿನ ಚೆಲುಹೂವಿನ ಕುಚ್ಚು.

ಹೊಲದಲಿ ಹೊಂಬಣ್ಣದ ಹೊಳೆ ಹರಿಸಿ
ದತ್ತೂರಿ; ಆರಂಬದ ಕರೆಕರೆ;
ನನ್ನವೊಲಲೆಯುವ ಸೋಂಬರ ಮೆಚ್ಚು;
ಇಲ್ಲಿ ಇದರ ಸೋದರ ನೇಸರಮರಿ;

## ಚೆಲುವು

ಹತ್ತೋ ನೂರೋ ದಳಗಳ ನಡುವೆ
    ಮಿನು ಮಿನುಗುವ ಈ ಬಟ್ಟನೆ ಪೀತ:
ಅಲೆವೆಲರಿಗೆ ತಲೆಯೊಲೆಯದ ನಿಲುವು;
    ಚೆಂದ ಇದೆಸಗುವ ಸೂರ್ಯನ ಬೂಟ.

ಇಲ್ಲಿದೊ ಬೊಂತೆಯು ಕಳ್ಳಿ ಪಿಂಗಳ
    ವರ್ಣದ ಹೂವಲಿ ತೋರಿದೆ ನಚ್ಚು;
ಎಲ್ಲರ ಜೊತೆಯಲಿ ರೋಜಿ ಹೂತು
    ಹರಡಿದೆ ತನ್ನ ಬಣ್ಣದ ಹುಚ್ಚು.

ಏನಿದ ಚುಕ್ಕಿ? ಅದೆ? ಕಣ್ಣಿಕ್ಕಿ
    ನೋಡು; ಅದು ದಳ ಸಾಲ್ಕರ ಮೋಸ;
ಹೂಮನೆತನವಲಿ ಮರಿಮಗ; ಇದ್ದೂ
    ಕಾಣದ ತಾರೆಯ ಕೂಸಿನ ಕೂಸು.

ಹೂದಳವಿಂತು ವಿಗಡಿಸೆ ನಿಂತು
    ಹಂಬಿನೇಣಿಯಲಿ ಮರವನು ಏರಿ,
ಕಾಡಿನ ಹೂಗಳು ಜಗವನು ಗೆಲಿದೆವು,
    ಎಂದು ಕೂಗುತಿದೆ ಇಲ್ಲಿ ತುತೂರಿ.

## ಚೆಲುವು

### ೨

ತಿರೆಯಲಿ ಮನುಜರು ನೋಡುವ ನೋಡದ
        ಎಲ್ಲೆಡೆ ಅರಳಿದೆ ಯಾವುದೊ ಚಂದ;
ಬರಿ ನಗೆಯಾಟದಿ ಸಂತಸವಾಂತು
        ಅದು ಯಾವುದೊ ನಲವಿನ ಚಕ್ಕಂದ.

ಮರೆಯಲಿ ಅಡಗಿಹ ಹೂಗಳೆ ನೀವು
        ಕಣ್ಮುಚ್ಚಾಲೆಯನಾಡುತಲಿಹಿರೋ?
ಎದುರಿಗಿದ್ದು ಕಾಣದ ಕಿರಿಚುಕ್ಕಿಯೆ
        ಇಂದ್ರಜಾಲವನು ಮಾಡುತಲಿಹೆಯೊ?

ನಿಮ್ಮಾನಂದದಿ ಆಡುತ ಕೂಗುತ
        ನೀವಿರೆ ನೋಡದೆ ನಡೆವೆವು ನಾವು;
ನೋಡರು ಎಂದು ಮುನಿಯುತೆ ಮರೆದಿರೊ
        ಉಳಿವುದೇನು? ಕೊಳೆ ಕಸಗಳ ರೇವು.

ನೀವಿರೆ ನೆಲ ಚೆಲುವಿನ ಆಟದ ಹೊಲ;
        ಮರೆದಿರೊ ಚೆಲುವಿಗೆ ಅದೆ ಹಿರಿಮಸಣ.
ನಗುತಿರೆ ನೀವು ನಗುತಿಹೆವಾವು;
        ಮರೆದರೆ ಮಸಗದೆ ಲೋಕದ ವ್ಯಸನ?

## ಚೆಲುವು

ನೋಡಲಿ ಬಿಡಲಿ, ಮುನಿಯದೆ ಇಂತೇ
ಬಾಳಿರಿ ಬೆಳೆಯಿರಿ ಬಹು ಬಹು ಕಾಲ;
ಎಂದಿಗು ಅರಿಯದೆ ಇರಿ ಜನ ನಿಮ್ಮನು
ನೋಡರು ಎಂಬ ಅತೃಪ್ತಿಯ ಸೋಲ.

ಬಾಳ್ವಿರಿ, ಬಲ್ಲೆನು, ವಿಶ್ವವಿಧಾತನು
ನಿಮಗೀಯದ ಐಸಿರಿ ಒಂದಿಲ್ಲ;
ಗಾತ್ರವು ಹರಕೆಯ ನುಡಿಸಿತು ಮನ್ನಿಸಿ;
ಇದರಿಂದ ನಿಮಗೆ ಕುಂದಿನಿಸಿಲ್ಲ.

ಕಾಣುವ ಸೃಷ್ಟಿಯ ಕಾಣದೆ ಸುತ್ತಿಹ
ಆನಂದಾಬ್ಧಿಯ ಅಮೃತದ ತುಂತುರು
ನೆಲ ಮೊಗ ನಭದಲಿ ಹೂ ನಗೆ ತಾರೆಯ
ರೂಪಾಂತಿಹವು, ಅನಂತ ನಿರಂತರ.

ಆ ಅಬ್ಧಿಯೊಳಾಳ್ವಾತ್ಮದ ಪುಣ್ಯ
ಎಂದಿಗೆ ಬಹುದೋ ಬಾರದೊ ಕಾಣೆನು;
ಬೆಳೆಯಲಿ ನಿಮ್ಮನು ನೋಡುತೆ ನಲಿವೀ
ಕಣ್ಣ ಪುಣ್ಯ, ಇದನೆಂದಿಗು ಮಾಣೆನು

## ಬೆಳವನ ಹಕ್ಕಿ

ತೋಪಿನ ಮರದಲಿ ಮೊಳಗಲು ತೊಡಗಿವೆ
ಬೆಳವನ ಹಕ್ಕಿ ಸಖಿ.
ಓಪನ ಓಪಳ ಕೂಗಿದು ಜಗದಲಿ
ಹಳೆಕಾಲದ ಕೂಗು.

ಕೂಯೆನ್ನುವುದಿದು ಕೂಯೆನ್ನುವುದದು
ಅರೆ ಅರೆ ಚಣ ಬಿಟ್ಟು;
ಆಯುವರಿತು ಬರಬರುತ ಅಂತರವ
ಮರೆಯಿಸಿ ಮೊರೆಯುವುವು.

ಕೂ ಕೂ ಕೂ ಕೂ ಕೂ ಎನ್ನುತಲಿಹ
ಸ್ವರವಿದು ಇನಿತರೊಳೆ
ನೂಕುತ ನುಗ್ಗುತ ಕು ಕು ಕು ಕು ಎನ್ನುತ
ಹರಿವುದು ಎಡೆಬಿಡದೆ.

ಹೃದಯವ ತುಂಬಿದ ಪ್ರೇಮವು ಕಂಠವ
ಹಿಗ್ಗಿಸಿ ಹೊರಹರಿದು
ಎದುರಾಳಿಯ ಮುಳುಗಿಸುವೆನು ಎನ್ನುತ
ನುಗ್ಗಿ ನುಗ್ಗಿ ಬಹುದು.

## ಚೆಲುವು

ಪ್ರಿಯ ಪ್ರಿಯೆಯರ ಒಸಗೆಯ ಚೆಂಡಾಟವೊ?
　　ಮುಗಿಲು ಮುಗಿಲಿನೊಲವ
ಪಯಣಕೆ ಪಥವಹ ಮಿಂಚಿನ ಹೊಳೆಯೋ?
　　ರಿಗಮ ಪಧನಿ ಎಂಬ

ಗಾಯಕರಿಬ್ಬರ ಸ್ವರವಿನ್ಯಾಸದ
　　ಮೇಲಾಟವೊ? ಎನಿಪ
ನ್ಯಾಯದಿ ಹಕ್ಕಿ ಇದೆರಡರ ವೊಳಗು
　　ಗಾಳಿಯ ತೀವಿಹುದು.

ಲೋಹದ ತಂತಿಗೆ ತೊಗಲಿನ ನಾರಿಗೆ
　　ಈ ಸ್ವನ ಬಹುದುಂಟೆ?
ಮೋಹವು ಮಿಡಿಯಲು ಜೀವವು ನುಡಿಯುವ
　　ಭಾಸ್ವರ ನಿನದವಿದು.

ಅವಳಿಜವಳಿಯಲಿ ಒಮ್ಮೆ ಹುಟ್ಟುವುವು
　　ಎಂಬರು ಹಕ್ಕಿ ಇದ;
ಬುವಿಯಲಿ ಬಾಳುವನಿತು ದಿನ ಬೆಳೆವುವು
　　ಸಂಬಂಧವ ಬಿಡದೆ;

ಜೊತೆಯಲಿ ಹುಟ್ಟಿದ ಹೆಣ್ಣೊ ಗಂಡೂ
ಜೊತೆಯಲೆ ಬೆಳೆಯುವುವು;
ಜೊತೆಯಲೆ ಸುಳಿಯುತ ಜೊತೆಯಲಿ ಹಾಡು
ಜೊತೆಯಲಿ ಬಾಳುವುವು;

ಜೊತೆಯಲೆ ಮಡಿವುವು; ಎಂಬರು ಜನರು:
ಒಂದು ಜೀವ ಸೋತು
ಗತಿಸಿ ನೆಲಕೆ ಬೀಳ್ವಂದಿನ್ನೊಂದೂ
ನೊಂದು ಬೀಳ್ವುದಂತೆ.

ಭಾವ ಭಾವ ಮನ ಮನ ಒಂದಾಗುತೆ
ತನುವೆರಡಾಗಿರಲು
ಜೀವವೊಂದ ಎರಡೊಡಲಿಗೆ ಹಂಚಿದೆ
ಎನಲೇನಚ್ಚರಿಯು ?

ತೋಪಿನ ಮರದಲಿ ಮೊಳಗನು ನಿಲಿಸುತೆ
ಬೆಳವನ ಜೊತೆ ಒಲವ
ಔಪಾಸನವನು ಮುಗಿಸಿವೆ; ಬಾ, ಸಖಿ,
ಕೆಳೆ ಬೆಳೆಸುವ ಇಂತು.

# ಮುರಿದುಬಿದ್ದ ವೀರಕಲ್ಲು

ನಿನ್ನ ಹೆಸರು ಏನು ವೀರ?
ಮುನ್ನ ಯಾವ ಕಾಲದಲ್ಲಿ
ಇನ್ನು ಯಾವ ಸಾಹಸವಲಿ,
ಜೀವ ನನ್ನದಲ್ಲವೆಂದು
ನೋವು ನನಗೆ ಸದರವೆಂದು
ಸಾವದಾಡೆಯನ್ನು ಹೊಕ್ಕು,
ಊರಜನದ ಮನವನುಲಿಸಿ
ವೀರನಹುದು ಇವನು ಎನಿಸಿ
ಯಾರ ಕಣ್ಣ ನೀರುಹರಿಸಿ
ಅಮರನಾದೆನೀ?

ಹಳ್ಳಿಯನ್ನು ದೋಚಬಂದ
ಕಳ್ಳಪಡೆಯ ನುಗ್ಗಿ, ತರಗ
ದಳ್ಳುರಿ ಗೆಲುವಂತೆ ಗೆಲಿದೊ;
ಮೇವ ಮುಗಿಸಿ ಮನೆಗೆ ಬರುವ
ಗೋವ ಹಿಡಿದ ಹುಲಿಯ ಸಂಜೆ
ಜಾವದಲ್ಲಿ ಕಾದಿ ತಡೆದೊ;
ನಾಡಿನೊಡಯನಾಣತಿಯನು
ಮಾಡಹೋಗಿ ಹಗೆಗೆ ಸಿಕ್ಕಿ
ಹೇಡಿಯಾಗೆನೆಂದು ನುಡಿದೊ;
ಎಂತು ಮಡಿದೆನೀ?

## ಚೆಲುವು

ಗಾಯವಡೆದು ಬಂದ ನಿನ್ನ
ತಾಯಿ ಓಡಿ ಬಂದು ನೋಡಿ
ಸಾಯೆನೇಕೆ ನಾನು ಎಂದು ;
ದೇವರೇ ಇವನನುಳಿಸು
ಸಾವೆ ನಾನು ನನ್ನ ಕೊಳ್ಳು
ದೇವದೇವ ಎಂದು ಕೂಗಿ ;
ಹೆತ್ತ ಹೊಟ್ಟೆಯುಳಲಿನಲ್ಲಿ
ಅತ್ತು ಮೊರೆದು, ನನ್ನ ಕಂದ
ಸತ್ತೆಯಾ ನನ್ನ ಬಿಟ್ಟು,
ಎಂದಳಲ್ದಳು.

ಮುದುಕನೊಬ್ಬ, ನನ್ನ ಮಗನು
ಎದವಿ ಬಂದ, ಇನ್ನುಮೇಲೆ
ಬದುಕನವನು ನೋಡಿಕೊಂಬ,
ಎಂದು ಕನಸಲಿರುತ, ನಡುವೆ
ತಂದ ನಿನ್ನ ನೋಡಿ ಆಸೆ
ನಂದಿ ಜೀವ ಬೆಂದು ಮುದುಡಿ,
ಆಸೆ ತೋರಿ ನನಗೆ ಮೊದಲು
ಮೋಸಮಾಡಿ ಹೊರಟುಹೋದ,
ಈಶ್ವರಾಜ್ಞೆ ನನ್ನ ಕರ್ಮ,
ಎಂದನಪ್ಪುದು.

## ಚೆಲುವು

ಮದುವೆಯಾದ ಹೆಣ್ಣು, ಸುಖದಿ
ಬದುಕುವಂದು ಬೇರೆ ಜನದ
ಎದುರು ಬಳಿಗೆ ಬಾರದವಳು,
ನಿನಗದೇನೊ ಆಯಿತೆಂಬ
ಜನದ ನುಡಿಯ ಕೇಳಿ, ತನ್ನ
ಮನದಿ ನಡುಗಿ ಹೆದರಿ ಕರಗಿ,
ದೇವ ಇವನನಿಂದು ಸಲಹು
ಜೀವವುಳಿಯೆ ಒಂದು ವರುಷ
ದೀವಟಿಗೆಯ ಹಿಡಿವೆ ನಿನಗೆ,
ಎಂದು ಬೇಡುತ;

ಜಾಣೆ ಮಗುವನೆತ್ತಿಕೊಂಡು
ನಾಣ ಮರೆತು ಓಡಿಬಂದು,
ಪ್ರಾಣ ಹೋಹ ಸಮಯದಲ್ಲಿ
ನಿನ್ನ ತಲೆಯ ಮಡಿಲೊಳಿಟ್ಟು,
ಕಣ್ಣನೀರನೊರಸಿಕೊಳುತ,
ನನ್ನ ಬಿಟ್ಟು ಹೋಹರುಂಟೆ?
ನನ್ನ ಮಾತ ಇರಲಿ, ಇಕೊ,
ನಿನ್ನ ಮಗನ ನೋಡಿ ಬದುಕು,
ಕುನ್ನಿ ಕರೆಯುತಾನೆ, ನೋಡು.
ಎಂದುಸಿರ್ದಳು.

ಊರ ಜನರು ಬಂದು, ಎಂಥ
ಶೂರ ಇವನು, ಎಂಥ ಧೀರ,
ನೂರು ಜನರು ಇವಗೆ ಸಮನೆ,
ಗಂಡು ಕಾಣೊ, ಇವಗೆ ಒಂದು
ದಂಡು ಸಮನೆ, ಏನು ಇವನ
ಗುಂಡಿಗೆ? ಎನೆ ಅದನು ಕೇಳಿ
ಮನದೆ ಸ್ವಲ್ಪ ಸುಖವನಾಂತು,
ಕನಿಕರದಲಿ ತಾಯಿತಂದೆ
ತನುಜ ವನಿತೆಯರನು ನೋಡಿ
ಸ್ವಲ್ಪ ಕುದಿದೆಯಾ?

ಇನಿಸು ಕುದಿದು ಮತ್ತೆ ಮನದಿ,
ಜನುಮ ಇಂದು ಸಫಲವಾಯ್ತು,
ಕೊನೆಗೆ ಬರಿಯ ಚಿಂತೆಯೇಕೆ?
ಬದುಕ ಕೊಟ್ಟ ದೈವ ಬಂದು
ಇದಿರು ನಿಂದು, ಇಂದು ನಿನ್ನ
ಎದೆಯ ರಕುತ ಬೇಕು, ಎನಲು
ಕೊಟ್ಟ ಸಾಲ ಕೊಡೆನು ಎನಲು
ಹುಟ್ಟು ಹೇಡಿಯೋ ನಾನು?
ದಿಟ್ಟತನದಿ ಸುರಿದೆನದನು
ಎಂದು ನೆನೆದೆಯಾ?

## ಚೆಲುವು

ಜೀವಗಳ್ಳನೆನಿಸಿ ಬಾಳ್ವ
ಹೇವ ಬಾಳೆ? ದಿಟ್ಟತನದ
ಸಾವು ಸಾವೆ? ಎಂದಿಗಹುದ ?
ಇಷ್ಟರಿವರು ಇವರ ಪಾಡು
ಕಷ್ಟವಪ್ಪುದೆಂದು ಓಡಿ
ಎಷ್ಟು ಕಾಲ ಬಾಳಬಹುದು ?
ಆವನೆ ಬಾಳಕೊಟ್ಟ, ಕೊಂಡ;
ಇವರನವನೆ ಪೊರೆವ; ನನಗೆ
ಬವಣೆಯೇಕೆ ಎಂದು ತಿಳಿದು
ಶಾಂತನಾದೆಯಾ?

ನೋವು ಹೆಚ್ಚಿ, ಕಣ್ಣ ಮಿಂಚ
ಸಾವ ಮುಗಿಲು ಮರೆಸಿ ಮುಂಚೆ
ಕಾವಳವನು ಕಟ್ಟುತಿರಲು;
ನೊಂದ ತಾಯಿ, ಬೇವ ತಂದೆ,
ಕಂದ, ಮಡದಿ, ಬಳಸಿನಿಂದ
ಮಂದಿ, ಇವರನೊಮ್ಮೆ ನೋಡಿ;
ತೆರೆಯ ಮುಂದೆ ನಿನಗೆ ತಿಳಿದ
ಸರುವರೊಪ್ಪುವಂತೆ ಆಡಿ
ಗುರುವಿನಡಿಯ ನೆನೆದು ಕಣ್ಣ
ಮುಚ್ಚಿ ಮರೆದೆಯಾ?

# ಚೆಲುವು

ಊರಿಗಾಗಿ ಜೀವವಿತ್ತ
ವೀರನೆಂದು ಗ್ರಾಮವೆಲ್ಲ
ಸೇರಿ ಮೆಚ್ಚಿ ಅತ್ತು ಮರುಗಿ;
ಶೂರನೆಂದು ಹಾಡಿ, ಹೂವ
ಹಾರಗಳನು ಹೇರಿ, ಬಳಿಯ
ಊರುಗಳಲಿ ಹೊಗಳಿ ಮೆರೆಸಿ;
ಇಲ್ಲಿ ಮಣ್ಣುಮಾಡಿ, ಹೆಸರು
ನಿಲ್ಲಲೆಂದು ಕತೆಯ ಕೆತ್ತಿ,
ಕಲ್ಲ ನೆಲಸಿ, ಒಲವಗುಡಿಯ
ಅಂದೆ ಸಮೆದರು.

ಒಡಲ ಮುರುಕು ಮನೆಯೊಳಸುವ
ಸೊಡರು ಗಾಳಿ ಮಳೆಯೊಳೆಂದೊ
ಕೆಡುವುದೆಂದು ಅರಿವೆವೆಲ್ಲ;
ನಡುವೆ ಒಮ್ಮೆ ಅದನು ಜಗದ
ಒಡೆಯಗಾರತಿಯನು ಬೆಳಗಿ
ಕೊಡುವ ಸಮಯ ಬಹುದು ಪುಣ್ಯ;
ಇಂಥ ವೇಳೆ ಬಹಳ ಜೀವ
ಹಿಂತೆಗೆವುದು; ಭೀತಿಯುಳಿದು
ನಿಂತು ಕೊಡುವ ಧೃತಿ ಒದಗುವ
ಪುಣ್ಯ ಮಿಕ್ಕುದು.

## ಚೆಲುವು

ಇನಿತು ಪುಣ್ಯ ನಿನ್ನದಾಯ್ತು;
ಜನುಮ ಇಂತು ಸಫಲವಾಯ್ತು;
ನೆನವು ನಾಡ ದೀಪವಾಯ್ತು;
ನಿನ್ನ ಕೃತಿಗೆ ಮೆರುಗಕೊಟ್ಟು,
ನಿನ್ನ ಹೊಗಳಿ ಹಾಡ ಕಟ್ಟಿ,
ನಿನ್ನವರನು ಸಂತವಿಟ್ಟು,
ಬಹಳ ಕಾಲ ಸೀಮೆ ನಿನ್ನ
ಮಹಿಮೆಯನ್ನು ನುಡಿಯುತಿತ್ತು;
ಗಹನವಾದ ನಡೆಯ ನೆನೆದು
ಪೂಜೆ ಮಾಡಿತು.

ಅಂದು ನಿನ್ನ ಸೇವೆ ಕೊಂಡು
ಬಂಧುವೆಂದು ಪೂಜೆಗೆಯ್ದ
ಚೆಂದದೂರು ಮುದುಗಿ, ಈಗ
ಇಲ್ಲಿ ನಿನ್ನ ಹೆಸರು ಕತೆಯ
ಬಲ್ಲ ಜನತೆಯಿಲ್ಲ; ನೆನೆವ
ಕಲ್ಲು ಮುರಿದು ಕೆಡೆದಿರುವುದು;
ಒಡಲು ಅಂದು ಅಳಿದ ತೆರದೆ
ಮಡಿದಿರುವುದು ಕೀರ್ತಿ ಇಂದು
ಕೆಡಕಿ ಕಾಲ ನಿನ್ನ ಗುಡಿಯ
ಉರುಳಿಸಿರುವನು.

## ಚೆಲುವು

ಲೋಕ ಮರೆಯೆ ನಿನಗೆ ಕೊರೆಯೆ?
ತಾಕು ಸೋಕದುರುವ ಕೀರ್ತಿ
ನಾಕದಲ್ಲಿ ಬೆಳೆಯುತಿಹುದು;
ನರರ ನೆನವು ಮುಗಿಲ ಬರಹ;
ಬರೆದರಂದೆ ನಿನ್ನ ಹೆಸರ
ಸುರರು ಸ್ವರ್ಗ ಭಿತ್ತಿಗಳಲಿ;
ಬಾಳ ನೀನು ಬಿಟ್ಟ ಕ್ಷಣವೆ
ನಾಳೆಯೊಂದಿ ಬಾಡದೊಂದು
ವೀಳ್ಯಕೊಡಿಸಿ ದೇವ ನಿನ್ನ
    ಮೆಚ್ಚುತಿರುವನು.

# ಸಾತ್ವಿಕ

*ಸಾತ್ವಿಕನು ಕುಳಿತು ಮೆಲ್ಲನೆ ಮಾತನಾಡುತ್ತಿದಾನೆ.*
*ಮುಂದೆ ಬರುವ ಮಾತೆಲ್ಲ ಸಾತ್ವಿಕನು ಆಡತಕ್ಕದ್ದೇ.*

ಕೋಪವೆನಗಿಲ್ಲ, ತಾಪವೆನಗಿಲ್ಲ.
ಭ್ರಾಂತಿಯಿಲ್ಲ ;
ಆಸೆ ಎನಗಿಲ್ಲ, ಮೋಸವಿನಿಸಿಲ್ಲ ;
ಶಾಂತ ನಾನು.

ಜಗದ ಅಗಲದಲಿ ಹಗೆಯೆಂಬದೊಂದು
ಇಲ್ಲ ನನಗೆ ;
ಸೃಷ್ಟಿಯಲಿ ಎಲ್ಲ ಇಷ್ಟವೇ ಎನಗೆ
ಎಲ್ಲ ಇಷ್ಟ.

*ಅರೆಮರೆಯಲ್ಲಿ ಆಯುಧವನ್ನು ಒಂದು ಕರಿಯ*
*ಹೂವನ್ನು ಹಿಡಿದು ಯೋಧನು ಕಾಣುತ್ತಾನೆ.*

ಯಾರು ಮರೆಯಲ್ಲಿ ? ದೂರ ಇಹೆಯೇಕೆ ?
ಕೈಯೊಳೇನು ?
ಕತ್ತಿಯೋ ಸಾವಿನ ಬುತ್ತಿಯೋ ? ಬಾ ತಾ
ಅಯ್ಯ ಬಾರ.

## ಚೆಲುವು

ಹೊಡೆವೆನೆನ್ನುವೆಯ? ಕೊಡು ನಿನ್ನ ಕೈಯ,
ಅಣ್ಣ ತಮ್ಮ;
ಕಡಿವೆನೆನು, ನಾನು ತಡೆಯೆ; ಕಡಿಬಾರೋ
ನನ್ನ ಮೈಯ.

ನೀನಿರಿವ ಅಟ್ಟಿ ನಾನಲ್ಲ, ನೀನು
ನನ್ನ ಮುಟ್ಟಿ;
ಇರಿದರೂ ಇರಿಯೆ, ಅರಿಯ ಇದು ಒಂದು
ಕಣ್ಣ ಕಟ್ಟು.

ಜೀವನವು ಅಮೃತ, ಬೇವಯ್ಯ ಹಿಂಸೆ;
ಇದಕೆ ಅದನು
ಎರೆಯುವುದು ಮರುಳು; ಅರಿತಿದರ ಹುರುಳು
ಬದುಕು ತಮ್ಮ.

ನಿನ್ನವರ ಕೊಲಿಸಿ ನನ್ನವರನುಳಿಸಿ
ಭೇಷಜದಲಿ
ಋಷಿಯಂತೆ ತೋರಿ ವಿಷ ರಸವ ಕಾರಿ
ಮೋಸಮಾಳ್ಪ,

ಚೆಲುವು

ಪಾಪಿ ನಾನೆಂದು ಕೋಪ ಮಾಡದಿರು;
ಜನತೆಯೆಲ್ಲ
ನನ್ನ ಜನ ನನಗೆ; ಭಿನ್ನವೆಂಬೆಣಿಕೆ
ಮನದೊಳಿಲ್ಲ.

ಯಾವೊಂದು ಜೀವ ನೋವಿನಲಿ ಸಿಲುಕೆ,
ಸಿಲುಕಿ ನಾನೂ
ನೋವಿನಲಿ ನೋವೆ, ಸಾವಿನಲಿ ಸಾವೆ,
ಅಳಲೆ ಅಳುವೆ.

ನಿಮ್ಮವರ ಕಯ್ಯ ಅನ್ನವನು ಕಿತ್ತು
ನನ್ನ ಜನಕೆ
ಕೊಟ್ಟೆನೆಂದೆಣಿಸಿ ಸಿಟ್ಟು ಮಾಡದಿರು
ಅಣ್ಣ, ಕೇಳು;

ಹಾಲಿಲ್ಲವೆಂದು ಗೋಳು ಮಾಡುವರು
ತಿರುಗಿ ನೋಡಿ;
ಅಂಬಲಿಯ ಬಯಸಿ ಹಂಬಲಲಿ ಮಡಿವ
ನರಕ್ರಿಮಿಗಳ.

## ಚೆಲುವು

ಆರ್ಯ ಋಷಿ ದೇಶ ಭಾರತದ ಭೂಮಿ
ಎಂತೊ ಎನಗೆ
ಅಂಗಲರ ನೆಲವು ಮಂಗಲ ಗ್ರಹವು
ಅಂತೆ ತಾರು.

ವಿಶ್ವವಿದು ಒಂದು ಅಶ್ವತ್ಥವೆಂದ
ಮಾತನರಿಯಾ?
ಆವೊಂದು ಮರದಿ ನಾವು ಎಲೆಯೆನಲು
ನೀತಿ, ರೀತಿ.

ನನ್ನಲಿಹ ತತ್ತ್ವ ನಿನ್ನಲಿಹ ತತ್ತ್ವ
ಎಲ್ಲ ಜಗದ
ಜೀವನದ ತತ್ತ್ವ ದೇವನೆಂದರಿಯೈ;
ಇಲ್ಲ ಬೇರೆ.

ಎನ್ನ ನೀನೆಂತು ಅನ್ಯನೆನಬಹುದು?
ಹೊಕ್ಕು ನೋಡು;
ಇಡಿಲೋಕನಂಟು; ಬಿಡಿಸಿದರು ಬಿಡದ
ಸಿಕ್ಕು, ಗಂಟು.

# ಚೆಲುವು

ನನ್ನ ಜನ ನಿಮ್ಮ ಬನ್ನಬಡಿಸಿದೊಡೆ,
ಆಗ ಇಂತೆ
ಮೊರೆದು ಹೇಳುವೆನು ಕರೆದು ಬೇಡುವೆನು,
ಕೂಗಿ, ಕರೆದು.

ನಿನ್ನಲ್ಲಿ ನಾನು, ನನ್ನಲ್ಲಿ ನೀನು,
ಗುರುವ ಕಂಡು
ನಡೆಯುವುದೆ ಚೆಂದ; ನಡೆಯದಿರೆ ಬಾಳು
ಬರಿದು, ಭಂಡು.

ಮಾನವನ ಬಾಳು ಕಾಣುವನ ಮನಕೆ
ತಾಳೆ ಹೂವು;
ಅರಿತು ಮುಡಿ ಗಂಧ, ಮರೆತು ಹಿಡಿ ಮುಳ್ಳು;
ಬಾಳು ಇಂತೆ.

ಕುತ್ತೆ ನೀನೆನ್ನ, ಸತ್ಯ ಸಾಯುವುದೆ?
ನಿನ್ನ ಕೃತಿಯು
ಗೊಬ್ಬರವನುಂಡು ಹಬ್ಬದೇ ಮುಂದೆ
ನನ್ನಿ ಬಳ್ಳಿ?

ಎನ್ನ ನುಡಿ ಕೇಳು, ಚೆನ್ನಹುದು ಬಾಳು,
ಮೋಡಿ ಬೇಡ;
ಏನೊ ಎನಬೇಡ, ಕಾಣುವುದು ನೋಡು;
ನೋಡು; ಕಾಣು.

ಯೋಧನು ಕಣ್ಣಿಂದ ನೀರನ್ನು ಕೊಡಹುವನು.

ನೀರೆ ಕಣ್ಣಿನಲಿ? ಆರಿತೇ ಕೋಪ?
ಛಲ ಹೋಯಿತೆ?
ಕರಗಿತೇ ಕರುಳು? ಮರೆಯಿತೇ ಮರುಳು?
ತಳ ಅರಿಯಿತೆ?

ಯೋಧನು ಆಯುಧವನ್ನು ದೂರ ಎಸೆಯುವನು.

ಬೇಡವೇ ಕತ್ತಿ? ನೋಡು ಈ ಹೊತ್ತು
ಮಲ್ಲ ನೀನು;
ಅರಿದಗಾತುಮವೇ ಸುರಗಿ; ಅದರೆಣೆಗೆ
ಇಲ್ಲ ಅಲಗು.

ಕರುಣ ಬಂದಣ್ಣ, ಒರಸಿಕೋ ಕಣ್ಣ;
ಅಪ್ಪು ನನ್ನ;
ಬಾರಣ್ಣ ಬಾರೋ ಕಾರುಣ್ಯಮೂರ್ತಿ
ಬೊಪ್ಪ ಬಾರೊ.

## ಚೆಲುವು

ಯೋಧನು ಬಂದು ಸಾತ್ವಿಕನ ಕಾಲನ್ನು ಹಿಡಿಯುವನು.
ಸಾತ್ವಿಕನು ತಡೆದು ಅವನನ್ನು ಎದೆಗೆ ಅಪ್ಪಿಕೊಳ್ಳುವನು.

ಅಪ್ಪಿ ಇರು ಇಂತೆ; ತಪ್ಪ ಬೇಡಿನ್ನು;
ಎಷ್ಟು ಜನ್ಮ
ಸುತ್ತಾಡಿ ತಿರುಗಿ ಹತ್ತಿರಕೆ ಬಂದೆ,
ಇಷ್ಟ, ಮಿತ್ರ.

ಯೋಧನು ಮೆಲ್ಲನೆ ಏನೋ ಹೇಳುವನು.

ಗುರುವೆ ನಾ ನಿನಗೆ? ಗುರು ನನಗೆ ನೀನು ;
ಒಳಗೆ ನಾನು
ಅರಿತಿರ್ದ ತತ್ತ್ವ ಸರಿಯೆಂದು ತೋರ್ದ
ಗೆಳೆಯ, ದೈವ.

## ಅಂಗಾಮಿ ಪ್ರೇಮ ಗೀತ

ಎಳೆಯ ದಿನ ಕಳೆದರೂ ಕೆಳೆ ಎಂದಿನಂತಿರಲಿ;
ನಿನಗಾಗಿ ದಾರಿಯಲಿ ಕಾಯ್ವೆ ನಾನು;
ಚೆಲುವ ಹೆಣ್ಣುಗಳೊಳಿಲ್ಲ ಗೆಳತಿ ನೀ ಚೆಲುವಾದೆ;
ಅನುಮಾನವಿಲ್ಲ ಇದಕಿಲ್ಲ ಇನಿಸೂ.
ಜಡೆ ನೀಳವಾಗಿ ಹಿಮ್ಮಡಿಯ ಮುಟ್ಟಿದ್ದರೂ,
ಹೆರಳು ಹಿರಿದೆಂದೆತ್ತಿ ಮುಡಿದಿದ್ದರೂ,
ಬಿಡಬೇಡ ಎನ್ನನೀ; ಒಡನೆ ತೋಟಕೆ ಬಾರ;
ಮರೆಯದಿರು ಎಳೆತನದ ಒಲುಮೆಗಳನು.
ಬೆಳಕು ಹರಿಯುತಲಿರಲು ಕಾಯುವೆನು ನಿನಗಾಗಿ;
ಉಳಿದ ಜನ ಸುಳಿವ ಹೊಲಮಾಳಗಳನು
ಕಳೆದು ನಿನ್ನನು ದೂರ ಒಯ್ಯುವೆನು; ಬರುವಂದು
ಅಳಲುತೊಬ್ಬನೆ ಸೊರೊಳ ದಾರಿ ಹಿಡಿವೆ.
ಬೇಸರುತ ನಾ ಬರುವೆ; ಏಕಾಕಿಯಾಗಿರುವೆ;
ನನ್ನ ಮನಸಿನ ನೋವ ನಿನಗೆ ಒರೆವೆ;
ನೇಸರಿಳಿದಿಹನಿತ್ತ, ಇತ್ತ ಏರಿದ ಚಂದ್ರ;
ಜೊನ್ನ ಮಳೆಕರೆಯುತಿದೆ ನನ್ನ ಮೇಲೆ;
ನೆಲದ ಮೇಲಿರುವಂದು ಜೊತೆಗಾಗಿ ನಡೆಯೆಬಹ
ಸೊಗದ ನಮ್ಮೂರ ನಡುದಾರಿಮೇಲೆ;
ಅಳಿದ ಮೇಲೆ ನಾವು ನಡೆಯಲಾಗದ ನಮ್ಮ
ಬಗೆಗೊಂಡ ಚೆಲುವಾದ ಬೀದಿಮೇಲೆ.

## ಚೆಲುವು

ಕೆಸ್ತೂರ ಕಲ್ಲ ಬಳಿ ಸೇರಿ ಹುಲ್ಲನು ಕೊಯ್ವ ;
    ಕೊಯ್ಯುತ್ತ ಅಂತೆ ಮುದ್ದಿಸುವ ನಲಿವ ;
ಶಿಸ್ತಾಗಿ ನಾ ನಿನ್ನ ಪಡೆಯುವೆನೆ ಆವೇಳೆ
    ಹೊಯ್ಪು ನಮ್ಮೊಲವ ಒಂದೇ ಪಾತ್ರಕೆ.
ಹೊಟ್ಟೆಯುರಿಯುವ ಮಂದಿ ಏನಹೇಳಿದರು ಸರಿ,
    ಮರೆಮಾಜದಿರುವ ನಮ್ಮೊಲವ ನಾವು;
ದಿಟ್ಟತನದಲಿ ನಮ್ಮ ದಾರಿ ನಡೆಯುವ ನಾವು ;
    ಮರಿಯಾದೆಗೆಂದು ನಾವಗಲಿದ್ದರೂ,
ದೂರ ದೂರದೊಳಿರುತ ನಡೆದರೂ, ಜನ ನಮ್ಮ
    ಹಂಗಿಪುದು ; ಇನ್ನು ಜೊತೆ ಬಿಡುವುದೇಕೆ?
ಧೀರರಾಗಿರುವ ಬಾ ಗೆಳತಿ ; ಸಾವಡಿಸಿದರು
    ಹಿಂಗದೊಲುಮೆಯನಿಲ್ಲಿ ನೋಡು ಮೆಚ್ಚು.

## ಕೆನ್ನೈದಿಲೆ

ಜೋಗವನು ನೋಳ್ಪುದಕೆ ಹೋಗುತಿರೆ ನಾನಂದು
    ಮಲೆಯ ನಡುವಣ ಕರಿಯ ನೀರಹರಹ
ದೂರದ ಉಪಾಂತದಿಂ ಸಾರಿ ನಿನ್ನಯ ಕಾಂತಿ
    ಹೊಳೆ ಹರಿದು ನನ್ನ ಕಣ್ಣನು ತುಂಬಿತು.
ನೀಲ ಜಲದಿಂದೆದ್ದು ನಭದೆದೆಯ ತಿವಿದು
ಅಲಗಂತೆ ನಿಂತೆ ನೈದಿಲೆ ಜಯವ ಸವಿದು.

ಎಂಥ ಕೆಂಪಿದು, ಎತ್ತ, ಇಂತುಂಟೆ ಲೋಕದಲಿ,
    ಎಂದು ಮೋಹಿಸಿ ಕಣ್ಣ ನಿಟ್ಟಿಸಿರಲು,
ಮಲೆಯಿಲ್ಲ, ಮರವಿಲ್ಲ, ಜಲವಿಲ್ಲ, ವನವಿಲ್ಲ,
    ನಾನಿಲ್ಲ; ಉಳಿದೆ ನೈದಿಲೆಯೊರ್ವ ನೀ.
ಎನ್ನಾತ್ಮವಾಕ್ಷಣದಿ ನಿನ್ನಲ್ಲಿ ಕೆತ್ತು
ತನ್ನ ಮರೆದುದು; ಶೂನ್ಯವಾಯಿತಾ ಸುತ್ತು.

ಇಲ್ಲ; ಶೂನ್ಯವಲ್ಲ; ಎಲ್ಲ ವನ ನನ್ನಂತೆ
    ತಾ ಬಗೆದ ಸೊಗಸು ರೂಪಾಂತುದೆಂದು
ನಿನ್ನ ನೋಡುವ ಭರದಿ ತನ್ನ ಮರೆದುದು ತಾನು
    ಕೆನ್ನ ದೀಧಿತಿಯ ಹೊಳೆಯಲ್ಲಿ ಮಿಂದು;
ಮನೆ ಮಾತ ಮರೆಯಿಸುವ ಸತಿಯ ನಗೆಯಂತೆ,
ಬಾನ ಮರೆಯಿಸುವ ರವಿಯಂತೆ ನೀನಿಂತೆ.

## ಚೆಲುವು

ನೋಡಿದೆನು ಮುಂದೆ ಮಲೆನಾಡ ನದಿಗಳ ದೇವಿ
ಗಂಭೀರ ಹಾಸದಲಿ ನಭವ ತೊರೆದು,
ನಡುಗೆ ಜಗ, ಪಾತಾಳದೆಡೆಗೆ ಹಾರುವ ಝಳವ;
ನೋಡಿ ಮರೆದೆನು ಮರಳಿ ನನ್ನ ನಾನು.
ನರಕುರಿಯು ಪದವಿ ಪದವಿಯೆ ಇದರ ಮುಂದೆ?
ಅಣು ತೃಣಕೆ ಜಲಕಣಕೆ ಕಡಿಮೆ ಅವನೆಂದೆ.

ನಿನ್ನ ಆಕೃತಿ ಎನಿತು ಚೆನ್ನವಾದರು ಕಿರಿದು;
ಭೀಮ ಸುಂದರ ಬೃಹದ್ರೂಪ ಪಾತ.
ಮೂರು ದಿನದಲಿ ನಿನ್ನ ತೌರ ಮರುಗಿಸಿ ಬಾಡಿ
ಕಾಡಿನಭಿಮನ್ಯು ನೀ ಮರೆವೆ ನೋಡೆ;
ಯುಗಯುಗದ ಹರಿವನರಿಯದೆ ತನ್ನ ಯೋಗ
ಕಲಕದಿರುವುದಲೇ ಶರಾವತಿಯ ಜೋಗ.

ಆದರಂದಿನ ಮೊದಲು ಸೋದರ್ಯದಲಿ ನೀವು
ಜೊತೆಯಲ್ಲಿ ಸುಳಿಯುವಿರಿ ನನ್ನ ಮನಕೆ;
ನೆನೆಯುವೆನೆ ಜಲಪಾತವನು ತರುವುದದು ನಿನ್ನ;
ನಿನ್ನ ನೆನೆವೆನೆ ಅದನು ತರುವೆ ನೀನು;
ನೀನದರೊಳದುನಿನ್ನೊಳೊಂದಾಗಿ ಬೆರೆದು
ಒಳಗಣ್ಣ ಮುಂದೆ ನಿಲುವಿರಿ ಭೇದ ತೊರೆದು.

ಶ್ರುತಿಯಾಗಿ ನೆರೆದೇಕ ಮತದಿಂದ ನುಡಿಯುವಿರಿ
"ಹಿರಿದು ಕಿರಿದಿಲ್ಲ ಫಲಿಸಿದ ಬಾಳಿಗೆ;
ಇಂದಿಲ್ಲ, ಅಂದಿಲ್ಲ, ಕುಂದಿಲ್ಲ, ಕೊರೆಯಿಲ್ಲ;
ವಿಶ್ವಮಾನಸನ ನಿಜ ನಿತ್ಯಸುತರ
ದಿನ ಯುಗದ ಹಿರಿ ಕಿರಿಯರೆಂಬ ನುಡಿ ಜಲ್ಪ;
ಫಲಿಸೆ ಕಣವೇ ವಿಶ್ವ, ಕ್ಷಣ ಬ್ರಹ್ಮಕಲ್ಪ."

# ಕರಿ

ಅಣ್ಣ ಮಾಂಬಿಯನ್ನು ಕುರಿತು
ಅಂದು ಕವಿತೆ ಬರೆದ ತೆರದೆ
ನನ್ನ ಕುರಿತು ಒಂದ ಬರಿ
ಎಂದು ಹೇಳುತಿಹೆಯ ಕರಿ?

ಭೊಳ್ಳು ಭೊಳೊಳ್ಳೆಂದು ಹಾಡಿ
ಹಾರಿ ಕುಣಿದು ನಲಿವೆ ಕೆಲೆವೆ;
ಕಳ್ಳ ನಾಯಿ, ಹೋಗು ಅತ್ತ,
ಬೇರೆ ಕೆಲಸ ಇಹುದು ನನಗೆ.

ಅಣ್ಣ ಮಾಂಬಿ ಏನು ಹೆಚ್ಚು,
ನಾನು ನಿನಗೆ ಕಡಿಮೆಯೇನು,
ನನ್ನ ಆಟ ಚೆನ್ನವಿಲ್ಲೆ?
ಮೌನವೇಕೆ? ಎಂಬೆಯಲ್ಲೆ?

ಆಳು ಲಕ್ಷ್ಮಿ ತಂದ ಹುಗ್ಗಿ
ಹಪ್ಪಳಗಳ ತಿಂದೆಯೆಂದು,
ಹೋಳಿಗೆ ಅಂಬೊಡೆಯ ಮೊರವ
ಕಪ್ಪವಾಗಿ ಕೊಂಡೆಯೆಂದು.

## ಚೆಲುವು

ಬೀದಿ ನಡೆವ ಜನರನೆಲ್ಲ
ಹೆದರಿಸಿ ಗೊರ್ರೆಂದು ಹೋಗಿ
ಹೃದ ಆಳಲು ಗೆಲವಿಗುಬ್ಬಿ,
ಎದುರು ಬೀಳಲೋಡಿಬಂದು,

ನಿಮ್ಮ ಕುಲದ ಎಳೆಯುರಾಟ
ಎಲ್ಲವನೂ ತೋರ್ದೆಯೆಂದು
ನಮ್ಮ ಮಕ್ಕಳಿಂದ ಕೇಳಿ
ಬಲ್ಲೆ ನಾನು; ಮೆಚ್ಚಿರುವೆನು.

ಆದರೂ ನಿನ್ನ ಚರಿತೆ
ಕವಿತೆಗರ್ಹವಲ್ಲ ಈಗ;
ಮೇದಿನಿಯುಲಿ ಮಾನವರಲಿ
ಸವನಿಸಿರುವುದೊಂದು ನೀತಿ.

ಸತ್ತ ಅಥವ ದೂರ ಇರುವ
ಕಿರಿಯ ಬಾಳ ಹೊಗಳಬಹುದು;
ಹತ್ತಿರಿಹುದು ಜೀವಿಸಿಹುದ
ಹಿರಿದು ಎನಲು ಸುಲಭವಲ್ಲ.

## ಚೆಲುವು

ಅಲ್ಲದೆ ಆ ಮೊದಲ ಕೃತಿಯು
ನೋಡಿ ಕೋಪದಿಂದ ಕೆಲರು,
ಬಲ್ಲ ಮಂದಿ, ಏತರದಿದು
ಕಾಡು ಕವಿತೆಯೆಂದರಹುದು.

ಇಷ್ಟು ಬೇಗ ಮರಳಿ ನಿನ್ನ
ಚರಿತೆಯೊರೆದು, ನಾಯಿಮರಿ,
ಶಿಷ್ಟರನ್ನು ನೋಯಿಸುವುದು
ತರವೆ ನಮಗೆ ಹೇಳು, ಕರಿ?

ಕೆಲವು ಕಾಲ ತಾಳು ಬಾಳು;
ಪಾರಿವಾಳ ಕೋಳಿ, ಬೇಡ,
ಅಳಿಲು ಒಂದ ಹಿಡಿದೊ ತಿಂದೊ,
ವೀರನೆಂದು ಹೆಸರಪಡೆ;

ವರುಷವೆರಡೊ ಮೂರೊ ಹರಿದು
ಹುಡುಗುತನ ಸ್ವಲ್ಪ ಬಿಡಲಿ;
ಕರುಮವಿನಿತು ಸವೆದು ನಿನ್ನ
ನಡೆಗೆ ಸ್ವಲ್ಪ ನೀತಿ ಬರಲಿ.

ಆಗ ನಿನ್ನ ಕತೆಯ ನುಡಿವ;
ಪದ್ಯ ಬರೆಯು ಕೂಡದೆನಲು
ಹೋಗಲೊಂದು ಗದ್ಯ ಬರೆವ;
ವಿದ್ಯೆಯುಳ್ಳ ಜನವ ಗೆಲುವ.

ಪದ್ಯಕೆಂದು ಮರುಗಬೇಡ;
ಬಣ್ಣವಾದ ಬಾಳಹೊಗಳೆ
ಗದ್ಯ ಕೂಡ ಹೃದ್ಯವಹುದು;
ಕುನ್ನಿ ಇದನು ನೆನೆದು ಬದುಕು.

## ನೀಲಗಾರ ಮಾದ

ಕಟ್ಟೀಮುಳಲವಾಡಿ ನೀಲಗಾರ ಮಾದಣ್ಣ
ಕತೆಯು ಹೇಳ್ತೀನಿ ಕೇಳ್ರಣ್ಣ ;
ಶಿಟ್ಟಾದ ಸುಲ್ತಾನ್ರು ಅವನ ನಡತೀ ನೋಡಿ
ಸುತರಾಮು ಮೆಚ್ಚಿಕೊಂಡದನ.

ಹೈದ್ರಾಲಿ ಸುಲ್ತಾನ್ರು ಕಟ್ಟೀಮುಳಲ್ವಾಡೀಗೆ
ಬಂದರಣ್ಣ ಒಂದು ಕಾಲ್ದಾಗ ;
ಆ ದಿನಕೆ ಬಂದೀತು ಬಾಬಯ್ಯಗಳ ಹಬ್ಬ
ಚಂದಾಗಿ ಚಂದು ಮೂಡ್ಲಾಗಿ.

ಯಲ್ಲಾರು ಬಂದಾರು ಯಾಸಗಳು ಹಾಕ್ಯಾರು
ಕಟ್ಟಾಳು ಮಾದ ಬರಸಿಲ್ಲ ;
ಮುಲ್ಲಾನ ಸಾಹೇಬ್ರು ಹೇಳಿಕಳಿಶಿದರವಗೆ ;
ನೆಟ್ಟನೇ ಬಂದ ಮಾದಣ್ಣ.

ಯಾತಕ್ಕೆ ನೀ ಯಾಸ ಹಾಕೋಲ್ಲ ಅಂದರೆ
ಮಾದ ಅಂದ, ನಾ ನೀಲಗಾರ,
ಜಾತೀಯು ಜನವೆಲ್ಲ ಬಂದೈತೆ, ಕಳಿಶಿವ್ನಿ,
ನಾ ದೇವರಿಗೆ ವಿಾಸಲಂದ.

## ಚೆಲುವು

ಏನೇನ ಹೇಳಿದರು ಮಾದಣ್ಣ ಒಪ್ಪನಿಲ್ಲ;
ಚಾಡಿ ಹೇಳಿದರು ಸುಲ್ತಾನಗೆ.
ಆ ನೀಲಗಾರನ್ನ ಕರಸಂತ ಅಪ್ಪಣೆ
ಮಾಡಿದನೊ ದೊಡ್ಡ ಸುಲ್ತಾನ.

ಏನು ನೀ ಹೇಳೋದು ಕಟ್ಟುಮುಸ್ತಾದಾಳು
ಯಾಸ ಹಾಕಿದರೆ ಚಂದನಲು,
ಮಾನ ಮರುವಾದಿ ಬಿಡದ್ಹಂಗೆ ಮಾದಣ ಅಂದ:
ಮಾಸೋಮಿ ನಾ ನೀಲಗಾರ;

ಬುದ್ಧಿ ನನ್ನನ ನಮ್ಮ ಅವ್ವ ಮಾರ್ಯಮ್ಮನಿಗೆ
ಮೀಸಲುಮಾಡಿ ಕೊಟ್ಟವಳೆ;
ಸಿದ್ಯೋರ ದೇವರಿಗೆ ನಾ ಯಾಸ ಹಾಕಿದ್ರೆ
ಗಾಶಿಮಾಡ್ಯಾಳು ಮಾರ್ಯಮ್ಮ;

ನೀಲಗಾರನ ನೇಮ ಬಹಳೈತೆ ಮಾಸೋಮಿ,
ಖಂಡಿತದ ಬದುಕು ನನ್ನೊಡೆಯ;
ಸೂಲಕ್ಕೆ ಯಿಕ್ಕಿದರು ಪೂಜೇಲಿ ಒಪ್ಪಿಸದ
ಹೆಂಡ ಕುಡಿಯೋಲ್ಲ ನೀಲಗಾರ;

ಚೆಲುವು

ಇನ್ನು ಬೇರೆ ಏನಾರ ಮಾಡನ್ರಿ ಮಾಡ್ತೀನಿ,
ಈ ಯಾಸ್ದ ಮಾತು ಮಾಫ್‌ಮಾಡಿ;
ನನ್ನವ್ವನಾಣೀಗೆ ತಲೆಕೊಟ್ಟು ಮಾಡ್ತೀನಿ,
ಸಾಯಬೇಕಂದ್ರೆ ಸಾಯ್ತೀನಿ.

ಹೈದರಲ್ಲಿ ನವಾಬ್ರು ಇದಕೇಳಿ ಹೇಳ್ತಾರೆ:
ಈ ಮಾತು ಎಲ್ಲಿ ಕೇಳಲಿಲ್ಲ;
ವಾದ ಯಾತರದು ಇದು? ನಮ್ಮ ದೇವರ ಮುಂದೆ
ಬ್ರಾಮಣರು ಕೂಡ ನಿಲುತಾರೆ.

ಮಾದಣ್ಣ ಇದಕಂದ: ಬುದ್ಧಿ ಬ್ರಾಮರ ಮಾತು
ನಮ್ಮಾತು ಒಂದು ಆದಾತ?
ಸಾದು ಬ್ರಾಮರ ದೇವ್ರು, ನಮ್ಮ ದೇವ್ರು ಮಾರ್ಯಮ
ಸುಮ್ಮನೆ ಬಿಡುವ ದೇವ್ರಲ್ಲ;

ಬ್ರಾಮರ ದೇವರು ಬರಿಬೋನ ಉಣತಾರೆ;
ಕೋಪಮಾಡಿದಾಗ ಏನೋರು
ಆ ಮಂತ್ರ ಈ ಮಂತ್ರ ಹೇಳಿ ತೆಂಕಾಯೊಡೆದು
ದೂಪ ಹಾಕಿದರೆ ಮರಿತಾರೆ;

## ಚೆಲುವು

ನಮ್ಮೋವ್ರು ಮಾರ್ಯಮ್ಮ ಕುರಿ ಕೋಣ ತಿಂಬೋಳು ;
ಬಾಬೈಗೆ ನಾನು ನಡಕೊಂಡ್ರೆ
ಒಂದೆ ಮಾತಂತಾಳೆ, ತಾ ನಿನ್ನ ತಲಕಾಯಿ
ತಾ ಬೋಳಿಮಗನೆ ಅಂತಾಳೆ.

ಹಂಗಾದ್ರೆ ನಿನ್ನ ದೇವ್ರು ಬ್ರಾವ್ರು ದೇವರಕಿಂತ
ದೊಡ್ಡ ದೇವ್ರೆ? ನಿನ್ನ ಮಾರ್ಯಮ್ಮ
ರಂಗಪ್ಪಗಿಂತ ದೊಡ್ಡೋಳೆ ಎಂದು ನವಾಬ್ರು
ಗಡ್ಡ ಸೀವ್ಕೊಳ್ತ ಕೇಳಿದರು.

ಸುಲ್ತಾನ್ರೆ ಕೇಳಿರಿ, ಪಟ್ಟಣದ ಅರಸರು
ನಿಮಕೆ ದೊಡ್ಡೋರು ಅಂತಾರೆ;
ಬಲ್ತು ಯಾರಾದರೂ ಮಾತಾಡಿದರೆ ನಗುತ
ಸುಮಕೆ ಇರುತಾರೆ ಅಂತಾರೆ.

ನಿಮ್ಮ ಹತ್ತರ ನಾನು ಬಲ್ತು ಮಾತಾಡಿದರೆ
ನನ್ನ ಬಿಟ್ಟೀರ ನನ್ನೊಡೆಯ?
ಬಿಮ್ಮಗೆ ಬಿಗಿಶೀರಿ, ಗಲ್ತಾಗ್ಳು ಕೊಡಿಶೀರಿ,
ಚೆನ್ನಾಗಿ ಬುದ್ಧಿ ಕಲಿಶೀರಿ.

## ಚೆಲುವು

ಅರಸರು ನಗಬಹುದು; ಅರಸಾಗಿ ಇರಬಹುದು;
ಸುತ್ತುಕಡೆ ನಿಂತ ಪರಿವಾರ
ಕುರಿ ಕೋಳಿ ತಿಂಬೋದು ಸುಮ್ಕಿದ್ದರಾದಾತೆ
ಕತ್ತಿ ಮುಟ್ಟಿದರೆ ನಡದಾತೆ?

ರಂಗಪ್ಪನ್ಹಂಗೆ ಮಾರ್ಯಮ್ಮ ನಗನಗತಿದ್ರೆ
ಜನ ಆವಳ ನೋಡಿ ನಕ್ಯಾತು;
ಹಂಗೀಶಿ ನುಡಿದಾತು, ಕೊಂಕ್ಕಲಿತ್ಕೊಂಡುಹೋಗಿ
ಮನೆ ಮುಂದೆ ಮೆಟ್ಲು ಮಾಡ್ಯಾತು.

ಮಾದ ಹೇಳಿದ ಮಾತು ಕೇಳಿದರು ಸುಲ್ತಾನ್ರು;
ಅರೆ ಅಲ್ಲ ಎಂತ ನಕ್ಕಾರು;
ಹೈದರಲ್ಲಿ ನವಾಬ್ರು ಗಡ್ಡಾವ ನೀವ್ಕೊಳ್ತ
ಸರಿ ನಿನ್ನ ಮಾತು ಅಂದಾರು.

ಭೇಷ್ ಮಾತು ಮಾದಣ್ಣ, ಭೇಷ್ ಭೇಷು ನೀಲ್ಗಾರ
ಸರಿಯಾದ ಮಾತು; ನೀ ಹೋಗು;
ಯಾಸಹಾಕೋದು ಬೇಡ ಎಂತ ಅಡಿಕೆಲೆ ಕೊಟ್ಟು
ಮರುವಾದಿ ಮಾಡಿ ಕಳಿಶಿದರು.

# ಚೆಲುವು

ಅವರವರ ದೇವರಿಗೆ ಅವರವರು ನಡೆಯೋದೆ
ಒಪ್ಪ; ಇದಬಿಟ್ಟು ನಡಕೊಂಡ್ರೆ
ಗವುಳಿಗರ ಹೆಣ್ಮಗಳು ಗಾಣಿಗರ ನೆರೆದಂತೆ,
ತುಪ್ಪದಲಿ ಎಣ್ಣೆ ಬೆರೆತಂತೆ.

ಕಟ್ಟೇಮುಳಲವಾಡಿ ಮಾದಣ್ಣ ಮಾತನ್ನ
ನಾ ನಿಮಗೆ ಈಗ ಹೇಳಿವ್ನಿ;
ಗಟ್ಯಾಗಿ ನೀವೆಲ್ಲ ನಿಮ್ಮ ದೇವ್ರ ನಂಬಿರ್ರ;
ನಾ ನಮ್ಮ ದೇವ್ರ ನಂಬತೀನಿ.

## ಚಿಕ್ಕ ಮಲ್ಲಮ್ಮ

ಅಣ್ಣಾ ಒಂದು ಕತೆ ಹೇಳುವೆ ಕೇಳು
ಕನ್ನಡ ನಾಡಿನ ಪೂರ್ವದ ಕತೆಯು ;
ಚಿನ್ನದ ನಾಡೀ ಕನ್ನಡ ನಾಡು,
ಮನ್ನಣೆಯೆಂಬರ ಮನೆ ನೆಲೆಬೀಡು ;
ಚಿನ್ನದೊಳಪರಂಜಿಯೊ ಮಿಡಿಗೇಶಿ
ನನ್ನವರೆಲ್ಲಾ ಬಾಳಿದ ದೇಶ ;
ವೆಂಕಟರಮಣ ಸಿರಿಮಲ್ಲೇಶ
ಅಂಕದಲಿಟ್ಟು ಸಲಹಿದ ಸೀಮೆ ;
ಇಲ್ಲಿ ಪೂರ್ವದಲಿ ಇದ್ದಳೊ ಅಣ್ಣಾ
ಮಲ್ಲಮ್ಮನೆಂಬ ಹೆಸರಿನ ಹೆಣ್ಣು ;
ಅಕ್ಕರೆಗಾಗಿ ಆವಳನು ಎಲ್ಲಾ
ಚಿಕ್ಕ ಮಲ್ಲಮ್ಮ ಎನ್ನುವರಯ್ಯಾ
ಮಲ್ಲಮ್ಮಾ ಮಲ್ಲಮ್ಮಾ
ಎಲ್ಲಿ ಹೋದೆಯೋ ಮಲ್ಲಮ್ಮಾ.

ಅಣ್ಣಾ ನಮ್ಮ ಮಲ್ಲಮ್ಮನ ಚೆಲುವ
ಬಣ್ಣಿಸಬಲ್ಲ ಮಾತುಗಳಿಲ್ಲ ;
ಚಿನ್ನದ ಪುತ್ಥಳಿ, ಗಂಧದ ಗೊಂಬೆ,
ರನ್ನದ ಕನ್ನಡಿ, ಇನ್ನೇನೆಂಬೆ?
ಚೆಲ್ಲಗಂಗಳು ಹುಲ್ಲೆಯ ನಡಿಗೆ
ಮಲ್ಲಿಗೆಯಂಥಾ ಸುದ್ಧದ ಮನಸು ;
ಮಾತನಾಡಿದಳೊ ಮುತ್ತಿನ ಮಳೆಯೊ

## ಚೆಲುವು

ಪ್ರೀತಿಸಿ ನಕ್ಕಳೊ ಬೆಳಕಿನ ಬೆಳೆಯೊ ;
ಸತ್ಯವಂತರೂ ಒಮ್ಮೆ ನೋಡಿದರೆ
ಮತ್ತೆ ನೋಡುವರೊ ದೇವಿಯೊ ಎಂದು ;
ಹೊಗಳಿನೆ ತಾಯೀ ಚೆಲುವನು, ನಿನ್ನ
ಹಗೆಯನು, ಇನ್ನು ಹೊಗಳಿನೆ ಅಮ್ಮಾ
　　ಮಲ್ಲಮ್ಮಾ ಮಲ್ಲಮ್ಮಾ
　　ಮೊಲ್ಲೆಯ ಹೂ ನೀ ಮಲ್ಲಮ್ಮಾ.

ಅಣ್ಣ ನಮ್ಮ ಮಲ್ಲಮ್ಮನ ಗುಣವ
ಇನ್ನು ಹೇಳುವೆನು ನಡತೆಯ ಚೆಲುವ ;
ತಂದೆ ತಾಯಿಗೆ ಬಂಧು ಬಳಗಕೆ
ಮಂದಿಗೆ ಎಲ್ಲಾ ಮೆಚ್ಚಾಗಿರುವಳು ;
ಕೈಹಿಡಿದಾತನ ಮನವನು ಒಲಿಸಿ
ಮೋಹದ ಮಂಗಳಮೂರುತಿ ಎನಿಸಿ
ಅಣ್ಣ ಗೆಳತಿಯರು ಎತ್ತಿ ಮುದ್ದಿಸಲು
ಚಿಣ್ಣನೊಬ್ಬನನು ಹಡೆದಿಹಳವಳು ;
ಒಳ್ಳೆಯ ಮಗಳು ಒಳ್ಳೆಯ ಗೆಳತಿ
ಒಳ್ಳೆಯ ಸೊಸೆ ಬಹು ಒಳ್ಳೆಯ ಹೆಂಡತಿ
ಚೆಲುವು ಹೆಚ್ಚೊ ಗುಣ ಹೆಚ್ಚೋ ಎಂಬುದು
ತಿಳಿಯದೊ ಅವಳನು ನೋಡಿದ ಜನಕೆ.
　　ಮಲ್ಲಮ್ಮಾ ಮಲ್ಲಮ್ಮಾ
　　ಇಲ್ಲವಾದೆಯಾ ಮಲ್ಲಮ್ಮಾ.

## ಚೆಲುವು

ಅಂಗಳದೊಳಗಣ ಮಲ್ಲಿಗೆಯಂತೆ
ಮಂಗಳವಾಗಿ ಬೆಳೆಯಲು ಬಾಳು,
ಮಲ್ಲಮ್ಮ ಇಂತು ಸುಖದೊಳಗಿರಲು
ಕ್ಷುಲ್ಲರು ಬದುಕನು ಕೆಡಿಸಿದರಣ್ಣ ;
ಗಿಳಿಯನು ಬೆಕ್ಕು ಕಳುವವೊಲವಳ
ಕಳವು ಮಾಡಿದರು ಘಾತಕ ಮಂದಿ;
ಪುಂಡರು ಬಹು ಪಾಷಂಡರು ಘಾತಕಿ
ಭಂಡರು ರತ್ನವ ಕೆಡಿಸಿದರಣ್ಣ ;
ಗಂಡ ತಂದೆ ಮಾವ ಮೈದುನ
ಅಂಡಲೆದೆಲ್ಲೆಡೆ ಹುಡುಕಿದರವಳ;
ಸಿಕ್ಕದಿರಲು ಎಲ್ಲಿಯು ಮಲ್ಲಮ್ಮ
ದುಕ್ಖದ ಮಡುವಿನೊಳಾಳಿದರಣ್ಣಾ.

ಮಲ್ಲಮ್ಮಾ ಮಲ್ಲಮ್ಮಾ
ಎಲ್ಲಿ ಹೋದೆಯೋ ಮಲ್ಲಮ್ಮಾ.

ಕೊನೆಯೊಳೊಂದು ದಿನ ಉದಯದ ವೇಳೆಗೆ
ಮನೆಯ ಮುಂದೆ ಬಿದ್ದಿರುವಳು ಅವಳು;
ಕಳೆಯಳಿದು ಕಂದಿ ಕುಂದಿದ ಮುಖವೊ;
ಬೆಳಕಳಿದು ಬೆಂದು ನೊಂದಿಹ ಕಣ್ಣು ;
ಬೇರು ಕಿತ್ತೊಗೆದ ಮಲ್ಲಿಗೆ ಬಳ್ಳಿ ;
ಕ್ರೂರ ರಾಕ್ಷಸನು ನುಂಗಿದ ಚಂದ್ರ ;
ಬಾಳು ಸಾಕು ಸಾಕೆನುತಿಹ ರೀತಿ ;

## ಚೆಲುವು

ಗೋಳೇ ಹೆಣ್ಣಾಯಿತೊ ಎನೆ ರೂಪು;
ಮುಂದಿ ಬಂದು ಇವಳನು ನೋಡಿದರು;
ಹಿಂದಕೆ ಬಂದಳು ಎಂದಾನಂದಿಸಿ
ಒಳಗೆ ಬಾರ ಎನೆ ಬಾರೆನು ಎಂದಳು,
ಹೊಲಸಾಗಿದೆ ನನ್ನೊಡಲಿದು ಎಂದಳು.
ಮುಲ್ಲಮ್ಮಾ ಮುಲ್ಲಮ್ಮಾ
ಹೊಲ್ಲೆಹವಾಯಿತೆ ಮುಲ್ಲಮ್ಮಾ.

ಮತ್ತೆ ಹೇಳಿದಳು ನಮ್ಮ ಮುಲ್ಲಮ್ಮ
ಸತ್ಯದ ಮಾತನು ಗಂಡಗೆ ಮುಂದಿಗೆ;
ಕೆಟ್ಟುಹೋದೆ ನಾ ಎನ್ನಾಸೆಯನು
ಬಿಟ್ಟುಬಿಡಿರಿ ನಾ ಬಾಳೆನು ಎಂದಳು;
ಕೊಂಡುಹೋದ ಪಾಷಂಡರ ಹೆಸರ
ಭಂಡ ಮುಕ್ಕಳ ಗುರುತನು ಹೇಳಿ
ಎಂಜಲಾದ ಈ ಮೈಯ್ಯನು ನಾನು
ಸಂಜೆಯು ಮೊದಲೇ ಸುಡಬೇಕೆಂದಳು;
ಕೆಡಕರ ಜಾತಿಯು ಕೇಳುವೆಯಣ್ಣಾ;
ಬಿಡು ಬಿಡು ಕೆಡಕಿಗೆ ಜಾತಿಯೆ ಮತವೆ?
ಹುಟ್ಟಿದ ಜಾತಿ ಮತಗಳ ಹೆಸರು
ಕೆಟ್ಟ ಚೇತನಕೆ ಸಲ್ಲವು ಅಣ್ಣಾ.
ಮುಲ್ಲಮ್ಮಾ ಮುಲ್ಲಮ್ಮಾ
ಇಲ್ಲವಾದೆಯಾ ಮುಲ್ಲಮ್ಮಾ.

ಎಂಜಲಾದ ಈ ಮೆಯ್ಯನು ನಾನು
ಸಂಜೆಯು ಮೊದಲೇ ಸುಡಬೇಕೆಂದು
ಚಿಕ್ಕ ಮಲ್ಲಮ್ಮ ಹೇಳಿದ ಮಾತ
ಮುಕ್ಕದ ಮಾತೆಂದೆಣಿಸಿತು ಮಂದಿ;
ಒಂದು ಗಳಿಗೆ ಬಿಟ್ಟವಳು ದೇಗುಲದ
ಮುಂದೆ ಹೊಂಡವನು ಮಾಡಿರಿ ಎಂದು
ತಮ್ಮ ಮೈದುನರ ಕರೆದು ಹೇಳಿದೊಡೆ
ಬಿಮ್ಮನೆ ಭಯದಲಿ ಬೀಗಿತು ಮಂದಿ;
ಅಯ್ಯೊ ಅಯ್ಯೊ ಇಂತಹ ಮಾತುಂಟೆ
ಮೆಯ್ಯ ಸುಡುವುದೆಂದೊಡೆ ಏನೆಂದು
ಎಲ್ಲ ಬಂದು ದಮ್ಮಯ್ಯ ಎಂದು
ಮಲ್ಲಮ್ಮನ ಬೇಡಿದರೊ ಅಣ್ಣಾ.
ಮಲ್ಲಮ್ಮಾ ಮಲ್ಲಮ್ಮಾ
ಕಲ್ಲಾಯಿತೆ ಮನ ಮಲ್ಲಮ್ಮಾ.

ಹಡೆದ ತಾಯಿ ಬಂದವಳಿಗೆ, ಅಮ್ಮಾ
ಮಡಿವ ತಪ್ಪ ನೀನೇನನು ಮಾಡಿದೆ?
ಭಂಡ ಬಾಳ ನೀ ಬಾಳಿದುದೇನು?
ಪುಂಡರು ಕದ್ದೊಡೆ ಮಾಡುವುದೇನು?
ಎಂದು ಕೈಗಳನು ಹಿಡಿದು ಬೇಡಿದಳು;
ತಂದೆ ಬಂದು ಬಿಡು ಈ ಹಠಯೆಂದನು;
ಅತ್ತೆ ಮಾವನು ಮೈದುನ ಭಾವ

## ಚೆಲುವು

ಮತ್ತೆಲ್ಲ ಬಳಗ ಬಂದಿತು ಬೇಡಿತು ;
ಗಂಡ ಬಂದು ಬಳಿಯಲಿ ಕುಳ್ಳಿರುತ
ಭಂಡರ ಕೊಲುವೆನು ಸುಮ್ಮನಿರೆಂದನು ;
ಕೆಳದಿಯೊಬ್ಬಳು ಒಳಗಡೆ ಹೋಗಿ
ಎಳೆಯನ ತಂದು ಎದುರಲಿ ಬಿಟ್ಟಳು.
ಮಲ್ಲಮ್ಮಾ ಮಲ್ಲಮ್ಮಾ
ಕಲ್ಲಿನ ಜೀವ ಮಲ್ಲಮ್ಮಾ.

ಬೇಡಾ ಬೇಡಾ ಬೇಡಾ ಎಂಬ
ಹಾಡಿನ ಪಲ್ಲವಿ ಎಲ್ಲವ ಕೇಳಿ
ಮಲ್ಲಮ್ಮ ಒಂದು ಮಾತನು ಅಂದಳು :
ಬಲ್ಲ ನಿಮಗೆ ನಾ ಹೇಳುವಳಲ್ಲ ;
ಭಂಡರೆಂಜಲಿನ ಒಡಲನು ನನ್ನ
ಗಂಡಗೆ ಬಡಿಸಲು ಒಲ್ಲದು ನನಗೆ ;
ಹೆಂಡ ಸೋಕಿದ ಭಾಂಡದಿ ದೇವರು
ದಿಂಡರ ಹಾಲನು ಇರಿಸೆನು ನಾನು ;
ಅಂಬಲಿ ಉಂಡು ಎಸೆದ ಹಾಳೆಯಲಿ
ತಂಬಿಟ್ಟಿಡುವೆನೆ ದೇವರ ಮುಂದೆ ;
ಭಂಡ ಬಾಳ ಬಾಳೆನು, ಈ ಒಡಲನು
ಕೊಂಡದಿ ಬೆಂಕಿಗೆ ಕೊಡುವೆನು ಎಂದಳು.
ಮಲ್ಲಮ್ಮಾ ಮಲ್ಲಮ್ಮಾ
ಬಲ್ಲ ಹೆಣ್ಣು ನೀ ಮಲ್ಲಮ್ಮಾ.

## ಚೆಲುವು

ಯಾರು ಹೇಳಿದರು ಏನು ಹೇಳಿದರು
ಘೋರ ಪಂಥವನು ಬಿಡದಿರೆ ಧೀರೆ
ಹೆದರಿತು ಅದುರಿತು ಮೆಚ್ಚಿತು ಮಂದಿ;
ಬದುಕನು ಬಲ್ಲವಳಹ ಮಲ್ಲಮ್ಮ,
ಎಂಥ ಸತ್ಯವಿದು ಎಂಥಾ ಮಹಿಮೆ,
ಇಂಥವರುಂಟೆ ಲೋಕದಲಿನ್ನು,
ಚೆಂದ ಬಾಳಿದಳು ಚೆಂದದೆ ಸಾವಳು,
ಎಂದು ಎಲ್ಲರೂ ಹೊಗಳಿದರವಳ;
ತಮ್ಮ ಮೈದುನರು ಎಲ್ಲವ ನೋಡಿ
ಸುಮ್ಮನೆ ಹೋಗಿ ಗುಡಿಗಳ ಮುಂದೆ
ಕೊಂಡವ ಮಾಡಿ ಝಗಿ ಝಗಿ ಹೊಳೆಯುವ
ಕೆಂಡದ ಹೊಂಡವ ಮಾಡಿದರಣ್ಣ.
ಮಲ್ಲಮ್ಮಾ ಮಲ್ಲಮ್ಮಾ
ಇಲ್ಲವಾದೆಯೇ ಮಲ್ಲಮ್ಮಾ.

ದಾರಿ ತೋರದೆ ಎಲ್ಲರು ತನ್ನ
ಕ್ರೂರ ಪಂಥಕೆ ಒಪ್ಪಿರಲಾಗಿ
ಮಲ್ಲಮ್ಮ ಎಲ್ಲ ಹಿರಿಯರ ಮುಂದೆ
ಮೆಲ್ಲನೆ ಮಾತನು ಬಿನ್ನಯಿಸಿದಳು.
ಹೇಸಿಕೆಯಾಗಿಹ ಮೆಯ್ಯನು ಬಿಟ್ಟು
ಮಾಸದ ಹೊಸದೊಂದೊಡಲನು ತೊಟ್ಟು
ಮರಳಿ ನಾ ಬರುವೆ ಅಪ್ಪಾ ಅಮ್ಮಾ,

## ಚೆಲುವು

ತಿರುಗಿ ಬದುಕುವೆನು ಅತ್ತೆ ಮಾವ,
ನೂರು ಜನ್ಮಕೂ ಈ ಗಂಡನನೇ
ಸೇರಿ ಸಿಂಗರದಿ ಬಾಳುವೆನೆಂದಳು;
ಮದುವೆಗೆ ಹೋಗುವ ಹುಡುಗಿಯ ತೆರದೆ
ಹದುಳವ ನುಡಿದಳು ಸಂತಯಿಸಿದಳು.
ಮಲ್ಲಮ್ಮಾ ಮಲ್ಲಮ್ಮಾ
ಬಲ್ಲವಳಹುದೇ ಮಲ್ಲಮ್ಮಾ.

ಅಲ್ಲಿ ಕೊಂಡ ಸಜ್ಜಾಗುವ ಹೊತ್ತಿಗೆ
ಮಲ್ಲಮ್ಮ ಇಲ್ಲಿ ಜಳಕವ ಮಾಡಿ
ಒಪ್ಪುವದೊಂದು ಸೇಲೆಯನುಟ್ಟು
ಕುಪ್ಪಸ ಒಂದನು ಚೆಂದದಿ ತೊಟ್ಟು
ಕುಂಕುಮ ಬಟ್ಟನು ಹಣೆಯೊಳಗಿಟ್ಟು
ವಂಕಿ ಜಿಮುಕಿ ನಾಗರ ಜಡೆಬಿಲ್ಲೆ
ಕಂಕಣ ಪಿಲ್ಲಿ ಉಂಗುರವಿಟ್ಟು
ಶಂಕೆಯನುಳಿದು ತಂದೆ ತಾಯಿ
ಅತ್ತೆಮಾವ ಮೊದಲಾದ ಹಿರಿಯರ
ಹತ್ತಿರ ಬಂದು ಕಾಲಿಗೆ ಎರಗಿ
ಮುಂದಿನ ಜನ್ಮ ಚೆನ್ನಪ್ಪಂತೆ
ಚಂದದಿ ಹರಸಿ ಎಂದು ಬೇಡಿದಳು.
ಮಲ್ಲಮ್ಮಾ ಮಲ್ಲಮ್ಮಾ
ಇಲ್ಲವಾದೆಯೋ ಮಲ್ಲಮ್ಮ.

ಬಳಿಕ ಗಂಡ ತಲೆ ಬಗ್ಗಿಸಿ ಕುಳಿತ
ಸ್ಥಳಕೆ ಬಂದು ಅವನಡಿಗಳಿಗೆರಗಿ
ನಾನು ಕೇಳಿಬಂದಷ್ಟು ದಿವಸ
ಮಾನದಿಂದ ಬಾಳಿಸಿದಿರಿ ನನ್ನ;
ನನ್ನ ಪುಣ್ಯ ಇಲ್ಲಿಗೆ ಕೊನೆಯಾಯ್ತು
ಅನ್ನೆಯವಾಯಿತು ನನ್ನದು ಬಾಳು;
ಒಬ್ಬರನುಳಿದು ಹೋಗಲು ನನಗೆ
ನಿಬ್ಬರವಾಗಿದೆ ಮನದಲಿ ದುಃಖ;
ಒಂಟಿಯಾಗಿ ಇರಬೇಡಿರಿ ಹರೆಯದಿ,
ನಂಟರಲ್ಲಿ ತಕ್ಕವಳನು ತಂದು
ಬಾಳಿರಿ; ಅಳಬೇಡಿರಿ; ನನ್ನಾಣೆ;
ಕೇಳಿರಿ ಮಾತನು, ಹೋಗುವೆನೆಂದಳು.

ಮಲ್ಲಮ್ಮಾ ಮಲ್ಲಮ್ಮಾ
ಕಲ್ಲೋ ಹೂವೋ ಮಲ್ಲಮ್ಮಾ.

ಕೇಳು ಅಣ್ಣಾ, ಮಧ್ಯಾಹ್ನದ ವೇಳೆಗೆ
ಮೇಲೆ ಸೂರ್ಯದೇವನು ಸುಡುತಿರಲು,
ದೇಶವೆಲ್ಲ ಮಿಡಿಗೇಶಿಗೈದಿತೆನೆ
ಸಾಸಿರ ಸಾಸಿರ ಜನ ನೆರೆದಿರಲು,
ದೇಗುಲದೆದುರಲಿ ಮಾಡಿದ ಕೊಂಡದ
ಬೇಗೆಗೆ ಜನ ಸರಿಯುತಲಿರೆ ದೂರ,
ಕೊಂಡದ ಕಾವಿನ ಝಳದಲಿ ಅಡಿಯ

## ಚೆಲುವು

ಬಂಡೆ ಚಿಟ ಚಿಟನೆ ಸಿಡಿದಿರೆ ಒಮ್ಮೆ,
ಮಲ್ಲಮ್ಮ ಹೊರಟು ಗುಡಿಗಳ ಹೊಕ್ಕು
ಬಲ್ಲ ರೀತಿಯಲಿ ದೇವರ ಪೂಜಿಸಿ
ಶಂಕೆಯೆಂಬುದೇ ಇಲ್ಲದೆ ಬಂದು
ಬೆಂಕಿಯ ಬಾವಿಯ ಬದಿಯಲಿ ನಿಂದಳು.
　　ಮಲ್ಲಮ್ಮಾ ಮಲ್ಲಮ್ಮಾ
　　ಇಲ್ಲವಾದೆಯೇ ಮಲ್ಲಮ್ಮಾ.

ಸೊಂಕಿಗೆ ಹೇಸುವ ದೈವಭಕ್ತರ
ಕಿಂಕರ ನಾನು ಎನುತಿಹನಗ್ನಿ ;
ಬೆಂಕಿ ನಾನೆ ನಿಮ್ಮೆಲ್ಲರೊಳಿಹೆನು
ಬಂಕೆಯ ಮಣ್ಣಿನ ಗೂಡಲಿ ಮರೆದು ;
ಕೆಂಡ ಬಂದು ಕೆಂಡದಲಿ ಸೇರುವಳು
ಕಂಡ ಮಾತು ಇದು ಅಂಜಿಕೆ ಬೇಡ ;
ಸಂಕಟಪಡಿಸೆನು ಮಲ್ಲಮ್ಮನನು
ಶಂಕೆಯ ಬಿಡಿರಿ ಎನುತಿಹ ರೀತಿ
ಝಗಿ ಝಗಿ ಹೊಳೆವಾಳದ ತನ್ನೆದೆಯ
ಬಗೆದು ತೋರಿದನು ಬೆಂಕಿಯ ದೈವ ;
ತಳಮಳ ಹೊಳೆಯುತ ಮಲಮಲ ಮೊರೆಯುತ
ಬೆಳಕಿನ ಹೂವಿನ ಮಾಲೆಯ ತೋರುತ.
　　ಮಲ್ಲಮ್ಮಾ ಮಲ್ಲಮ್ಮಾ
　　ಮಲ್ಲಿಗೆ ಮೊಲ್ಲೆ ಮಲ್ಲಮ್ಮಾ.

ಆಗ ಮಲ್ಲಮ್ಮ ಹಿರಿಯರೆಲ್ಲರಿಗು
ಕೈಗಳ ಮುಗಿದು ಅಪ್ಪಣೆ ಕೇಳಿ,
ಬರುವೆನೆಂದು ಗೆಳತಿಯರಿಗೆ ಹೇಳಿ
ಮರುಗಬಾರದೆಂದೆಲ್ಲರ ಬೇಡಿ,
ಗಂಡ ಬಳಿಯೊಳಿರೆ ಅವನ ಕಾಲಿಗೆ
ಮಂಡೆಯನಿಟ್ಟು ಮುತ್ತನು ಕೊಟ್ಟು,
ಅಳುತಿಹ ಕಂದನ ಸನಿಯಕೆ ಹೋಗಿ
ಒಲವಿನಿಂದವನ ಮುದ್ದಿಸಿ ಬಂದು
ವೆಂಕಟರಮಣಾ ಸಿರಿಮಲ್ಲೇಶಾ
ಬಿಂಕದ ದೇವರೆ ಸಲಹಿರಿ ಎಂದು,
ಕೊಕ್ಕರೆ ನೀರನು ಹೊಗುವಂದದಲಿ
ಹೊಕ್ಕಳು ಬೆಂಕಿಯು ಹೊಕ್ತರಣೆಯನು.
ಮಲ್ಲಮ್ಮಾ ಮಲ್ಲಮ್ಮಾ
ಮಲ್ಲಿಗೆ ಬೆಂದೆಯ ಮಲ್ಲಮ್ಮಾ.

ಅಣ್ಣ ಇನ್ನು ನಾನೇನ ಹೇಳಲಿ
ಅನ್ನೆಯವಾಯಿತು ಎನಿಸುವುದೊಮ್ಮೆ;
ಅಂಕೆಯ ಬಾಳನು ನೆನೆವೆನೆ ಮರಳಿ
ಬೆಂಕಿ ಬೆಂಕಿಯನು ಸೇರಿತು ಎಂಬೆನು ;
ಹೇಳುತ ನಾನು ನಡುಗುವೆನಿಂದು ;
ಕೇಳಣ್ಣ ಅವಳು ನಡುಗಳು ಅಂದು ;
ನೊಂದು ಹೋಯಿತು ನಂಟು ಎಲ್ಲವೂ

## ಚೆಲುವು

ಮಂದಿ ಎಲ್ಲವೂ ಮಮ್ಮಲ ಮರುಗಿತು ;
ಬೆಂದು ಹೋಯ್ತವಳ ಹೇಸಿದ ಮೆಯ್ಯಿ
ನಿಂದುದೆಂದಿಗೂ ಮಾಸದ ಕೀರ್ತಿ;
ಹೆಸರ ನಿಲ್ಲಿಸಲು ಪ್ರತಿಮೆ ಕೆತ್ತಿದರು.
ಉಸುರುವೆನೀಗಳು ಕತೆಯನು ನಾನು.
ಮಲ್ಲಮ್ಮಾ ಮಲ್ಲಮ್ಮಾ
ಇಲ್ಲೇ ಇರುವೆಯ ಮಲ್ಲಮ್ಮಾ.

ಕನ್ನಡ ನಾಡಿನ ಹಿರಿಮೆಯ ಕತೆಯ
ಅಣ್ಣ ಇಂದು ನಾ ಹೇಳಿದೆ ನಿನಗೆ;
ಇನ್ನು ಮೇಲೆ ಬಹ ಎಳೆಯರಿಗಿದನು
ನಿನ್ನ ಮಾತಿನಲಿ ಹೇಳೈ ನೀನು ;
ಕನ್ನಡ ನಾಡಿನ ಮಕ್ಕಳು ಎಂದಿಗು
ಮನ್ನಣೆ ಎಂದರೆ ಇಂತೇ ನಡೆಯಲಿ;
ಚಿನ್ನದ ನಾಡಿದು ಲೋಕಕೆ ನಡತೆಯ
ಕನ್ನಡಿಯಾಗಲಿ, ಉನ್ನತಿ ಪಡೆಯಲಿ;
ಸತ್ಯವುಳ್ಳವರು ಬನ್ನಕೆ ಸಿಲುಕದೆ
ಎತ್ತ ಎತ್ತಲೂ ಸುಖದಲಿ ಬೆಳೆಯಲಿ;
ವೆಂಕಟರಮಣನು ಸಿರಿಮಲ್ಲೇಶನು
ಶಂಕೆಯ ಹರಿಸಿ ಸಲಹಲಿ ಜಗವ;
ಮಲ್ಲಮ್ಮಾ ಮಲ್ಲಮ್ಮಾ
ಇಲ್ಲೇ ನಿಂದಿರು ಮಲ್ಲಮ್ಮಾ.

ಕೊಂಬು

ಅರಳುಮಲ್ಲಿಗೆ, ಮಲ್ಲಿಗೆವಾಳು,
ಮಲ್ಲಿಗೇನಹಳ್ಳಿ ;
ಸಿರಸಿ, ಸಂಪಿಗೆ, ಕೂಡುಮಲ್ಲಿಗೆ,
ಹುಲ್ಲೆಹಳ್ಳಿ, ಹರವು.

ಮೇಲು ಹುಲುವತಿ, ಕೀಳು ಹುಲುವತಿ,
ಮಾದಲ, ಮುತ್ತೋಣಿ ;
ತಾಳಕುಂಟೆ, ತಾವರೆಕೆರೆ, ಹಿಪ್ಪಲ,
ಕೂದವಳ್ಳಿ, ಕೊಪ್ಪ.

ಸಿರಿಯೂರು, ಸಿರಿಯಂಗಳ, ಬೆಳವಲ,
ಸೊಗದವಾಣಿ, ತೆರವಿ ;
ಮರಳವಾಡಿ, ಮಧುಗಿರಿ, ಬನವಾಸಿ,
ಅಗಳಿ, ಅಮೃತೂರು ;

ಬೆಳಧರ, ಬೆಳ್ಳಿಯುಬಟ್ಟಲು, ಬೆಳವಿ,
ನೆಲಮಾವು, ಹಗರಿ ;
ತಳಕು, ಬೆಳುಗೊಳ, ಕಿರಿಜಾಜಿಯೂರು,
ಬಿಳಿಗೆರೆ, ಹೆಬ್ಬಾಳೆ ;

## ಚೆಲುವು

ಪೂನಾಡು, ಸಿರಿವಾಸಿ, ಸಕ್ಕರೆ,
ನಿಶನ, ತಿಂಗಳೂರು ;
ಮಾಣಿಕಧರ, ಮಂಜೇಶ್ವರ, ಕೋಗಿಲೆ,
ಎಸಳೂರು, ಕಳಸ.

ಏನು ಹೆಸರು ಇವು, ನಮ್ಮ ತಾತದಿರು
ನಾಡೊಳಿಟ್ಟ ಹೆಸರು ;
ಜೇನಸರಿಯುವೊಲು ಇನಿದು, ಬಲ್ಲವರ
ಹಾಡಿನವೊಲು ಮೆಲಿತು.

ಕೇಳುವ ಕಿವಿ ನಲಿಯುತಲಿದೆ, ನುಡಿಯುವ
ನಾಲಗೆ ನಲಿಯುತಿದೆ ;
ಬಾಳೆಂತಿರೆ ಹೆಸರಿಂತಾಯ್ತೆಂಬೆನೆ
ಸೋಲುತಲಿದೆ ನೆನಸು.

ನಾಡೊಳಂದೊಗೆದ ಸೊಗದರವಿಂದದ
ಮಾಧುರ ಮಕರಂದ
ಕೋಡಿಯಿಂದುದುರಿ ಹನಿ ಹರಳಾಯಿತು
ಮೋದವೀಯಲಿಂದು.

## ಚೆಲುವು

ಅಣ್ಣತಮ್ಮದಿರೆ, ಅಕ್ಕತಂಗಿಯರೆ,
ಹೇಳುವಿರೀ ಹೆಸರ;
ಚೆನ್ನವಾಗಿಹುದು ಈಗಳು ಹೆಸರು;
ಬಾಳು ಅಂತೆ ಇಹುದೇ?

ಚೆಲುವ ಹೆಸರುಗಳ ನುಡಿವ ನಾಲಗೆಯ
ಬಾಳುವೆ ಬರಿದಾಯ್ತೇ.
ಕಳೆದುಕೊಂಡೆವೇ ಹಿರಿಮೆಯ ಚಂದ್ರನ,
ಮೂಳವಾಯ್ತು ಬದುಕು.

ಬನ್ನಿ ಅಣ್ಣದಿರೆ ಬನ್ನಿ ತಮ್ಮದಿರೆ
ಬನ್ನಿ ಸೋದರಿಯರೆ;
ಬನ್ನಿರಿ ಎಲ್ಲರು ಆಣೆ ಇಟ್ಟುಕೊಳಿ
ಚೆನ್ನಮಾಡಿ ಬಾಳ.

ಹೆಸರಿನ ಚೆಲುವನು ನಾಡಿನ ಬದುಕಲಿ
ಮರಳಿ ಮೊಳೆಯಿಸಿರಿ;
ಒಸಗೆಯ ತನ್ನಿರಿ ತಾಯ್ನಾಡಿರವಿಗೆ,
ತರಿಸಿ ನಗೆಯ ಮೊಗಕೆ.

## ಚೆಲುವು

ದುಡಿಯುವೆವೆನ್ನಿರಿ ದುಡಿಯಿರಿ ಬನ್ನಿರಿ
ನಾಡಿಗೆ ನಾಡಿಗಾಗಿ;
ತೊಡಿರಿ ಹಟವನು ಕೊಡಿ ಕೈಯಾಣೆಯ;
ಆಡುವ ನುಡಿ ನಡೆಸಿ.

ಕತ್ತಲು ಮುಚ್ಚಿಹ ಬಾಳಿರುಳಾಳಕೆ
ಆಸೆಯ ಚಂದ್ರನನು
ಮತ್ತೆ ತನ್ನಿರಿ, ಬೆಳಕಲಿ ನಡೆಯಿರಿ;
ಹೇಸಿ ಸೋಂಬತನವ.

ಮುತ್ತು ಮಾಣಿಕವ ಜೋಳದ ತೆರದಲಿ
ಹರಿಯಿಸಿ ನಾಡಿನಲಿ;
ಉತ್ತಮ ಚರಿತೆಯ ಚಿತ್ರಪತಾಕೆಯ
ಮೆರೆಯಿಸಿ ಬಾನಿನಲಿ.

## ಒಂದು ಸಂಜೆ

ಸಂಜೆಯಾಗಸದಾಳವನು ಚೆಲ್ವ ಲೇಪದೊಲು
ತಿಳಿಯ ನೀಲದ ವರ್ಣ ಸವರಿರುವುದು ;
ರಂಜಿಸುತಲಿಹುದು ನೀಲದ ಪಟದಿ ಚಿತ್ರವೆನೆ
ಎಲೆಯುಲುಗದೊಲು ನಿಂತ ಮರದ ಸಾಲು.

ಜೇಯೆಂದು ಚಿಟ್ಟೆ ಬೇಲಿಯಲಿ ಮೊರೆಯುತಲಿಹುದು ;
ಮಳೆರಾಯ ಬಾ ಎಂಬ ಊರ ಕೂಗು
ಗಾಯನದಿ ಕಳವಳವ ಮರೆಸಿ ಕೇಳುತಲಿಹುದು ;
ಇಳಿಯುತಿಹುದಿಳೆಗೆ ಹುಣ್ಣಿಮೆಯ ಇರುಳು.

ದೇವಾಲಯದ ಓಲಗದ ಮಂಜುಳಾರಾವ
ತೇಲುತಿಹುದೆಲರಿನಲಿ ; ನಭವ ನೀಲ,
ಆವೇಶ ಕವಿಯ ಗೆಲುವಂತೆ ಗೆಲುತಿರೆ, ಇನಿಸು
ನೀಲಿಮೆಯನಾಂತುದು ಶರಚ್ಚಂದ್ರಿಕೆ.

## ಉದ್ಯಾನದಲ್ಲಿ

ಏನು ಚೆಲುವಿದು ಏನು ಸೊಗಸಿದು
ಈವುದಯುದಣಿಯುರವಿದು ?
ನ್ಯೂನತೆಯ ಧಿಕ್ಕರಿಸಿ ತೊಳಗುವ
ದೇವಲೋಕದ ಬೆಳಕಿದು ?
ದೇವನಂದನವೆಂದು ಮನುಜನು
ಕನಸೊಳೆಣಿಸಿದ ವನದಲಿ
ಹೂವ ಮೋಹರವಿನಿತು ನೆರೆಯುದು
ಇನಿತು ಬಣ್ಣದಿ ಮೆರೆಯುದು.
ಏನು ಚೆಲುವಿದು ಜಗದಲಿ !
ಹಾಸವೆನಿತೀ ಮೊಗದಲಿ !

ಮೊಗದೆ ನಗೆಯಿರೆ ಅರಿವೆ ಮರೆಯಲಿ
ನಲಿದ ಬಗೆಯಿದೆ ಎಂಬುದ ;
ಜಗದೆ ಹೂವಿಂತರಳೆ ಸೃಷ್ಟಿಯು
ಒಳಗು ನಲಿದುದು ಕಾಂಬುದು.
ಯಾವುದೋ ಬಗೆ ಯಾವುದೋ ಸೊಗ
ಅಲ್ಲಿ ಇರುವುದರಿಂದಲೇ
ಹೂವೆನಗೆ ಸೊಗಯಿಸುವ ನಗೆಯನು
ಇಲ್ಲಿ ಚೆಲ್ಲುತ ನಿಂದಿದೆ ;
ಬಗೆಯ ತಣಿಸುವುದೆಲ್ಲವೂ
ಬಗೆಯೊಳೊಗೆವುದು ಬಲ್ಲೆವು.

## ಚೆಲುವು

ಎನ್ನ ಬಗೆಯೊಳಗಿರುವ ಸೊಗವೇ
　　ಕಾಣುವುದು ಹೊರಗೆಂಬೆನೆ,
ಕಣ್ಣಹಿಂದಣ ನೋಳ್ಪ ಪೀಠವ
　　ನಾನುಳಿಯೆ ಚೆಲುವಳಿವುದೆ ?
ನಾನು ನನ್ನದು ಎಂಬ ಬದುಕನು
　　ಮೀರಿದಾವುದೊ ಬದುಕಿದೆ ;
ಮಾನವನ ಕುಲವಳಿಯುಲಳಿಯದ
　　ಬೇರೆ ಯಾವುದೊ ಉಳಿವಿದೆ.
ನನ್ನ ಸೋಲಲಿ ಸೋಲದೆ
ಮುನ್ನ ಹರಿಯುವ ಬಾಳಿದೆ.

ಜಗದ ಮೊದಲಲಿ ಒಂದು ಬಗೆಯಿದೆ ;
　　ಮನ್ನೆಯಾತುಮವೊಂದಿದೆ ;
ಒಗೆದು ಅದರಿಂದೆನ್ನುಸಿರು ಬಗೆ
　　ಎನ್ನ ಆತುಮ ಬಂದಿದೆ ;
ಶರಧಿ ಗಾಳಿಯು ತೀವಿ ಘನಿಸುತ
　　ಹಿಮಕಣದ ಗಣವಹವೊಲು
ಪರದ ಆತುಮ ತೀವಿ ಸೃಷ್ಟಿಯು
　　ನಮಗೆ ಜೀವವನಿತ್ತಿದೆ.
ಅಲ್ಲಿ ಇರುವುದು ಇಲ್ಲಿದೆ ;
ಇಲ್ಲದುದು ಬರಬಲ್ಲುದೆ ?

## ಚೆಲುವು

ಮನುಜನಿಗೆ ಮನುಜತೆಯ ತೋರುತ,
ಮಾನವನ ಮನ ಕಾಣದ
ಎನಿತು ಗುಣವನೊ ಇನ್ನು ಬೇರೆಯ
ಏನಏನನೊ ಕೊಳ್ಳುತ,
ಇಲ್ಲಿ ಹೂವಿನ ಇಲ್ಲಿ ಜೀವನ
ರೂಪನಾನುತ ನಲಿಯುತ
ಬಲ್ಲತನ ಬೆಕ್ಕಸದಿ ಭಾಪುರೆ
ಭಾಪು ಎಂಬವೊಲಾಡುತ
ಹಬ್ಬಮಾಡುತ ಎತ್ತಲು
ಒಬ್ಬನಿರುವನು ನಿತ್ಯನು.

## ಅರಿಕೆ

ಏನ ನೋಡಿದೆನೊ ನೋಡಲಿಲ್ಲವೋ,
ಏನ ಕಂಡೆನೋ ಕಾಣಲಿಲ್ಲವೋ,
ಏನ ಕಂಡು ಇನ್ನೇನಗೆತ್ತೆನೋ,
ಕಾಣದಾವುದನು ಕಂಡೆನೆಂಬೆನೋ,

ನಾನು ಅರಿಯೆನಿದ, ನೋಡಬಂದವನು;
ನೀನೆ ಬಲ್ಲೆಯ್ಯ, ತೋರತಂದವನು,
ಕಾಣಲೆಂದು ಕಣ್ಮನವ ಕೊಟ್ಟವನು,
ಜ್ಞಾನ ಸಾಧನವನೆನ್ನೊಳಿಟ್ಟವನು.

ಹೈದನೊಬ್ಬನನು ಕರೆದು ಕೈಯಲಿ
ಕೈದನಿಟ್ಟು ಗೆಲುಹೋಗು ಎಂದೊಡೆ
ಕಾದಿ ಶತ್ರುವನು ಕೊಂದು ಬರ್ಪನೋ?
ಕೊಯ್ದುಕೊಂಬನೋ ತಾನೆ ತನ್ನನು?

ಕೊಟ್ಟ ಓಜನಿದ ನೋಡಿಕೊಳ್ಳದಿರೆ
ಕೆಟ್ಟದಾಗದಿರಬಹುದೆ ಬಾಲಕಗೆ?
ನೆಟ್ಟನೊಳ್ಳಿದಕೆ ನಡೆವೆನೆಂತುಟು?
ಹುಟ್ಟುಬಣ್ಣವೇ ಸತ್ಯ ಮನುಜಗೆ?

## ಚೆಲುವು

ಹಗಲು ಇರುಳಲಿ ಗಳಿಗೆ ಚಣದಲಿ
ಜಗವು ಸಂತತ ಚಲಿಸುತಿರ್ಪುದು ;
ಬಗೆಯೊಳೆನ್ನಲಿ ಅಂತೆ ಸಂತತ
ಒಗೆಯುತಿರ್ಪುದು ದೃಷ್ಟಿಭೇದವು.

ಓಡುತಿರ್ಪ ತೇರಿಂದ ನೋಡುತ
ಓಡುತಿರ್ಪ ಮುಗಿಲೊಡ್ಡ ನಭವನು
ನೋಡಿದಾವುದನು ನಿಚ್ಚವೆಂಬೆನು ?
ನೋಡದಾವುದನು ಇಲ್ಲವೆಂಬೆನು ?

ಬಾಲ ನಿದ್ರಿಸುತಲಿರಲು ತಾಯ್ ಅವನ
ಕೇಳಿಕೆಯನು ನೋಡೆಂದು ತಂದಳು ;
ಎದ್ದು ನೋಡುತಿಹನಿನಿತ ಮಧ್ಯದಲಿ ;
ನಿದ್ದೆಯಾಳದಲಿ ಮರಳಿ ಇಳಿವನು.

ಆಟ ಎಂತು ಮೊದಲಾಯಿತೆಂಬುದನು,
ನೋಟ ಎಂತು ಕೊನೆಯಪ್ಪುದೆಂಬುದನು,
ಎಳೆಯನರಿವನೇ ತಾನೆ ಊಹಿಸಿ ?
ತಿಳಿವೆನೆಂತು ನಾ ನಿನ್ನ ಲೀಲೆಯ ?

## ಚೆಲುವು

ನನ್ನ ತಂದು ಈ ಜಗದೊಳಿಟ್ಟವನೆ,
ನನ್ನಿ ಯಾವುದೆಂಬುದನು ತೋರಿಸು ;
ನಿನ್ನ ದಾರಿಯಲಿ ಬಾಳ ನಿಲ್ಲಿಸು ;
ಚೆನ್ನವಪ್ಪವೊಲು ಅದನು ಬೆಳೆಯಿಸು

3-47.—ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು

# ಮುನ್ನುಡಿ

ಈ ಗ್ರಂಥವು ಸಣ್ಣ ಕವಿತೆಗಳ ಒಂದು ಸಂಗ್ರಹ. ಇವು ಒಂದೊಂದೂ ಹದಿನಾಲ್ಕು ಪಾದಗಳ ಬೇರೆ ಬೇರೆ ಪದ್ಯ. ಇವುಗಳನ್ನು ಆಂಗ್ಲ ಸಾಹಿತ್ಯದ ಸೋನ್ನೆಟ್ ಎಂಬ ಪದ್ಯಗಳ ರೀತಿಯಲ್ಲಿ ಬರೆದಿದೆ. ಆಂಗ್ಲೇಯರ ಹೆಸರುಗಳನ್ನು ನಮ್ಮಲ್ಲಿಗೆ ತೆಗೆದುಕೊಳ್ಳುವಾಗ್ಯೆ ಸ್ವಲ್ಪ ಹೆಚ್ಚು ಕಡಿಮೆ ಆ ಹೆಸರುಗಳ ಅಕ್ಷರಗಳನ್ನೇ ಇಟ್ಟುಕೊಂಡು ನಮ್ಮಲ್ಲಿ ನಾಮಕರಣ ಮಾಡುವವರು ಉಂಟು. ಇವರ ಕೈಯಲ್ಲಿ ಬಾಸ್ಕರ್ ವಿಲ್ಸ್ ಎನ್ನುವುದು ಭಾಸ್ಕರವಿಲಾಸ ಎಂದೂ, ಆ್ಯನೀಬೆಸೆಂಟ್ ಎನ್ನುವುದು ಅನ್ನವಸಂತಿ ಎಂದೂ ಆಗುತ್ತವೆ. ಇಂಥವರು ಸೋನ್ನೆಟ್ ಎನ್ನುವುದನ್ನು ಸುನೀತ ಎಂದು ಕರೆಯುವರು. ಒಂದು ಚಮತ್ಕಾರ ರೀತಿಯಿಂದ ಇಂಥ ಹೆಸರೂ ಚೆನ್ನಾಗಿಯೇ ಇರುತ್ತದೆ. ನಾನು ಈ ಪದ್ಯಗಳಿಗೆ ಅಷ್ಟಷಟ್ಪದಿ ಎಂದು ಹೆಸರನ್ನಿಟ್ಟಿದೇನೆ.

ಅಷ್ಟಷಟ್ಪದಿ ಎಂಬ ಈ ಹೆಸರು ಹದಿನಾಲ್ಕು ಸಾಲಿನ ಪದ್ಯ ಎನ್ನುವುದಲ್ಲದೆ ಪದ್ಯದ ಇನ್ನೊಂದು ಮುಖ್ಯಲಕ್ಷಣವನ್ನೂ ಸೂಚಿಸುತ್ತದೆ. ಈ ಪದ್ಯಗಳಲ್ಲೆಲ್ಲಾ ಸಾಮಾನ್ಯವಾಗಿ ಮೊದಲ ಎಂಟು ಪಾದಗಳು ಒಂದು ಗುಂಪಾಗಿಯೂ ಕಡೆಯ ಆರು ಪಾದಗಳು ಒಂದು ಗುಂಪಾಗಿಯೂ ಕಾಣುತ್ತವೆ. ಆ ಎಂಟರಲ್ಲಿ ಒಂದು ವಿಷಯವು ವಿವರವಾಗುತ್ತದೆ; ಆ ಆರರಲ್ಲಿ ಆ ವಿಷಯದಿಂದ ಉದಿಸುವ ಭಾವ ಒಡೆದು ಕಾಣುತ್ತದೆ. ಮೊದಲ ಎಂಟರಲ್ಲಿ ಪ್ರಾಸದ ಕಟ್ಟು ಒಂದು ತೆರ; ಆಮೇಲಣ ಆರರ ಪ್ರಾಸದ ಕಟ್ಟು ಒಂದು ತೆರ. ಇದರ ವಿವರವನ್ನೆಲ್ಲಾ ಇಲ್ಲಿ ಹೇಳುವುದು ಅನವಶ್ಯಕ. ಒಂದು ಸಮಯದ ಒಂದೇ ಒಂದು ಭಾವವು ಅದಕ್ಕೆ ಕಾರಣವಾದ ಸಂದರ್ಭದೊಂದಿಗೆ ಇಂಥ ಪದ್ಯದಲ್ಲಿ ಬಹು ಚೆನ್ನಾಗಿ ರೂಪುಗೊಳ್ಳುತ್ತದೆ. ನನಗೆ ಹಲವು ಸಂದರ್ಭಗಳಲ್ಲಿ ತೋರಿದ ಇಂಥ ಭಾವಗಳನ್ನು ವ್ಯಕ್ತಪಡಿಸು

ವುದಕ್ಕೆ ನಾನು ಈ ಪದ್ಯಗಳನ್ನು ಬರೆದಿದ್ದೇನೆ. ಈ ರೀತಿಯ ಕೆಲವು ಪದ್ಯಗಳನ್ನು ಈ ಮೊದಲು ನಮ್ಮ ಮಿತ್ರರಾದ ಕುಪ್ಪಳ್ಳಿ ಪುಟ್ಟಪ್ಪನವರೂ ಪುರೋಹಿತ ನರಸಿಂಹಾಚಾರ್ಯರೂ ಬರೆದಿದ್ದಾರೆ. ಇವುಗಳನ್ನು ನೋಡುವವರಿಗೆ ಈ ಜಾತಿಯ ಪದ್ಯ ಮಾಡುವ ಕೆಲಸ ಎಂಥದೆಂದು ಸ್ಪಷ್ಟವಾಗುವುದು.

ಆಂಗ್ಲ ಸಾಹಿತ್ಯದ ಒಂದು ಜಾತಿಯ ಪದ್ಯದ ಬಂಧವನ್ನು ಅನುಸರಿಸಿದೆ ಎಂದ ಮಾತ್ರಕ್ಕೆ ಈ ಕವಿತೆ ನಮಗೆ ಬೇಡವೆಂದು ನಮ್ಮ ಜನ ಹೇಳಲಾರರೆಂದು ನನ್ನ ನಂಬಿಕೆ. ಹೀಗೆ ಹೇಳುವಂತೆ ತೋರುವ ಒಂದೆರಡು ಮಾತನ್ನು ಕೆಲವರು ಆಡುವುದನ್ನು ನಾನು ಬಲ್ಲೆನು. ಆದರೆ ಅವರು ಹೇಳುವುದು ನಿಜವಾಗಿ ಇದಲ್ಲವೆಂದು ನನಗೆ ಕಂಡಿದೆ. ಇನ್ನೊಬ್ಬರ ಹಂಗಿಲ್ಲದ ಕಾವ್ಯ ಬೇಕು, ನಮ್ಮ ಜೀವನವನ್ನು ಚಿತ್ರಿಸುವ ಕಾವ್ಯ ಬೇಕು, ಎಂಬುದೇ ಇಂಥವರ ಆಸೆ. ಎಲ್ಲ ವಿಧದಲ್ಲಿಯೂ ಸ್ವತಂತ್ರವಾದ ಜೀವನವನ್ನಪೇಕ್ಷಿಸುವ ಈ ಕಾಲದಲ್ಲಿ ಕಾವ್ಯವನ್ನು ಕುರಿತು ಇಂಥ ಆಸೆ ಇರುವುದು ಸಹಜ. ಇದು ಒಬ್ಬರಿಬ್ಬರ ಆಸೆಯಲ್ಲ; ಎಲ್ಲರ ಆಸೆ. ಇಂಥವರಿಗಾದರೂ ನಾನು ಈ ಧೈರ್ಯದ ಮಾತನ್ನು ಹೇಳುತ್ತೇನೆ. ಈ ಕಾವ್ಯದಲ್ಲಿ ಬಂದಿರುವ ಭಾವವೆಲ್ಲ ನಮ್ಮ ಬಾಳಿನಿಂದ ಬಂದಿರುವುವು, ನನ್ನ ಬಾಳಿನಲ್ಲಿ ಬೆಳೆದಿರುವುವು. ಇವು ನಮ್ಮ ನಾಡಿನವಲ್ಲದಿರಲು ಕಾರಣವೇ ಇಲ್ಲ. ಹೊಸದಾಗಿದೆ ಎಂಬ ಈ ಕವಿತೆಗಳ ಬಂಧವೂ ಕೂಡ ನಮ್ಮ ಭಾಷೆಯಲ್ಲಿ ತಾನಾಗಿ ಬರಬಹುದಾದ ಬಂಧ. ನಮ್ಮಲ್ಲಿ ವಾಡಿಕೆಯಿಲ್ಲದ್ದೆಂಬ ಭಾವನೆಯನ್ನು ಬಿಟ್ಟು, ಯಾವ ಕವಿತೆಯನ್ನು ಓದುವುದಕ್ಕಾದರೂ ಆವಶ್ಯಕವಾದ ತಾಳ್ಮೆಯಿಂದ ಈ ಪದ್ಯಗಳನ್ನು ಓದಿದರೆ ಇವು ನಮ್ಮ ಭಾಷೆಯಲ್ಲಿ ಸಹಜವಾಗಿವೆಯೆನ್ನುವುದು ವ್ಯಕ್ತವಾಗುವುದು.

ಇಂಥ ಸಂದರ್ಭಗಳಲ್ಲಿ ಕೆಲವರು ಮಾಡುವ ಟೀಕೆಗಳನ್ನೂ ಇವಕ್ಕೆ ನಾನು ಹೇಳುವ ಸಮಾಧಾನಗಳನ್ನೂ ಕುರಿತ ಹಲವು ಪದ್ಯಗಳು ಈ ಸಂಗ್ರಹದಲ್ಲಿ ಸೇರಿವೆ. ಈ ಪದ್ಯಗಳನ್ನು ಬರೆಯುವು

ದಕ್ಕೂ ಪ್ರಕಟಿಸುವುದಕ್ಕೂ ಹಿಂತೆಗೆದಿಲ್ಲವಾದರೂ ಅವುಗಳನ್ನು ಬರೆಯಬೇಕಾದ ಸಂದರ್ಭಗಳಲ್ಲಿ ನಾನು ಅಷ್ಟೇನೂ ಸುಖಪಡಲಿಲ್ಲ. ಇನ್ನು ಒಂದೊಂದು ವೇಳೆ, ಗುಪ್ತವಾದ ಹೆಸರುಗಳಿಂದ ಕೆಲವರು ಸೋದರರೂ, ಹಿರಿಯತನದ ರಕ್ಷೆಯಲ್ಲಿ ನಿಂತು ಎದುರಲ್ಲಿಯೋ ಕೆಲವರು ಹಿರಿಯರೂ, ಮಾಡುವ ಟೀಕೆ ವ್ಯಕ್ತಿಪರವಾಗುತ್ತದೆ, ಕಟುವಾಗುತ್ತದೆ. ಆಗ ಅವಕ್ಕೆ ಉತ್ತರ ಹೇಳುವುದು ಸಾಧ್ಯವೂ ಅಲ್ಲ ಚೆನ್ನವೂ ಅಲ್ಲ. ಇದು ಸರಸ್ವತೀಪುರದ ಊರಬಾಗಿಲ ಅಸೂಯಾದೇವಿಗೆ ನಡೆಯಬೇಕಾದ ಆರಾಧನೆ. ನಮ್ಮ ಈಗಣ ಸ್ಥಿತಿಯಲ್ಲಿ ಇದೆಲ್ಲ ತಪ್ಪಿದ್ದಲ್ಲವೆಂದು ನಾನು ಮನಸ್ಸಿಗೆ ಸಮಾಧಾನವನ್ನು ತಂದುಕೊಂಡಿದೇನೆ. ಸಾಹಿತ್ಯದ ಏಳಿಗೆಯನ್ನು ಅಪೇಕ್ಷಿಸುವವರು ಇಂಥ ಟೀಕೆಗೆ ನಮ್ಮಲ್ಲಿ ಸ್ಥಳವಿಲ್ಲವೆಂದು ಸಾಧ್ಯವಾದಲ್ಲೆಲ್ಲ ವ್ಯಕ್ತಪಡಿಸಬೇಕು. ಸಾಹಿತ್ಯ ಸರಿಯಾಗಿ ಬೆಳೆಯಬೇಕಾದರೆ ವಿಮರ್ಶೆ ಅವಶ್ಯಕ. ಆದರೆ ವಿಮರ್ಶೆ, ಹೆಸರಿಗೆ ವಿಮರ್ಶೆಯಾಗಿ, ನಿಜದಲ್ಲಿ ಅವಹೇಳನವೂ ಮರೆಯ ಅಥವಾ ಎದುರಿನ ಇರಿತವೂ ಆಗಬಾರದು.

ಈ ಗ್ರಂಥದ ಪದ್ಯಗಳನ್ನು ಓದುವಾಗ್ಗೆ ಆಯಾ ಸಂದರ್ಭಗಳನ್ನು ಅಲ್ಲಿಯ ಮಾತುಗಳಿಂದ ಊಹಿಸಿಕೊಳ್ಳಬೇಕು. ತಿರುಪತಿಯ ಬೆಟ್ಟದ ಮೇಲೆ ಆಕಾಶಗಂಗೆಯಲ್ಲಿ ಮಾರ್ವಾಡಿಯೊಬ್ಬನು ತನ್ನ ಹೆಂಡತಿಯನ್ನು ಹೊಡೆದನು; ಎಲ್ಲಿಯೋ ಒಂದು ಹರಿಕಥೆ ನಡೆಯಿತು; ಒಂದೂರಿನಲ್ಲಿ ದೇವಾಲಯದ ಮೇಲೆ ಮೇಕೆ ಮಲಗಿತ್ತು; ನಾನು ಒಂದು ಸಂಜೆ ಅನಂತಪುರದ ಕೆರೆಯ ಕಟ್ಟೆಯ ಮೇಲೆ ನಿಂತಿದ್ದೆನು; ಇನ್ನೊಂದು ಸಂಜೆ ಆ ಊರ ಬಯಲಲ್ಲಿ ನಿಂತಿದ್ದೆನು; ಇನ್ನೊಂದು ಸಂದರ್ಭದಲ್ಲಿ ದಕ್ಷಿಣೇಶ್ವರದ ದೇವಾಲಯದಲ್ಲಿದ್ದೆನು; ಮತ್ತೊಂದರಲ್ಲಿ ಶ್ರೀ ವಿವೇಕಾನಂದರ ಕೋಣೆಯನ್ನು ನೋಡಿದೆನು. ಹೀಗೆ ಒಂದೊಂದು ಪದ್ಯ ಒಂದೊಂದು ಸಂದರ್ಭದಿಂದ ಬಂದದ್ದು. ಆಯಾ ಸಂದರ್ಭದ ಒಂದೆರಡು ಹೆಸರೂ ಅಲ್ಲಲ್ಲಿ ಬಂದಿವೆ. ಲಕ್ಕಸಂದ್ರದ ದಾರಿ ಬೆಂಗಳೂರಿನ ರಾಜೋಪವನದ ಪೂರ್ವಕ್ಕೆ ಇದೆ. ಅನಂತಪುರದ

ಕೆರೆಯನ್ನು ಕಟ್ಟಿಸಿದವನು ಬುಕ್ಕರಾಯ. ಮುಸಿಲಮ್ಮನೆನ್ನುವಾಕೆ ಆ ಕೆರೆ ಒಂದು ಸಲ ಒಡೆಯುವ ಹಾಗಿದ್ದ ಸಮಯದಲ್ಲಿ ತಾನು ಬಲಿಯಾಗಿ ಕೆರೆಯನ್ನು ಉಳಿಸಿದಳಂತೆ. ಪದ್ಯವನ್ನು ಓದುವಲ್ಲಿ ಇಂಥ ವಿವರ ತಿಳಿದಿದ್ದರೆ ಒಳ್ಳೆಯದೇ ; ತಿಳಿಯದೆ ಇದ್ದರೂ ಪದ್ಯದ ಅರ್ಥವಾಗುವುದಕ್ಕೆ ತೊಡಕಿಲ್ಲವೆಂದು ನಂಬಿದ್ದೇನೆ.

ಚಿತ್ರಗುಪ್ತ ಮುಂತಾದವರ ಮಾತೆತ್ತಿದ ಮಾತ್ರಕ್ಕೆ ನಮ್ಮ ಜನ ಇದುವರೆಗೆ ನನಗೆ ತೋರಿರುವ ಆದರವನ್ನು ನಾನು ಮರೆತಿದೇನೆ ಎಂದು ಯಾರೂ ಎಣಿಸಲಾಗದು. ಕೆಟ್ಟ ಮಾತನ್ನು ಹೇಳುವವರು ಕೆಲವರಿದ್ದರೆ ಒಳ್ಳೆಯದನ್ನು ಹೇಳುವವರೂ ಕೆಲವರು ಇದ್ದಾರೆ. ಒಳ್ಳೆಯ ಮಾತನ್ನಾಡುವವರೆಲ್ಲ ಗ್ರಂಥಕರ್ತನಿಗೆ ಬೇಕಾದವರಾದ್ದರಿಂದ ಅವನ ಕೃತಿಗಳನ್ನು ಮೆಚ್ಚುವವರಲ್ಲ. ಅವರಲ್ಲನೇಕರು ಅವನ ಕೃತಿಗಳನ್ನು ಒಪ್ಪಿ ಅವನನ್ನು ತಮಗೆ ಬೇಕಾದವನೆಂದರು. ಈ ಮಾತು ನಮ್ಮ ಹೊಸ ಸಾಹಿತ್ಯಕ್ಕೆಲ್ಲ ಅನ್ವಯಿಸುತ್ತದೆ. ಕವಿಯ ಸ್ಥಿತಿ ಹಿಂದೆಯೂ ಹೀಗೆಯೇ ಇತ್ತೆಂದು ತೋರುತ್ತದೆ. ಅವಹೇಳನಕಾರರು ಇಲ್ಲದಿದ್ದರೆ ಕುಕವಿನಿಂದೆ ಹಿಂದೆ ನಮ್ಮ ಸಾಹಿತ್ಯದಲ್ಲಿ ಒಂದು ಪದ್ಧತಿಯಾಗಬೇಕಾಗಿರಲಿಲ್ಲ. ಕಾವ್ಯ ಬೇಕೆನ್ನುವವರಿಲ್ಲದಿದ್ದರೆ ಯಾರೂ ಕವಿತೆಯನ್ನು ಬರೆಯುತ್ತಿರಲಿಲ್ಲ.

ಬೆಂಗಳೂರು, ಶ್ರೀಮುಖ ಸಂ॥<br>ಫಾಲ್ಗುಣ ಶುದ್ಧ ಪಂಚಮಿ

**ಶ್ರೀನಿವಾಸ**

# ಮಲಾರ



## ಸಮರ್ಪಣ

ಅಷ್ಟ ಷಟ್ಪದಿಗಳ ಮಲಾರವೊಂದನು ತಂದು
ಇಂದು ನಿನಗರ್ಪಿಸಿರುವೆನು ನನ್ನ ತಾಯ್ನುಡಿಯೆ.
ಗುಣದಿಂದ ಬೆಲೆಯಿಂದ ಈ ಕೃತಿಗೆ ನೂರ್ಮಡಿಯು
ಹಿರಿಮೆ ಕಾಣುವ ಕೃತಿಯು ರಚಿಸಿ ಹಾಡುತ ಬಂದು
ನಿನ್ನ ಮಕ್ಕಳು ನಿನ್ನ ನಲಿಸಿ ನಲಿದರು ಅಂದು,
ಇಂದು ನಲಿಸುತ ನಲಿಯುತಿಹರು, ಬಹಕಾಲದಲಿ
ಭಾವ ಊಹೆಗಳ ರಸ ರಾಗಗಳ ಮೇಳದಲಿ
ರಚಿಸಿ ತರುವರು ಮತ್ತೆ ನಿನ್ನ ಸೇವಿಸಲೆಂದು.
ನಿನ್ನ ದೇಗುಲದ ನಿತ್ಯೋತ್ಸವದ ಮಧ್ಯದಲಿ
ಉಳಿದವರು ತಹ ಬೆಲೆಯ ತೊಡವುಗಳ ಜೊತೆಗಾನು
ಮಂಗಲದ್ರವ್ಯವೊಂದಿದ ತಂದು ನಿಂದಿಹೆನು ;
ಬೆಲೆ ಕಡಿಮೆಯೆಂದೆಂಬ ಕುಂದಿದಕೆ ಹೊದ್ದದಲೆ ;
ಬಳಿಯೆಂಬುದಿರಬೇಕು, ಭಕ್ತಿಯಲಿ ತಂದಿಹನು,
ಎಂದು ಕರುಣೆಯ ತೋರಿ ಇದನು ಒಪ್ಪುವೆ ನೀನು.

## ಹೊಸದೆಂಬ ಮಾತಿಗೆ

ಹದಿನಾಲ್ಕು ಸಾಲಿನಲಿ ಬರೆದ ಪದ್ಯವ ನೋಡಿ
ಇದು ಕನ್ನಡದ ಕವಿತೆಯಲ್ಲೆಂಬರಿರಬಹುದು.
ಆದೊಡೀದಿನ ನಾನು ನಿನ್ನಡಿಗೆ ತರುತಿಹುದು
ಸಾಲುಗಳ ಕಟ್ಟುಗಳನಲ್ಲ. ಕವನದ ಜಾಡು
ಸಾಲ ಸಂಖ್ಯೆಯೊಳಿಹುದೆ? ಈ ಜನತೆ ಈ ನಾಡು
ನನ್ನೆದೆಯೊಳಿಟ್ಟು ಬೆಳೆಸಿದ ಹಲವು ಭಾವವನು
ಚಿತ್ರಿಸುತ, ನನ್ನುಸಿರಿನಾಂತರ್ಯ ಜೀವವನು
ಬಸಿಯುತಿದೆ ನುಡಿಗಳಲಿ, ನಾನು ಹಾಡುವ ಹಾಡು.
ನೀ ಬಲ್ಲೆಯೌ ನನ್ನ ಬಾಳ್ವೆ ನಿನ್ನದು ಎಂದು.
ಕನಸು ಎಚ್ಚರಗಳಲಿ ಎನ್ನ ಮನದಲಿ ನಿನ್ನ
ಸಾನ್ನಿಧ್ಯವನು ಕೊಟ್ಟು ಇದ ನುಡಿವ ಕಾರ್ಯಕೆ
ನೀನೆ ದೂಡಿದೆ ಎನ್ನ. ಆಕಾರ ತೋರಿಕೆ
ಹೊಸತಾದೊಡೇನು? ಇದರಲಿ ಯಾವುದಿದೆ ಚಂದ
ಅದು ನೀನು ಎನ್ನೊಳೂದಿದ ಉಸಿರ ಬಾವನ್ನ.

## ತಾಯಿ ಮಕ್ಕಳು

ಆಂಗ್ಲ ಭಾಷೆಯು ಕಲಿತು ಕನ್ನಡದಿ ಕೃತಿಗೈವ
ಸಾಹಸಿಯು ನೋಡೆಂದು ನಕ್ಕರೆನ್ನನು ಹಲರು.
ಅವರ ಮಾತೇನು ತಾಯಿ, ಕನ್ನಡದ ದೇವಿ,
ನಾನೆ ಅರಿಯದೆ ಹೋದೆನೆನ್ನಂಥ ನಿರ್ಬಲರು
ನಿನ್ನಡಿಗಳಲಿ ಸೇವೆ ಸಲಿಸಬಹುದೆಂಬುದನು.
ನೀನಾದರೋ, ಮಾತೆ, ನನ್ನನೂ ನನ್ನಂಥ
ಹಸುಳೆಗಳನೂ ಬನ್ನಿರೆಂದೆ. ಏನಿದು ಹದನು
ಎಂದು ನಾವ್ಯೆತಂದು ಕವಿತೆ ಏನು ಎಂತು
ಎಂದು ಬಹು ಯೋಚಿಸದೆ, ನೀನಾಡಿಸಿದ ರೀತಿ
ಆಡಿದೆವು ಹಾಡಿದೆವು. ಅಚ್ಚರಿಯನೇನೆಂಬೆ!
ನಡೆ ಬಾರದವರ ಕುಣಿತವ ನೋಡಿ ನೀನಲಿದೆ;
ನುಡಿಬಾರದೆಂಥ ಹಸುಳೆಗಳ ತೊದಲಿನ ಮಾತ
ಮೆಚ್ಚಿದೆ. ಅರಿವೆನೇ ಇದೆ ಸಾಜವಲೆ. ಅಂಬೆ,
ಕಂದಗಳ ಜಲ್ಪದಲೆ ಸಂತೋಷವನು ತಳೆದೆ.

## ಅಪಹಾಸ್ಯಕಾರನನ್ನು ಕುರಿತು

ಆಹ ಕವಿತೆಯೆ ಆಹ ಕವಿಯೆ ಎನ್ನುತ ಕೇಕೆ
ಹಾಕಿ ನಕ್ಕೂ ನಕ್ಕು ನಿನ್ನ ನಗೆ ಕಣ್ಣೀರ
ಹಾಸ್ಯಕೂಪದಲಿ ನೀನೇ ನಲಿವ ರಸವೀರ,
ನಿನಗೇನು ಕನ್ನಡದಿ ಕವಿತೆ ಎಂಬುದು ಬೇಕೆ?
ಒಬ್ಬರೊಬ್ಬರ ನಾವು ನಗುತ ನಿಂದೊಡೆ ಸಾಕೆ?
ಬಲ್ಲತನದುಬ್ಬಟೆಯ ನಿನ್ನ ಈ ನಗುಸಾರ
ಕುಡಿವರಿಯಲೆಳಸುತಿಹ ಕಾವ್ಯವಲ್ಲಿಯ ಬೇರ
ಕೊಯ್ಯುತಿರುವುದ ನೀನು ಕಾಣದಿಹೆ. ನಾನೇಕೆ
ನಿನಗೆ ಹೇಳಲಿ? ಇಂದಿನೀ ನಿನ್ನ ಹುಚ್ಚರಿಯೆ,
‘ಕವಿತೆ ಬೆಳೆಯುವುದು ಈ ತೆರನ ನಗೆಯಿಂದಲ್ಲ
ನಾ ಕವಿಗೆ ಸೋದರನೆ ದಾಯಾದ ಮತ್ಸರಿಯೆ?
ನಾ ನಡೆಯುತಿಹ ರೀತಿ ಅವಿವೇಚನೆಯ ಎಲ್ಲೆ,
ನನ್ನ ಕಣ್ಣಿಗೆ ಕವಿತೆ ಕಾಣದಿಹುದಚ್ಚರಿಯೆ?’
ಎಂದು ನೀನೇ ತಿಳಿವೆ, ಹೋಗು, ಮೂಢರಮಲ್ಲ.

## ಅವನೊಡನೆ ಸಮಾಧಾನ

ಕಠಿನವಾಯಿತು ಮಾತು; ಎನ್ನ ಮನ್ನಿಸು ಅಣ್ಣ.
ನಾಡುನುಡಿಗಳಿಗಾಗಿ ದುಡಿಯಬೇಕಾದವನು,
ಬಲ್ಲ ಹಿರಿಯನು ನೀನು, ದುಡಿವವರ ಮೋದವನು
ಭಂಗಮಾಡುತ ನಿಂತು, ಆಡಬಾರದ ಸಣ್ಣ
ಪಣ್ಣ ಮಾತುಗಳನಾಡುವುದ ನೋಡುತ ನನ್ನ
ಅಂತರ್ಯ ಕಡಗಿ ನುಡಿ ಕ್ರೂರವಾಯಿತು ನೋಡ.
ಇಂತು ಹೇಳಿದೆನೆಂದು ನೀನು ಕೋಪಿಸಬೇಡ.
ನಮ್ಮೆಲ್ಲರನು ಪಡೆದ ನಾಡ ಬದುಕನು ಚೆನ್ನ
ಮಾಡುವರೆ ನಾವೆಲ್ಲ ಸೇರಿ ನಡೆಸುವ ಕೆಲಸ
ನೂರಿಹುದು. ಬಾ, ಜೊತೆಗೆ ನಿಲ್ಲು; ನಮ್ಮಿಂದಾದ
ಇನಿತನಿತು ಸೇವೆಯನು ಬಿಡದೆ ಮಾಡುವ ನಾವು.
ಎಲ್ಲ ಮಕ್ಕಳು ಇಂತು ತಮ್ಮ ಗೆಯ್ತವ ಸಲಿಸೆ,
ಬಾಳ್ವೆಯ ವಸಂತೋತ್ಸವದೊಳಂದು ಹಿಂದಾದ
ನಮ್ಮ ತಾಯ್ನಾಡು ಮುಂದಾಗುವುದ ನೋಡೇವು.

## ಹಿರಿಯ ಕವಿಗಳ ಪೀಠ

ಆ ಕುಮಾರವ್ಯಾಸನೂ ಕಾಳಿದಾಸನೂ
ಕಡಿಮೆಯಾದರೆ, ನಿಮಗೆ ಬೇಡವೇ, ಎಂದೆನ್ನ
ಹಳಿದು ಕೇಳುತಲಿರುವೆ. ಕೇಳಬಹುದೇ ಅಣ್ಣ ?
ನಾನೆಂದು ಬೇಡಿದೆನು ಅವರ ಉಚ್ಚಾಟನ ?
ಅದ ಬಿಡು: ನೀನು ಹೊಗಳುವ ಕಾಳಿದಾಸನೂ
ಆ ಕುಮಾರವ್ಯಾಸನೂ, ನೋಡು, ನಮ್ಮವರು.
ಅವರು ಬರೆಯುತಲಿರ್ದ ಕಾಲದಲಿ ನಿಮ್ಮವರು,
ನೀನಿಂದು, ಆಗಿಹೋಯಿತು ಸರ್ವನಾಶನ,
ಎಂದು ಕೂಗುವ ತೆರದೆ, ಅವರ ಕೃತಿಯನು ಹಳಿದು
ಕೂಗಿದರು ಕಾಣೆಯಾ ? ನಿಂದಕರ ಹೆಸರೇನು
ಸಂಶೋಧ ಮಾಡಿ ನೀನದನು ನಿಲ್ಲಿಸು ಹೋಗು.
ಕಾಳಿದಾಸ ಕುಮಾರವ್ಯಾಸರಾದ್ಯಸ್ಥಾನ
ನಮ್ಮಿಂದ ಕೆಡದು. ನಮ್ಮಲಿ ಕಾವ್ಯಲತೆ ತಳೆದ
ಸುಮವನವರಡಿಯೊಳಿಡುತಿಹೆವಾವು ತಲೆಬಾಗಿ.

# ಕವನದ ಗುಟ್ಟು

ಪ್ರಾಸ ಗಣ ಯತಿಗಳನು ಎದೆಗೆಡದೆ ಪೇರಿಸಲು,
ಬಣ್ಣ ಬಣ್ಣದ ಮಾತ ಸರಿಯಾಗಿ ಸೇರಿಸಲು,
ಕವಿತೆಯಾಗುವುದೆಂದು ನಿಜದಿ ನೆನೆದಿರ ಏನು?
ಕಾಗದದ ಹೂವಿನಲಿ ದೊರೆಯುಬಹುದೇ ಜೇನು?
ಆಕಾರವಿರೆ ಉಸಿರು ಬೇಡೆಂದೆ ನಂಬಿದಿರೊ?
ಬಲ್ಲವರೆ, ಕಬ್ಬಾಗಬಹುದೆಂತು ಚೆಂಬಿದಿರು?
ನರಿಗೆ ಬಣ್ಣವ ಹಚ್ಚಿ ಹುಲಿಯೆಂಬ ನುಣ್ಚುದುರು
ಎಷ್ಟು ದಿನ ಸೊಗಸುವುದು? ಸಾಕು ಬಿಡಿ ಅಣ್ಣದಿರು.
ಒಳಗು ಹೊರಗಿನ ಬಾಳಿನಾಳವನು ನೆರೆ ನೋಡಿ,
ನೋವು ನಗೆಯೊಳಗೀಸಿ, ಚೆಲುವು ವಕ್ರತೆ ಮೀರಿ,
ಅಂತರದ ಬೆಂತರನ ಮೊಗಗಂಡು ಧೃತಿಗೆಟ್ಟು,
ಮರೆಯು ದೈವವ ತಿಳಿದು ಪದತಳದಿ ಕೆಡೆದಾಡಿ,
ಅನುಭವವ ನುಡಿಯಿರಿ. ಪ್ರಾಸ ಗಣ ಯತಿ ಸೇರಿ
ಕಾವ್ಯವಾಗುವುದು ನುಡಿ. ಇದು ಕವನದೊಳಗುಟ್ಟು.

## ಕವಿ ಶಾಲಿವಾಹನ

ಕಾವ್ಯವಾಗುವುದು, ಬೊಮ್ಮನು ನಿಮ್ಮ ಕವಿಯಾಗು
ಹೋಗೆಂದು ಕಳುಹಿರಲು ; ಅಲ್ಲದಿರೆ ಆಗದು.
ಒರ್ವನಿಗೆ ಕಾವ್ಯಾಸ್ತ್ರ ಬಂದು ನಿಲ್ವುದು ಬಾಗಿ
ಏನಪ್ಪಣೆ ಎಂದು ; ಒರ್ವನಿಗೆ ಬಾಗದು.
ಕವಿತೆಯಲಿ ಎಲ್ಲೆಡೆಯು ಕಾಂಬೊಂದು ಸೋಗಿದು.
ಶಾಲಿವಾಹನನಂದು ಮಣ್ಣಿನಲಿ ಮಾಡಿಟ್ಟ
ಗೊಂಬೆಪಡೆ ನಡೆಯೆನಲು ನಡೆದುವಲೆ ಹೇಗದು?
ಅಂತೆ ಕವಿಯಾದವನು ನಾಲ್ಕು ಮಾತನು ಕಟ್ಟಿ
ನುಡಿಯೆನಲು ನುಡಿವವವು, ಹಾಡೆನಲು ಹಾಡುವುವು,
ಜನದ ಮನವನು ಹೊಕ್ಕು ನಲಿಸೆನಲು ನಲಿಸುವುವು ;
ನೋಯಿಸೆನೆ ನೋಯಿಪುವು, ಹೇಳಿದುದ ಮಾಡುವುವು.
ನುಡಿ ಕವಿತೆಯಾಗುವುದು ಕಲಿಯೆ ಬಹ ಹೊರಯುಕುತಿ
ಅಲ್ಲವದು. ಕವಿ ತನ್ನ ಎದೆಗಿಳಿದ ಅನುಭವವ
ಮುತ್ತಾಗಿ ಮಾಳ್ಪ ಗುಣವುಳ್ಳೊಂದು ಬರಿ ಶುಕುತಿ.

## ಆಸೆಯಿರುವವನು ಹಾಡಬೇಕು.

ನನ್ನ ನುಡಿ ಕವಿತೆಯಾಗುವುದೊ ಆಗದೊ ಎಂದು
ತಿಳಿಯದಿಹ ನಾನು ಕೃತಿಗೆಯ್ದು ಬಹ ಫಲವೇನು?
ಯಾವ ಸುಕೃತಿಯ ಜಿಹ್ವೆಯಲಿ ಕಾವ್ಯ ಸುರಧೇನು
ನೆಲಸಿ ಅಮೃತವ ಸೂಸಲೊಪ್ಪಿಹುದೊ ಅವನಿಂದ
ತಾಯ್ನುಡಿಗೆ ಪೆರ್ಮೆ ಬರುವುದು, ಜನಕೆ ಆನಂದ
ದೊರೆಯುವುದು, ಇನ್ನು ಬರೆಯುವ ಕ್ಲೇಶ ನನಗೇಕೆ?–
ಎಂದು ನುಡಿವೆಯ ಅಣ್ಣ? ಅತಿನೈಚ್ಯವಿದು ಸಾಕು.
ಇತ್ತ ಬಾ, ಕೇಳು, ತಿಳಿದವರ ನುಡಿ ಬೇರೊಂದ.
ಕಾವ್ಯ ನುಡಿಯುವ ಶಕ್ತಿ ಹುಟ್ಟುಗುಣವೆಂತಂತೆ
ಆವೇಶವೂ ಅಹುದು. ಯಾವ ವೇಳೆಗೆ ಯಾರ,
ಬಾ, ನನ್ನ ಕಂದ, ಬಾ ಬೆಳೆ, ಎಂದು ಹರಸುತ
ತನ್ನ ವಾಣಿಗೆ ವೀಣೆಮಾಡುವಳೊ ಸರಸತಿ,
ಹೇಳಲಾಗದು. ಹಾಡಲಾಸೆಯಿರೆ ಮನಸಾರ
ಹಾಡು. ನೀನಾಗಬಹುದವಳ ವೀಣೆಯ ತಂತಿ.

## ಅತಿಯಾಸೆಯ ಗಿಡ

ಅಡಿಮುಡಿಗಳಿಲ್ಲವೋ ಎನ್ನ ಆಸೆಯ ಗಿಡಕೆ !
ನಾಡು ನುಡಿಗಳ ಹೆಸರ ಮೇಲೆತ್ತಿ ನಭ ಮುಟ್ಟಿ
ಅವರ ಪೂಜೆಗೆ ಅಲ್ಲಿ ಗುಡಿ ಗೋಪುರವ ಕಟ್ಟಿ
ಜಗವನಚ್ಚರಿಗೊಳಿಸಿ ಸ್ಥಪತಿ ಎಂದೆಲೆ ಅಡಕೆ
ಕೊಳಬೇಕು ಎಂದು ಬಯಕೆ. ನನ್ನ ಮೆಯ್ತ್ರಾಡಿಕೆ
ನಿಲ್ಲಬಲ್ಲುದೆ ನನ್ನ ಜೀವ ತನ್ನಿಷ್ಟವನು
ಸಾಧಿಸುವವರೆಗೆ? ಅದ ಸಾಧಿಸುವ ಕಷ್ಟವನು
ತಡೆಯಬಲ್ಲುದೆ ಚೇತನ? ಮನದ ಬುಡುಬುಡಿಕೆ
ಜಯವಾಗಲೆಂದು ನುಡಿಯುವುದು. ಇದು ಅದರ ಗುಣ.
ಸುಖವೀವ ಸುಳ್ಳು ತೋಂಕೆಯೊಳದಕೇನಿದಿರೆ?
ಕನಸ ಕಲ್ಪದ್ರುಮದ ಹೊನ್ನಹೂ ಆರು ಮಣ.
ಹೊರಲಾರೆನೆಂದು ಉಬ್ಬಸಬೇಡ ಎಲೆ ಚದುರ.
ನಿದ್ದೆ ತಿಳಿ; ನೀನಲ್ಲ, ಸೋದರರದ ತರುಣ ಗಣ,
ನೋಡು, ಬಯಕೆಯನೆಲ್ಲ ಮುಂದೆ ಸಲಿಸುವ ಹದಿರ.

## ಆ ಆಸೆಯ ಸ್ವರೂಪ

ಎನ್ನಾಸೆ ಅತಿಯಾಯಿತೆಂದು ಬೇಸರಪಟ್ಟು
ನಾನೆನ್ನನಿಂತೊಮ್ಮೆ ಹಳಿದುಕೊಂಬೆನು. ನೋಡೆ
ಎನ್ನಾಸೆ ಎನ್ನದಲ್ಲ. ನಮ್ಮ ಈ ನಾಡ
ಆಸೆಯೇ ತುಂಬಿ ಹಿಗ್ಗಿಸಿದೆ ಎನ್ನೆದೆಕಟ್ಟ.
ತನದು ಶುಭವನು ತಾನು ಸಾಧಿಸಲು ಹೊರವಟ್ಟ
ನಾಡು, ಮಕ್ಕಳ ಮನದಿ ತನ್ನಾಸೆಯನು ಬಿತ್ತಿ,
ಕಂದಗಳೆ, ಸೋತೆನೆಂದೆನಬೇಡಿ, ತಲೆಯೆತ್ತಿ
ನೆಲೆ ಕುರಿತು ಕಂಗೆಡದೆ ಪಂಥವನು ಅಳವಟ್ಟು
ನಡೆಯಿರಿ, ಎನುತಿಹುದು. ಒಂದು ಜೀವಕೆ ಹೆಚ್ಚು
ಎಂದವಮಾತ್ರಕೆ ಆಸೆ ನಾಡಬಾಳ್ವಿಗೆ ಹಿಂದೆ?
ಒಂದು ಮೆಯ್ ಮನ ಉಸಿರು ಸಲೆದುಡಿದು ತಾ ಸೋತು
ಭಾರವನು ಬಿಡುವೆನೆನೆ ಅದಕೆ ಕೈಯನು ಆತು
ಹಿಡಿಯುವುವು ನೂರುಸಿರು ಎದೆ ಮನಸು ಮುಂಬರಿದು.
ಯುಗಗಳಿಗೆ ಸರಿ ಹಿರಿದು ನಾಡ ಬದುಕಿನ ಅಚ್ಚು.

## ಕವಿತೆಯ ಜೇನು

ಜೇನುಕುರುಬರ ಹೈದ ಹೇಳಿದನು ನಮಗೊಮ್ಮೆ
ಕಾಡಿನಲಿ ನಡೆವಂದು. 'ಅಕೊ ಅಲ್ಲಿ ನೋಡಿ ;
ತುದಿಬೆಟ್ಟದಾಕಲ್ಲು ಆ ಒಂಟಿ ಕೋಡು ;
ಅಲ್ಲಿ ಕಟ್ಟುವ ಜೇನುಗೂಡು, ಅಮ್ಮಮ್ಮ
ಅದರ ಗಾತರ ಅದರ ರುಚಿ ಹೇಳಲಮ್ಮೆ ;
ಅದು ಏನೊ ವರುಷವೂ ಕಟ್ಟುವುವು ಅಲ್ಲೆ ;
ಇನ್ನೆಲ್ಲ ಕಲ್ಲಲ್ಲ ಅದು ಮಾತ್ರ ಕಲ್ಲೆ ?
ಉಳಿದ ಕಲ್ಗಳನೆಲ್ಲಮಾಡನೇ ಬೊಮ್ಮ ? '—
ಕುರುಬ ಹೈದನ ಮಾತಿನಲಿ ತೋರಿತೊಳಹೊಳೆದು
ಅರ್ಥವೆನಗಿದು. ಒಳ್ಳೆ ಕವಿಯಾಗಬೇಕು
ಎಂದಾಶಿಸುವನು ಆ ಕೋಡಿನಂದದಿ ತಾನು
ನೆರಳುಳಿದು ಕಷ್ಟಸುಖಗಳ ರಾಶಿಯನು ತುಳಿದು
ನಿಲಲಿ ಬಾಳಿನಮೇಲೆ ಧೀರ, ಏಕಾಕಿ ;
ಆಗವನಿಗೆರಗುವುದು ಎಂಥ ಕವಿತೆಯ ಜೇನು !

## ಕನ್ನಡದ ಕಾವ್ಯವನ್ನು ಕುರಿತು

ನಿನ್ನ ಅಜ್ಞಾತವಾಸದ ಕಾಲ ಇಂದೀಗ
ಮುಗಿಯುತಿದೆ ಕರ್ಣಾಟಕಾವ್ಯ ಪಾರ್ಥ. ಅಂದು,
ರಾಜಪದವನು ಕಳೆದುಕೊಂಡು, ಧರ್ಮದ ಹಿಂದೆ
ಕಾನನವ ಸಾರ್ದು, ಬಹುವತ್ಸರಗಳನು ನೀಗಿ,
ಇತ್ತೀಚೆ ವನವಾಸದವಧಿ ಮುಗಿದಿರಲಾಗಿ,
ರಮಣೀಯವಲ್ಲದಿಹ ರಮಣಿಯಾಕೃತಿಯಿಂದ
ನಿನ್ನ ಕಿರಿಯರ ಸೇರಿ, ಅವರೊಳಗದಿ ನಿಂದು,
ದಿನವನಿದುವರೆಗೆ ನೂಕಿದೆ ಬೃಹನ್ನಳೆಯಾಗಿ.
ಸಾಕಿನ್ನು ಈ ಅವಸ್ಥೆ. ಜನತೆಯನು ನೋಡು ;
ನೂರು ಕೇಡಿಗೆ ಬಂದಿಯಾಗಿಹುದು. ಅದ ಪೊರೆಯೆ
ತವಕಿಸುವರುತ್ತರಕುಮಾರರಾಗಿಹರಯಿಸೆ.
ಬಾ ನಿನ್ನ ಅರೆವೆಣ್ಣವೇಷವನು ಬೀಸಾಡು ;
ತೊಡು ಪೂರ್ವದಾಯುಧವ ; ಕೆಟ್ಟ ಬಾಳನು ಅರೆಯು ;
ಧರ್ಮವನು ರಾಜನೆಂದೆನಿಸು ; ಲೋಕವ ಜಯಿಸು.

# ಕನ್ನಡ ನಾಡಿನ ಸ್ಥಿತಿಯನ್ನು ನೆನೆದು

ಹರಿದು ತುಂಡಾಗಿಹುದು ಇಂದು ಕನ್ನಡ ನಾಡು ;
ಅಣ್ಣ ತಮ್ಮದಿರು ತಾವಣ್ಣ ತಮ್ಮದಿರೆಂದು
ತಿಳಿಯಲಾರರು, ನಡೆಯಲಾರರು ; ಬಾ ಬಂಧು
ಎಂದು ಕರೆಯಲು, ಸ್ವಾಮಿ ನಮ್ಮೂರು ಧಾರ್ವಾಡ,
ನಮ್ಮೂರು ಮೈಸೂರು, ನಮ್ಮೂರು ಎರಕಾಡು,
ಮರ್ಯಾದೆಯಿಂದ ಕರೆಯಿರಿ ನನ್ನ, ಎನ್ನುವರು.
ಕನ್ನಡದ ನಾಡಜನವೆಲ್ಲವೂ ನನ್ನವರು,
ಬಡಗ ತೆಂಕಣ ಮೂಡ ಕೊಡಗ ತೌಳವ ತೋಡ
ಇನ್ನೆಲ್ಲ ಕನ್ನಡಿಗರೆನ್ನವರು ಎನ್ನುಸಿರು,
ನಾವೆಲ್ಲ ಒಂದು ಮನೆಯವರಣ್ಣ ತಮ್ಮದಿರು,
ನಮ್ಮೆಲ್ಲರನು ಪಡೆದುದೊಂದೆ ನಾಡಿನ ಬಸಿರು,
ಎಂದು ನಾವರಿದೆವೇ ನಮಗೆ ಇನ್ನಾರೆದುರು ?
ಹಾ ನನ್ನ ಸೋದರರೆ ಬನ್ನಿ ಒಂದಾಗಿ ;
ಜಯವಧುವ ನಿಮ್ಮ ತೋಳಿನೊಳಿಟ್ಟು ತೂಗಿ

## ಗುಂಪುಗಳ ಹಮ್ಮನ್ನು ನೆನೆದು

ಇನಿಸು ಹಿರಿದನು ಮಾಡಿ ಮನವ ಅಣ್ಣಾ ತಮ್ಮ.
ವೈಷ್ಣವ ಶ್ರೀವೈಷ್ಣವ ಸ್ಮಾರ್ತ ಕೈವರ್ತ
ಸೋಮಯಾಜಿಗಳಾವು, ನಾವು ಆರಾವರ್ತಿ
ಮೇಲಿಂದ ಬಂದವರು, ಬಲಿಜ ಒಕ್ಕಲು ಕಮ್ಮ,
ಎಂದು ಅಗಲಿರಬೇಡಿರಿ. ಗುಂಪುಗಳ ಹಮ್ಮು
ಮೊಳೆಯಾಗಿ ಬೆಳೆದು, ನಾಡಲಿ ಪೂರ್ವದಲಿ ಜನತೆ
ಒಂದೆಂಬ ಭಾವನೆಯ ಹೂಬಳ್ಳಿ ಅನಿತಿನಿತು
ತಲೆಯೆತ್ತದಂತೆ ಮಾಡಿದುವು. ಈಗಳು ನಮ್ಮ
ನಾಡು ನುಡಿ ಜನತೆ ಸಂಸ್ಕೃತಿ ಉಳಿಯಬೇಕೆಂದು
ನಮಗಾಸೆಯಿರೆ, ನಾವು ಈ ಭೇದ ಭಾವಗಳ
ಹೊದರ ತಪ್ಪಿಸಿಕೊಂಡು ಬೈಲಕಡೆ ಬರಬೇಕು.
ನಾ ಬೇರೆ ತಾ ಬೇರೆ ಎಂದ ನುಡಿ ಸಾಕೆಂದು
ನಾಡ ಹೆಸರನೆ ಹೇಳಬೇಕೆಲ್ಲ ಜೀವಗಳು.
ದೇಶವನು ಬದುಕಿಸುವುದೀ ಅಮೃತರಸಸೇಕ.

## ಯಾವುದೋ ಹರಿಕಥೆಯನ್ನು ನೆನೆದು

ಹರಿಕಥೆಗೆ ಬಂದ ಗತಿ ನರಕಥೆಗೆ ಬರಬೇಡ.
ಇಂದು ಹರಿಯನು ಕೀರ್ತಿಸುವಳೊಬ್ಬ ಚೆಲುವೆಣ್ಣು.
ಚೆಲುವೆ ಕತೆ ಹೇಳುವೊಡೆ ಭಾಗವತನೇಕಿನ್ನು ?
ಹೊನ್ನ ಸರಿಗೆಯ ಸೀರೆ, ವಜ್ರದೋಲೆಯ ಜೋಡಿ,
ಕೈಗೆ ಸಭೆಗಳು ಕೊಟ್ಟ ಕಲ್ಲು ಕೆತ್ತಿದ ತೋಡ,–
ನೋಡುವರು ಸೋದರರು ಹರಿಕಥಾ ಮೂರುತಿಯ ;
ಸರ್ವಭಾಷಾ ಪ್ರವೀಣಾಭಿನವ ಭಾರತಿಯ ;
ನೋಡ ನೋಡುತ ಇವರ ಮನಗಳೆಂತಹ ಗಾಢ
ಭಾವದಲಿ ಸಿಲುಕುವುವೊ ಬ್ರಹ್ಮದೇವನೆ ಬಲ್ಲ.
ಅಣ್ಣದಿರೆ, ಹರಿಯ ಕತೆಯೇನು ಹಾಡಿನ ಕಾಡೆ ?
ಸೂಳೆ ಕುಣಿತವೆ? ಚೆಲುವೆಯನು ಒಳ್ಳೆಯವರೆಲ್ಲ
ನೋಡಬಹುದೆಂಬ ಕೂಟವೆ ? ಬೀದಿ ನಾಯೊಂದ
ಕಪಿಗೆ ವಾಹನವಾಳ್ವ ಹಸುಳೆಗಳ ನಗೆ ಪಾಡೆ ?
ಹರಿಯ ಹೆಸರನು ಇಂತು ಕೆಡಿಸಬೇಡಿರಿ ತಂದೆ.

## ಆ ಕಥೆ ಮಾಡಿದ ಸೋದರಿಯನ್ನು ಕುರಿತು

ಸೋದರರ ಕುರಿತು ಏನನೊ ಹೇಳುವವಸರದಿ
ನಿನ್ನ ಲಘುವಾಗಿ ನುಡಿದೆನು ತಾಯೆ ಮನ್ನಿಸು.
ಜನ ಕೇಳುವುದನು ನೀ ಮಾಡುತಿಹೆ. ನಿನ್ನಸು
ಎಷ್ಟು ಸಂಕೋಚಪಡುವುದೊ, ಒಡಲ ಸವಿಯುಂತೆ
ಜನತೆಯಿಂದ್ರನ ಸಾವಿರದ ಕಣ್ಣು, ಎವೆ ತೆರೆದು,
ನಿನ್ನ ಕಡೆ ದೃಷ್ಟಿ ಎಸೆವಂದು. ಇಲ್ಲವೆ ಇಂತು
ಹಲವು ಸಲ ಹಿರಿಯ ಸಭೆಗಳ ಎದುರಿನಲಿ ನಿಂತು
ಇದನು ನೀ ಲೆಕ್ಕಿಸದೆ ಇಹೆಯೊ ಹೇವವ ಮರೆತು.
ನಿನಗೆ ಕುಂದಿಲ್ಲ ಇದರಿಂದ. ಯಾವುದು ಧರ್ಮ
ಎಂದು ಕಲಿಸಿಹರೊ ಅದ ನೀನು ಗೆಯ್ವುದು ಸಾಜ.
ಹರಿಯ ಕಥೆಯನು ನುಡಿವುದದರೊಳೆಷ್ಟೋ ಮೇಲು.
ಎನಿತು ಇರುವುದೊ, ಎಂತು ಸವೆಸಬೇಕೋ ಕರ್ಮ,
ಅದ ನೀನು ಸವೆಸುತಿಹೆ. ಆದರೀ ದುಷ್ಕಾಲ
ತೀರಿ ಧರ್ಮವ ಹಿಡಿವುದೆಂದು ನಮ್ಮ ಸಮಾಜ?



2

## ಆಕಾಶಗಂಗೆಯಲ್ಲಿ ನಡೆದ ಒಂದು ಸಂಗತಿಯನ್ನು ನೆನೆದು

ನೂರು ಯೋಜನ ಯಾತ್ರೆ ಬಂದು ಮಲೆಗಳನೇರಿ,
ಆಕಾಶಗಂಗೆಯಲಿ ಮಿಂದು ನಿರ್ಮಲನಾಗಿ,
ಆಚಮನಮಾಡಿ, ಸತಿಯನು ಹೊಡೆದನೀಯೋಗಿ
ಯೋಧಪುರದೆನ್ನ ಸೋದರ. ತಂಗಿ ಆ ನಾರಿ
ಇವನ ಕಾಲಿನ ಬಳಿಯ ಗಂಗೆಯಲಿ ಕಣ್ಣೀರ
ಬೆರಸಿ ಅದನೇ ತನ್ನ ತಲೆಯೆಡೆಗೆ ಪ್ರೋಕ್ಷಿಸುತ
ಸ್ನಾನವನು ಮುಗಿಸಿದಳು; ಇವನ ಈ ರಾಕ್ಷಸತೆ
ಏಕೊ ನಾನರಿಯೆ; ತಡೆವೆನೆ ಇಲ್ಲ ಅಧಿಕಾರ.
ಹೊಡೆವುದಕೆ ಹೆಂಡಿರನು ಬಹು ದೂರ ಕರೆತಂದೆ,
ಎಲ ಅಣ್ಣ. ನಿನ್ನ ಗಂಡಸುತನದ ಹೆಕ್ಕಳ
ನನ್ನ ನಾಚಿಸಿತಯ್ಯ. ಪ್ರೇಮಭರದಲಿ ತನ್ನ
ಸತಿಯನೆದೆಯೊಳಗಿಟ್ಟ ದೇವ, ತನ್ನೊಕ್ಕಲು
ನೀನಿಂತು ನಿನ್ನ ಪಾಲಿಗೆ ಬಂದ ಈ ಹೆಣ್ಣ
ದನದಂತೆ ಬಡಿಯೆ, ಮೆಚ್ಚುವನೆ ಅಬಲರ ಬಂಧು?

## ಅದೇ ವಿಷಯವಾಗಿ

ದೈವವನು ಹೆಣ್ಣೆಂದು ಭಾವಿಸಲು ಭಯಪಡದ
ಈ ಸನಾತನ ಧರ್ಮ, ಯಾವಲ್ಲಿ ಮಹಿಳೆಯರು
ಪೂಜಿತರೊ ಅಲ್ಲಿ ದೇವತೆಗಳೇ ನಲಿಯುವರು •
ಎಂದ ಮಾನವ ಧರ್ಮಶಾಸ್ತ್ರ, ನಿನ್ನನು ಹಡೆದ
ತಾಯಿ ದೇವರು ಎಂದ ವೇದ, ಕೈಯನು ಹಿಡಿದ
ಹೆಣ್ಣು ಗೃಹಲಕ್ಷ್ಮಿ ಎಂದಿಹ ಸಂಪ್ರದಾಯ: ಈ
ಯಾವುವೂ ಕೋಪ ಬಂದಂದೆಮ್ಮ ಕಾಯುವೇ
ಎಂದು ನೋಯುತಲಿಹಳು ನಮ್ಮ ಜನದಲಿ ಮಡದಿ.
ಎಲ್ಲೆಡೆಯು ಇಂತೆ ಇದೆ. ಕೋಡಗದ ಜಾತಿಯಲಿ
ಬಲಿತು ಕೊಬ್ಬಿದ ಗಂಡು ಏತರಿಂದಲೊ ಏನೊ
ಚೀರಿಡುತ ಹಲ್ಲಕಡಿಯುತ ಒಮ್ಮೆ ಖಾತಿಯಲಿ
ಹೆಣ್ಣು ಕಪಿಯೊಂದನಟ್ಟಿದುದ ನೋಡಿದೆ ನಾನು.
ಕೋಪದಲಿ ಮನುಜ ಹೆಂಡಿರ ಜರೆವ ಹೊತ್ತಿನಲಿ
ಆ ಚಿತ್ರ ಸುಳಿವುದೆನ್ನಯ ಮನದ ಭಿತ್ತಿಯಲಿ.

## ಮತವಳರ ಮೋಸ

ಹಾಳು ಕರು ಇದ್ದಷ್ಟು ದಿವಸ ಹಾಲಿಗೆ ಕೇಡು
ಎಂದು, ಕರುವನು ಹಾಲು ಬಿಡದೆ ಸೊರಗಿಸಿ ಕೊಂದು,.
ಮೂಳೆ ಕರುಳನು ತೆಗೆಸಿ ಚರ್ಮವನು ಹದಮಾಡಿ
ಒಳಗೆ ಹುಲ್ಲನು ತುಂಬಿ, ನಿನ್ನ ಕರು ನೋಡೆಂದು
ತಾಯಿ ಹಸುವಿನ ಮುಂದೆ ನಿಲಿಸಿ, ಸೊರೆಬಿಡೆ ಹಾಲ
ಕರೆದು, ಎಲ್ಲವ ಮಾರಿ ಬೆಳೆವ ಗೋವಳರೊಳರು.
ಬಲ್ಲವರು ಬಯ್ಯುತಿಹ ಈ ನಮ್ಮ ಕಲಿಗಾಲ
ಇಂತೆ ಮಾಡಿದೆ ಧರ್ಮದುಪದೇಶಿ ಮತವಳರ.
ನಿರ್ಜೀವವಾದ ಧರ್ಮವ ಜನದ ಮುಂದೆತ್ತಿ,
ನಿಮ್ಮ ಧರ್ಮವ ನೋಡಿ, ಎಷ್ಟು ಅಕ್ಕರೆಯಿಂದ
ರಕ್ಷಿಸುತಲಿಹೆವು, ನಡೆವುದಕೆ ಬಿಡದಿಹೆವಣ್ಣ,
ಇದನು ಪೋಷಿಸಬೇಕು, ಧನವ ತ್ವರೆಯಿಂದಿತ್ತು
ಪುಣ್ಯವನು ಮೂಟೆ ಕಟ್ಟಿರಿ, ಎಂಬರೀ ಮಂದಿ.
ಮಂಕು ಜನ, ಅಹುದೆಂದು ಸುರಿಯುತಿರುವುದು ಹೊನ್ನ.

## ಸತ್ಯಕಾಮಜಾಬಾಲಿಯ ಕಥೆಯನ್ನು ನೆನೆದು

ಸತ್ಯವನು ನುಡಿವುದೇ ಬ್ರಾಹ್ಮಣ್ಯ, ಬಾ ತಮ್ಮ,
ಕಲಿಸುವೆನು ವೇದವನು, ಎಂದನಂದುಪದೇಶಿ
ಗೌತಮ ಮಹರ್ಷಿ. ಇಂತೆಂದ ಅರ್ಥಕೆ ಹೇಸಿ,
ಬೇರೆ ಭಾವವನು ಹೊರಡಿಸಿದರದರಿಂದೆಮ್ಮ
ಗೂಢಾರ್ಥ ವಿವರಣ ಧುರೀಣ ವ್ಯಾಖ್ಯಾತೃಗಳು :
ಬ್ರಾಹ್ಮವಂಶಜನಾದ ಕಾರಣವೆ ನಿಜ ನುಡಿದೆ,
ಬ್ರಾಹ್ಮಣಾ ಬಾ, ನಿನಗೆ ಕಲಿಸುವೆನು, ಶ್ರುತಿ ಕೆಡದು,
ಎಂದು ಹೇಳಿದನಂತೆ ಋಷಿ ! ನಮ್ಮ ಭ್ರಾತೃಗಳು,
ಭಾಗೀರಥಿಯ ದಡದಿ ಹಿಂದಾಗಿ ಮನೆ ಕಟ್ಟಿ,
ನಮ್ಮ ತಾತದಿರು ಶೌಚಕೆ ನೀರು ಇರಲೆಂದು
ಈ ಕಾಲ್ವೆ ಹೊಡೆದರೆಂಬರು. ಜನರು ನಕ್ಕಾರು
ಎಂಬ ಭಯವಿಲ್ಲ ಮಗೆ. ಈ ಲೋಕಧಿಕ್ಕಾರ,
ನಮ್ಮ ಕಡೆ ಬೀಸದಿಹ ಚೌರಿ ಕಸ ಬರಲೆಂದು
ಆಣೆಮಾಡುತಿದೆ, ಎದೆತಟ್ಟಿ, ವೇದವಮುಟ್ಟಿ.

## ಎಂದು ತಿಳಿವುದೊ ಮನುಜಕುಲ :

ಎಂದು ತಿಳಿವುದೊ ಮನುಜಕುಲ ತಾನು ಒಂದೆಂದು !
ಬಿಳಿಯುವನು ಕರಿಯುವನ ತುಳಿಯುವುದು, ಯೇಹೂದ್ಯ
ತನಗೆ ದೇವರಿಗೆ ಏನೋ ಹೆಚ್ಚಿಕೆಯ ಬಾಧ್ಯ
ಇದೆ ಎನುತ ಬೀಗುವುದು, ಬ್ರಹ್ಮಮುಖದಿಂದಂದು,
ಹೊರಟು ಬಂದೆವು ನಾವು, ನಮಗಾರು ಸರಿಯೆಂದು,
ಮತ್ತೊಬ್ಬ ಉಬ್ಬಿ ಉಳಿದೆಲ್ಲರನು ಹಳಿಯುವುದು:
ನಾವಿಂತು ಒಂದೊಂದು ಡಂಭದಲಿ ಕೊಳೆಯುವುದ
ಎಂದು ಬಿಡುವೆವೊ ಜಗನ್ನಾಯಕನ ಕೃಪೆ ಸಂದು.
ಬಿಸಿಲಿನಲಿ ಮಲಗಿರುವ ತಾಯಮೊಲೆಯೆಡೆ ಸೇರಿ,
ಎರಡು ಕಣ್ತೆರೆದ, ಒಂದನು ತೆರೆದ, ಒಂದನೂ
ತೆರೆಯದಿಹ ನಾಯಿಮರಿ, ಹುಟ್ಟಿದೆರಡನೆಯ ದಿನ,
ಒಂದರೊಡನೊಂದು ಕಚ್ಚಾಡಿ, ಹೋಗೊ ಭಿಕಾರಿ,
ಹೋಗೊ ಜಿರಕೆ, ತೊಲಗು ನಾಯಲ್ಲ ಹಂದಿ ನೀ,
ಎಂದು ಕಾದುವ ತೆರದೆ ಕಾದುತಿದೆ ಜಗದ ಜನ.

## ಗೋತ್ರಗಳ ಹೆಮ್ಮೆ

ಕುಶಿಕ ವಿಶ್ವಾಮಿತ್ರ ವಾಸಿಷ್ಠ ಮಂಡೂಕ
ಕುತ್ಸ ಭಾರದ್ವಾಜ ಭಾರ್ಗವ ಶ್ರೀವತ್ಸ
ವಾಮದೇವಾಪ್ನವಾನ ಚ್ಯವನ ಪುರುಕುತ್ಸ—
ಪ್ರವರದಲಿ ನಾವಿಂತು ಮಾಡಿಕೊಂಬಭಿಷೇಕ
ಇನ್ನಾರಿಗುಂಟು? ಆದರೆ ನಮ್ಮ ಅವಿವೇಕ
ಈ ಮಹರ್ಷಿಗಳ ಬಾಳನು ವ್ಯರ್ಥವೆನಿಸುತಿದೆ;
ಹೆಸರ ಕೂಗುತ ಅವರ ತಿಳಿವ ಕಡೆಗಣಿಸುತಿದೆ;
ನಮಗಿಂದು ಹೊನ್ನಿಗಿಂತಲು ಮೇಣವೇ ತೂಕ.
ಇಂತು ಅಜ್ಞಾನದಲಿ ನಮ್ಮವರು ದಿನ ಕಳೆಯೆ
ಕಳೆದುಕೊಂಬುದೆ ಸತ್ಯ, ನಾಳೆಯೋ ನಾಳಿದ್ದೊ,
ಹಿರಿಯರಂದಾರ್ಜಿಸಿದ ವಿಜ್ಞಾನದುಂಬಳಿಯ.
ಜಸದ ಹೊಲಗಳನುಳುವ ಹಳೆಯ ಒಕ್ಕಲು ಕಾಲ,
ನಾಲ್ಕು ತಲೆಯಿಂದ ಕಾಣದ ನಮ್ಮ ಮೇಲೆದ್ದು,
ಕೊಡಲಾರೆನೆನ್ನುವನು ನಮಗೆ ಬೆಳೆಯುಲಿ ಪಾಲ.

## ದೀಪಗಳ ಜಗಳ

ವೇದಗಳಪೌರುಷೇಯುಗಳು, ಯಜ್ಞವ ಮಾಡು
ಎಂದು ಅವು ವಿಧಿಸುತಿವೆ, ಅದರಿಂದ ಜೀವವನು
ನಾ ಕೊಲ್ಲುವೆನು, ಅಂತು ಜಗದಾದಿದ್ಯೆವವನು
ಮೆಚ್ಚಿಪೆನು, ಎನ್ನುವರು. ವೇದ ಬುದ್ಧಿಗೆ ಬೇಡಿ.
ಅದನು ನಂಬಿದ ಜನಕೆ ಅರಿವಿಗರಿವೇ ಸೋಡಿ.
ನಮ್ಮೊಳಗು, ನೀಮಾಡುತಿಹ ಕಾರ್ಯ ಪಶುಘಾತ,
ಎಂದು ನುಡಿಯುತಲಿರಲು, ನಂಬಿರುವ ಹಳೆಮಾತು
ಕೊಲುವುದೇ ಸರಿಯೆನ್ನುತಿದೆ ಅದಕೆ ಇಜ್ಜೋಡಿ.
ಪೂರ್ವದಲಿ ಹಿರಿಯ ಹೃದಯದಿ ಹೊಳೆದ ಆ ಬೆಳಕು
ಅಂದೆ ಮರೆಯಿತೆ? ಮರಳಿ ಬೆಳಗದೇ ಮನುಜನಲಿ?
ಪಶುವ ಸದೆವಂದು ಕೈನಡುಗದೇ ಮನವಳುಕಿ?
ಜಿಹ್ವೆ ಸುಲಭದೊಳೊಪ್ಪುವುದೆ ಹವ್ಯವನು ತಿನಲು?
ನಮ್ಮೊಳಗೆ ಹರಿಯಿಟ್ಟ ದೀಪವನು ನಂದಿಸಿ
ನಡೆಯುತಿರುವೆವು ನಡೆಯ ಹಳೆನುಡಿಗೆ ಕೆಂದಿಸಿ.

## ಒಂದು ಮುಖವನ್ನು ನೋಡಿ

ಎಳೆತನದಿ ಭಯ ಕುತೂಹಲ ಬೆರೆತ ಮನದಿಂದ
ಊರಮಾರಿಗಳ ಮುಖವನು ನೋಡಿ ನಡುಗಿದುದು
ನೆನಪಿಹುದು ನನಗೆ. ಕರುಣೆಯ ನೆರಳಿಗೆಡೆಗುಡದ
ಕಾಠಿಣ್ಯದಿಂದ, ಕಲ್ಲಾದ ಮಾರಣದಿಂದ,
ಆ ಮುಖವನೆಂದೆಲ್ಲಿ ನೋಡಿರ್ದ ನೆನಪಿಂದ
ಶಿಲ್ಪಿ ರಚಿಸಿದನಂತು, ಎಂಬ ಯೋಚನೆ ನನಗೆ
ಆಮೇಲೆ ಬಂದಿಹುದು. ಕಾಣದುದು, ತನತನಗೆ
ಕೊಡೆಯ ಬರಬಹುದೆ ಶಿಲ್ಪಿಗೆ, ಉಳಿಯ ಮೊನೆಯಿಂದ ?
ದುಷ್ಟ ನಿಗ್ರಹದ ದೀಕ್ಷೆಯ ಕೊಂಡು ನಿಂದಿರುವ
ಮಂಢಲಾಧೀಶನೊರ್ವನ ಮುಖವ ಚಿತ್ರದಲಿ
ನೋಡಿ ತಿಳಿದೆನು ಇಂದು, ಶಿಲ್ಪಿ ಇಂತಹದೊಂದು
ಮುಖವನೆಲ್ಲಿಯೊ ಕಂಡು, ಸರಿಯೆಂದು ಮನದಂದು,
ಕಲ್ಲಿನಲಿ ಕಡೆದನೆಂಬುದ. ಏನು ಕ್ಷಾತ್ರಬಲ !
ಎಂಥ ಘಾತುಕತೆ ! ಗದುಮುವೆನು ಎನ್ನುವ ಗರುವ !

## ನಿಶ್ಯಳಾದ ಅಹಲ್ಯೆ

ಅನ್ಯಾಯವನು ಮಾಡಿ ಅದರ ಫಲವುಣಬೇಕು ;
ಆದರನ್ಯಾಯವೆಂದದು ಕಾಣಬಾರದು ;
ನ್ಯಾಯವನೆ ಮಾಡಿದಂತಿರುತ, ಮನ ಕೋರಿದ
ಅರ್ಥ ಬಳಿಸಾರೆ, ಅದರೆಡೆಗೆ ಧರ್ಮದದಾಕು
ಹಾಕಿ, ತಾವದ ಸವಿದರೂ ತಪಸಿನತಿರೇಕ
ತಮ್ಮ ಬಾಳಲಿ ಕಾಣಬೇಕು. ಇದು ಕೆಲ ಜನದ
ಮನಸು ನಡೆಯುವ ರೀತಿ. ಇದು ಬಾಳ ಗಾಯನದ
ಪ್ರೌಢಪಾಠದಿ ಕೊನೆಗೆ ಬರುವುದೆಂದು ವರೇಕು.
ಇಂದ್ರನಿಗೆ ಮನಸೋತು, ಅವನು ಪತಿರೂಪದಲಿ
ಬಂದಮಾತ್ರಕೆ ತನ್ನ ತಪ್ಪು ಮರೆಯುವುದೆಂದು
ಅವನಿಗಾತ್ಮವನಿತ್ತ ಋಷಿಪತ್ನಿ ಮಾಡಿದುದು
ಧರ್ಮವೆನಿಸಿತೆ? ಆತ್ಮವಂಚನೆಯ ಕೋಡಗದ
ಕೈಸೇರಬೇಡ ಮನುಜ. ದೊರೆಯ ಶಾಪದಲಿ
ಕಲ್ಲಾಗುವುದು ಹೃದಯ, ಆತ್ಮವೆಂಬುದು ನಂದಿ.

## ವಾತಾಪಿ ಇಲ್ವಲರ ಕತೆ

ನಮ್ಮ ಕುಟಿಲವ ತಿಳಿವರಾರೆಂದು ವಾತಾಪಿ
ಇಲ್ವಲರು, ತವಸಿಗಳ ವೇಷದಲಿ ವರ್ತಿಸುತ,
ಉಪಚಾರವಾಳ್ವ ಛದ್ಮದೊಳಂದು ಎಷ್ಟು ಶತ
ಮಂಕು ಮಕ್ಕಳ ತಿಂದರೋ! ತಮ್ಮ ಆ ಪಾಪ,
ಹಿರಿದಾಗಿ ಬೆಳೆದು ದಾಡಿಯ ಬೆಳಸಿ ಮುನಿರೂಪ
ತಳೆದು, ತಮ್ಮನು ತಿನಲಗಸ್ತ್ಯನಾಗುವುದೆಂದು
ಅವರೆಣಿಸಲಿಲ್ಲ. ಅವರಂತೆ ಕುಟಿಲದೊಳಿಂದು
ಜನರ ನುಂಗುವರನವರಾಪಾಪ ನಿಕ್ಷೇಪ
ಎದುರು ನೋಡುತಲಿಹುದು. ಈ ಹದನ ಬಲ್ಲರೇ
ಪಾಪಿಗಳು, ಶಿಕ್ಷೆ ತಮ್ಮನು ಸಾರುವನ್ನೆವರ?
ಯಾವುದಾಗಲಿ ಮನಸು ಕೇಡನೆಣಿಸಿದ ಚಣವೆ
ಅದಕವಳಿಯಾಗಿ ಅದ ಸುಡುವ ಬೆಂಕಿಯು ಕಣವು
ಒಗೆವುದನು ಇವರು ಅರಿಯರು. "ತಿಳಿದರಲ್ಲವೆ,
ಯಾವನಾದರು ನಮ್ಮ ಶಿಕ್ಷಿಪುದು?" ಎನ್ನುವರು.

## ಚಿನ್ನ ಬೆಳ್ಳಿ

ಮೌನವೇ ಚಿನ್ನ, ಮಾತಾಡುವುದು ಬೆಳ್ಳಿ ದಿಟ,
ಎಂದು ತಿಳಿದವನು ಈ ಲೋಕವನು ನೋಡಿದನು;
ಮನ ಕದಡಿಬರೆ ಮೂರುಕೋಟಿ ಮಾತಾಡಿದನು.
ಬಾಯಮುಚ್ಚಿರಲೆಳಸಿದನು: ನಡೆಯಲಿಲ್ಲ ಹಟ.
ಈ ಜಗದ ಕಷ್ಟನಿಷ್ಠುರ ಈ ಸುಳ್ಳು ಸಟೆ
ಇದ್ದೆ ಇವೆ, ಇದರ ಮಾತಾಡಿ ಫಲವೇನೆಂದು
ಎನಿಸು ದಿನ ನೀನು ಸುಮ್ಮನೆ ಇದ್ದರೂ, ಒಂದು
ದಿನ, ನಿನ್ನ ಬಾಯನದು ಬಿಡಿಸದಿಹುದಿಲ್ಲಕಟ.
ಬೀದಿಯಲಿ ಪೋಪ ಮೂಕನನು ಬಾಲಕ ತಂಡ,
ಚೇಷ್ಟೆಮಾಡುತ ಕೂಗಿ ನಕ್ಕು ಮೂಗನು ಕೆರೆದು
ರೇಗಿಸುತ, ಹಿಂದೆ ಹಿಂದಟ್ಟುವಂತೀ ಲೋಕ,
ನನ್ನ ಪಾಡಿಗೆ ನಾನು ಹೋಹೆನೆಂಬನ, ಮೂಕ,
ಸುಮ್ಮನಿಹೆಯಾ ಎಂದು ಹಿಂಸಿಪುದು. ವ್ರತ ತೊರೆದು
ನುಡಿಯಬೇಕಾಮನುಜ. ನುಡಿಯದಿದ್ದನೆ ಭಂಡ.

# ಮಾತೃದೇವೋಭವ

ತಾಯಿನಾಯೊಂದು ; ತುರಿ ತಿಂದ ಮೈ ಮುಖ ಬಾಲ ;
ಹಸಿದೊಣಗಿ ಮೂಳೆ ಬರೆ ಬರೆ ಕಾಣುತಿಹುದಂತೆ ;
ಎತ್ತಣಿಂದಲೊ ಓಡಿಬರಲು, ಒಂದೆಡೆ ನಿಂತು
ಮಾವ ನೋಡಿದರಂತೆ. ಕೆಲವುದಿನ ಮೊಲೆಹಾಲ
ಕುಡಿವುದನು ಬಿಟ್ಟ ಮರಿ ಮೂರು ಬಂದವು ; ಕಾಲ
ಸುತ್ತಿಕೊಂಡವು, ಏನತಂದೆಯಮ್ಮಾ ಎಂದು
ಕೇಳ್ವಂತೆ. ಹಸಿದಿರ್ದ ತಾಯ್ ತನ್ನ ಬಾಯಿಂದ
ಇಷ್ಟು ಹಿಟ್ಟನು ಹಾಕಿತಂತೆ ಹುಲ್ಲಿನಮೇಲೆ.
ಮರಿ ಅದನು ತಿಂದವು ; ತಾಯಿ ನೋಡುತಲಿತ್ತು.
ಈ ಚರ್‍ಯೆಯನು ಕಂಡು ಮಾವ ಬೆಕ್ಕಸಗೊಂಡು
ಮನೆಗೆ ಬಂದರು, ನನಗೆ ಹೇಳಿದರು ಸಂಗತಿಯ.
ತನ್ನ ಹಸಿವನು ತಡೆದು ಈ ನಾಯಿ ತಾ ಹೆತ್ತ
ಮರಿಯ ಹೊರೆದುದು ನನಗೆ ಮಾತೆಯ ದಿನಂಪ್ರತಿಯ
ಕೃತಿಯ ನೆನೆಸಿತು ; ಹನಿದುದಾಲಿ ದೈವವ ಕಂಡು.

## ತಂದೆಯ ಅಕ್ಕ ತೀರಿಹೋದ ಸಂಜೆ

‘ ಕಡೆಯಕಾಲಕೆ ನೋಡು ದೊಡ್ಡಮನೆಯಕ್ಕ ಚ್ಚ
ರೋಗದಲಿ ನರಳಿದಳು ಎಂದೂರ ಜನ ನಗರೆ ’
ಎಂದು ಹೇಳಿದಿರತ್ತೆ. ಜನದ ಬಾಯಲಿ ಹಗುರ
ಆಗಬಾರದು ಎಂದೆ ಬಹುಬೇಗ ಕಣ್ಮುಚ್ಚಿ
ಮರೆದಿರಾ ? ನಿಮ್ಮೊಡಲುಚಿತೆಗೆ ಬೆಂಕಿಯ ಹಚ್ಚಿ
ನಿಮ್ಮ ಮನದಾಸೆಯನು ನಾನಿಂದು ಸಲಿಸಿದೆನು.
ನಿಮ್ಮುಸಿರನಾಮೊದಲೆ ಹರಿಯ ಸದಮಲ ಸದನ
ಕರೆದುಕೊಂಡಿತು. ಇಂತೆ ಇತ್ತು ನಿಮ್ಮಯ ನೆಚ್ಚು.
ಮುದುಕಿ ನಿಜ ; ನಿಮಗೆ ನಾ ಮಾಡಬಹುದಾಗಿರ್ದ
ಸೇವೆ ಬಹುಕಡಿಮೆ ನಿಜ ; ಇನ್ನಷ್ಟು ದಿನವಿರಲು
ನಿಮಗೆ ಬೇಸರ, ನಿಮ್ಮ ನೋಳ್ಪ ಜನಕೂ ಕಷ್ಟ,
ನಿಜ. ನೆನೆಯುತಿಹೆನಿದನು. ಆದರೂ ಅಸ್ಪಷ್ಟ
ಯಾತನೆಯಿದಾವುದೋ ಅಂತರ್ಯದಿಂದೆದ್ದು,
ಮರಳಿ ಪಿತನಳಿದಂತೆ, ಸೆರೆಯೌಕುತಿದೆ ಕೊರಳ.

## ಜೀವ ರೇಶಿಮೆಯ ಹುಳು

ತನ್ನ ಬಾಳಲಿ ತಾನು ಬೇಸತ್ತು ಳಲಿ ಮುದುಕಿ :
ತಾನಿದ್ದು ಆಗಬೇಕಾದುದಿನ್ನೇನಿಹುದು,
ಹರಿ ತನ್ನ ಜೀವವನು ಕೊಳುವುದಕೆ ಯಾವ ಹದ
ಬರಬೇಕೊ ಕಾಣೆ, ಎಂದಳು : ಹಳಸಿತೀ ಬದುಕು.
ಕಳಿತುದುಸಿರಿನ ಹಣ್ಣು ; ಸಾವೆಂಬ ಗಿಳಿ ಕೆದಕಿ
ತನ್ನ ತಿನ್ನುವುದೆಂದು ಎಂದಿದಿರುನೋಡುತ್ತ,
ಬಾಳ್ ತೊಟ್ಟು ಬಿಡದೇಕೆ ಎಂದು ಹಠಮಾಡುತ್ತ,
ದಿನವ ನೂಕಿದುದು. ಏನಾತುರವೊ ಸಾವುದಕೆ !
ನಾವರಿವೆವೆಂತದನು ? ಎಳೆಯ ರೇಶಿಮೆಯ ಹುಳು
ಉಗುಳಿನೆಳೆಯಲಿ ಗೂಡಮಾಡಿಕೊಳುತಿಹ ವೇಳೆ
ತಿಳಿಯಬಹುದೆಂತು, ಕತ್ತಲಲಿ ಹಲದಿನವಿದ್ದು
ಗರಿ ಕಾಣುತಿಹ ಮುದಿಯ ಭಾವವನು ? ಈ ನಿದ್ದೆ
ಸಾಕು ಎನುತಿಹುದು ಅದು. ಬಿಡುಗಡೆಯ ಸಮಯದೊಳು
ರುಚಿಸಲಾರದು ಅದಕೆ ಬಾಳಕನಸಿನ ಜಾಲ.

## ಬಾಳ ಜಾರುಬಂಡೆಯಾಟ

ಕಾಲಪರ್ವತದೊಳನುವಾದ ತಾಣದಿ ಜೀವ
ಜಾರುಬಂಡೆಯ ಆಟವಾಡುತಿವೆ : ಇದೆ ಬಾಳು.
ತುದಿಗೇರಿ ಕುಳಿತು ಅಲ್ಲಿಂದ ಇಳಿವುದೆ ಕೇಳಿ :
ಇದಕೆ ತೊಡಗಿಹೆವೆಲ್ಲ, ಆತ್ಮ ಇಹ ಅರೆಜಾವ.
ಮೇಲಿಂದ ಜರುಗಿ, ಆಟದ ಸಂತಸದಿ ನಾವು
ತುಸವುಬ್ಬಿ, ಬಳಿಕ ಬುಡವನು ನೋಡಿ, ಮನಸಿನಲಿ
ಭಯತೋರೆ, ಇಳಿವ ಭರ ಮೀರೆ, ಬರಿ ಕನಸಿನಲಿ
ಸುಳಿವೆವೋ ಎನ್ನುವೆವು ; ನಮ್ಮ ಸುತ್ತಣ ತಾವು,
ಮರ ಕಲ್ಲು ಆಕಾಶ ಭೂಮಿ, ಗೆಳೆಯರ ಜೊತೆಗೆ
ಅದೆ ಓಡುತಿರುವಂತೆ ಕಾಣುವುದು ; ಭಯಮಿಕ್ಕು
ಏನಾಗುವುದೊ ಎಂದು ಹಾ ಎನಲು, ಚಣ ಮುಗಿದು
ಬುಡವ ಸೇರುವೆವು ; ಏನಿದು, ಏಕೆ ನಾಸುಗಿದು
ಕೂಗಿಕೊಂಡೆನು, ಎಂಬೆವಾಗ ಹಗುರದಿ ನಕ್ಕು.
ಮರಳಿ ತುದಿಗೇರುವೆವು ; ಮರಳಿ ಮೊದಲಿದೆ ಕತೆಗೆ.

## ಆದಿಕವಿಗೆ

ಆದಿಕವಿ ವಾಲ್ಮೀಕಿ, ನಿನ್ನ ಈ ಸವಿನುಡಿಯು,
ಏನೊಂದ ತಿಳಿವ ಮುನ್ನವೆ ಕೇಳತೆನ್ನ ಕಿವಿ.
ಭಾವದರಿವಿಲ್ಲದಿರ್ದೆದೆಗಿಳಿದು ಅದರ ಸವಿ,
ನಾದದಲೆ ಸೊಗಗಂಡ ಎನ್ನ ಮನಸಿನ ಕುಡಿಯು
ತನ್ನೆಡೆಗೆ ಸೆಳೆದುಕೊಂಡಿತು. ಬರಿವ ಜನದೊಡೆಯು,
ಬೆಳೆದು ಅರ್ಥವ ತಿಳಿವ ದಿನ ಮರಳಿ ನೋಡಿದೆನು
ಈ ಚೆಲುವಿನಬುಧಿಯನು, ಇದರೊಳೀಸಾಡಿದೆನು ;
ನಿನ್ನ ನುಡಿಯಾದಿಶೇಷನ ಸಾವಿರದ ಹೆಡೆಯ
ಮಣಿಯ ಬೆಳಕಿನೊಳೆನ್ನ ದೈವವನು ಕಂಡೆನು.
ನೀ ಬಣ್ಣಿಸದ ಗುಣವೆ? ಚಿತ್ರಿಸದ ರೂಪವೇ?
ತೋರದಿಹ ತತ್ತ್ವವೇ? ವಿವರಿಸದ ಭಾವವೇ?
ಆದೊಡೆ ಇದಲ್ಲ, ನೋವವರೊಳನುತಾಪವೇ
ಕಾವ್ಯದಲಿ ಮೊದಲು, ಮಂಗಳ, ಮುಖ್ಯ ಮಂಡನ,
ಎಂದೆಯಲೆ, ಅದು ನಿನ್ನ ಹಿರಿಮೆ, ಹಿರಿಜೀವವೇ.

## ಆ ಕ್ರೌಂಚ ಮಿಥುನ

ಕ್ರೌಂಚ ಮಿಥುನದೊಳೊಂದು ಆ ದಿವಸ ನೊಂದುದೇ
ಅಂತು ನೋಯುವೆ ಹಿಂದೆ ನೂರು ಸಾವಿರ ಹಕ್ಕಿ,
ಇನ್ನಿತರ ಜೀವಗಳು? ಅದನು ನಿನಗೂ ಮಿಕ್ಕ
ಋಷಿವರರು ನೋಡರೇ, ಅವರಾತ್ಮ ಕುಂದದೇ ?
ಆದರೇನವರ ಬಾಯಲಿ ಸಾರಿಬಂದುದೇ
ನಿನ್ನ ಬಾಯಲಿ ಬಂದ ಕಾರುಣ್ಯ ಸಂಜನಿತ
ಆಗ್ರಹದ ರಸವಾಕ್ಯ ? ಇದು ಬರಲಿ ಎಂದೆನಿತು
ಯುಗದ ದಿನ ಸೃಷ್ಟಿ ಕಾದುದೊ ಆಸೆ ನಂದದೆ !
ಲೋಕದಲಿ ಕಾವ್ಯದೀಪವನಿಂದು ಹಚ್ಚುವೆನು
ಎನಲು ವಿಧಿ, ಎನಿತು ಹೃದಯದಿ ನೋವ ಚಕಮುಕ್ಕಿ
ಎನಿತುಸಲ ಬಡಿದುದೋ ; ವಿಫಲವಾಯಿತು ಎಲ್ಲ.
ಅರೆಹಿಡಿಯ ಆಮಿಷಕೆ ಬೇಡನಂದೆಚ್ಚ ಕಣೆ
ಹಕ್ಕಿಯೆದೆನೋವ ಕಿಡಿಯೊಡನೆ ನಿನ್ನೆದೆ ಹೊಕ್ಕು
ಅಲ್ಲಿ ಹಚ್ಚಿತು ಅದನು, ಜಗಕೆ ಬೆಳಕನು ಚೆಲ್ಲಿ.

## “ ಮಾ ನಿಷಾದ ಪ್ರತಿಷ್ಠಾಂ ತ್ವಮಗಮಃ ”

ಅಂದು ತಮಸಾ ತೀರದಲಿ ನಡೆದ ವೃತ್ತಾಂತ
ಅನಿತೇನು ಹಿರಿದಃ ? ಅದರಿಂದ ಲೋಕದಿ ಕಾವ್ಯ
ಉದಯವಾಗುವುದೆನಲು, ಬಲ್ಲವರಸಂಭಾವ್ಯ
ಎಂದೆ ಹೇಳುತಲಿರ್ದರಲ್ತೆ. ಶೋಕೋದ್ವಾಂತ
ಶಾಪ ಮಂಗಳವಪ್ಪುದೆನಲು, ಕಿಂಚಿದ್ಭ್ರಾಂತ
ಭಾವನೆ ಇದೆನುತಿರ್ದರಹುದು. ಮುನಿ ಗಳಹುವನೆ
ಯಾವುದೋ ಹಕ್ಕಿ ಸಾಯಲು ? ಹಕ್ಕಿ ಬಳಗವನೆ
ವ್ಯಾಧ ಕೊಲ್ಲಲಿ, ಕದಲಲೇತಕೆ ತಪಶ್ಶಾಂತಿ?
ಇದು ನಮ್ಮ ಮನದಣಿಕೆ. ಜಗವೆಲ್ಲ ಒಂದೆಂದ
ನಿನಗೆ, ಹಕ್ಕಿಯ ನೋವು ಬಾಳ ಪ್ರತಿನಿಧಿಯಾಗಿ
ನಿತ್ಯವೆನಿಸಿತು ; ನೋಡಿ ವ್ಯಾಕುಲದಿ ನೀನುಡಿದೆ.
ಸತ್ಯವಂತನ ಮಾತು ಕ್ರಮವರಿತು ಬಂದೊಂದು
ಕಾವ್ಯವಾಯಿತು : ಅದನು ಶಾಪವಾಗಿರಬಿಡದೆ
ಬ್ರಹ್ಮನೇ ತಿದ್ದಿದನು ಮಂಗಲದ ಸುಧೆಯಾಗಿ.

## ಷೇಕ್ಸ್‌ಪಿಯರಿಗೆ

ಕವಿಲೋಕದಲಿ ನೀನು ಸಾರ್ವಭೌಮನೆ ಸತ್ಯ
ಷೇಕ್ಸ್‌ಪಿಯರ್. ಮನುಜಕುಲದೆದೆಯೆ ಕವಿಗಳ ಲೋಕ;
ಇದರೊಳಾವುದು ಹಿರಿದು, ಒಳಿತು, ಅಂತೆಯೆ ಕಾಕು
ಕುಟಿಲ ಕುತ್ಸಿತ ಅಹುದು, ಎಲ್ಲದರ ಯಾಥಾರ್ಥ್ಯ,
ನಿನ್ನ ಭಾವದ ಬಲವನೊಪ್ಪಿಕೊಂಡು, ಅಗತ್ಯ
ನಿನ್ನ ಅಧಿರಾಜ ಎಂದವು; ನಟ್ಟನಡುವಗಲ
ತೆರದ ನಿನ್ನರಿವಿಂದ, ಇದರೊಳಂಗೈಯಗಲ
ಮರೆಯುದಡಗಿತು ನಿನ್ನ ನುಡಿಯ ಕೊಡೆಯಡಿ ನಿತ್ಯ.
ಬಾಳುವೆಯ ಭೋಜನದ ಆರು ರಸವನು ಸವಿದು,
ನೊಂದು ನೋವನು ಗೆಲಿದು, ನೆರೆಯ ನಗೆಯನು ಕಂಡು,
ನಾನೆಂತು ಜೀವ ಅಂತೇ ಜೀವ ವೊಲ ಮಶಕ
ಎಂಬ ತಿಳಿವಿನೊಳಾಳಿ, ನಿನ್ನುಸಿರಿನನುಭವದ
ರಸವ ಕಾವ್ಯಾಶ್ವಮೇಧದ ಅಗ್ನಿಯಲಿ ಹಿಂಡಿ,
ಅಮರತೆಯ ಸಾಧಿಸಿದೆ ನೀ ಯೋಗಿ, ಚಿರರಸಿಕ.

## ಕುಮಾರವ್ಯಾಸನಿಗೆ

ಶ್ರೀವನಿತೆಯರಸ ಗದುಗಿನ ವೀರನಾರಣನ
ಇನ್ನೆನಿತು ಜನ್ಮದಲಿ ಇನ್ನಾವ ರೀತಿಯಲಿ
ಪೂಜಿಸಿದ ಫಲವಾಗಿ, ವೇಗದಲಿ ಭಾತಿಯಲಿ
ಇಂತು ಮೇಲ್ವಾಯ್ದುಬ್ಬಿ, ಆ ಕಥನ ಕಾರಣನ
ಚರಿತೆಯನು ಜಗಕೆ ಹಾಡುವ ಕಾವ್ಯ ಚಾರಣನ
ಪದವಿಯನು ನೀವು ಪಡೆದಿರಿ, ಕುಮಾರವ್ಯಾಸ?
ನಮ್ಮ ನುಡಿಯಿರುವಂದು ಇನಿಸಾದರೂ ಹ್ರಾಸ
ತಾಗದುಕ್ಕುವುದು ಈ ಘನ ಷಟ್ಪದೀರಣನ.
ವೀರನಾರಾಯಣನ ಕಿಂಕರಗೆ ತಡೆಯುಂಟೆ?
ಅವನ ಹಿಡಿಯುವರಾರು ಅವನ ನಡೆಗೇನಡ್ಡಿ?
ದೊರೆಯಾರು ನೋಡಿ ಮನ್ನಿಪುದು ಭಟನನು ಲೋಕ;
ನುಡಿ ಭಾವ ರಸ ಊಹೆ, ನೀವು ಹಾಕಿದ ಕಡ್ಡಿ
ದಾಟಲಾರದೆ, ನಿಮಗೆ ನಡೆದು ಕೊಂಡವು; ನಾಕ
ನಿಮ್ಮ ಕೃತಿಯಲಿ ಬೆರೆತು ಒಪ್ಪಿಕೊಂಡಿತು ನಂಟ.

## ಕಾಳಿದಾಸನಿಗೆ

" ನಯವಿರಲಿ ; ಬಲವಿರಲಿ ; ನಕ್ಷತ್ರವೆನೆ ಮಿನುಗಿ,
ಸತ್ಯಲೋಕದ ಚೆಲುವ ಬೆಳಕ ಭೂಮಿಗೆ ಚೆಲ್ಲಿ,
ಸುಖವ ಬೆಳಸಲಿ ; ಹುಣ್ಣಿಮೆಯ ರಾತ್ರಿಯುತ್ಫುಲ್ಲ
ನೀಲೋತ್ಪಲಕೆ, ಅಂತೆ ಮೊಲ್ಲೆ ಮಲ್ಲಿಗೆ ನನೆಗೆ,
ಎಣೆಯಾಗಿ ಸೊಗಸಿ ಸೋಕಿದ ಜೀವದೆದೆ ತಣಿಗೆ
ರಸದಿಂದ ತುಳುಕುವಂದದಿ ಜನವ ನಲಿಸಲಿ ;
ಕಾವ್ಯದಾನಂದವನು ಮನುಜರಿಗೆ ಕಲಿಸಲಿ ;
ಆಮೇಲೆ ಮರಳಿ ಸಾರಲಿ ನಿನ್ನ ಅರಮನೆಗೆ : "
ಎಂದು ಸರಸತಿಗೆ ಹೇಳಿದನೊಮ್ಮೆ ವಾಗೀಶ,
ಪ್ರಿಯವಾಕ್ಸುತನ ಜಗಕೆ ಕಳುಹೆಂಬ ಅರ್ಥದಲಿ.
ಮೊದಲು ಒಪ್ಪಳು ಮಾತೆ ; ಒಪ್ಪಿದಳು ಕ್ಷಣಬಿಟ್ಟು.
ಇಂದು ಕಳುಹುವೆನು, ಇನ್ನೊಮ್ಮೆ ಮಗುವನು ಅಟ್ಟು
ಎನ್ನದಿರು, ಎಂದಳು. ಬಂದುದಸ್ವಾರ್ಥದಲಿ
ಆ ಮಾತು ಇಳೆಗಂದು ; ಅದುವೆ ಕಾಲೀದಾಸ.

## ಶ್ರೀ ವಿಶ್ವೇಶ್ವರಯ್ಯನವರಿಗೆ

ಹಗಲ ತೂಕಡಿಕೆಯಲಿ ಕುಳಿತಿರ್ದ ಜನತೆಯನು
ತಟ್ಟಿ ಎಬ್ಬಿಸಿ ಬಾಳ್ವ ದಾರಿಯನು ತೋರಿದಿರಿ,
ಬಾಳಿರೋ ಎಂದು ಕೂಗಿದಿರಿ ಅಕ್ಕಾರಿದಿರಿ,
ವಿಶ್ವೇಶ್ವರಯ್ಯ ; ಮುನ್ನಡೆಯ ಹೊಸ ಗಣಿತಿಯನು
ಬಿತ್ತರಿಸಿ, ನವಯುಗದ ಜೀವನದ ಘನತೆಯನು
ಓರಂತೆ ಸಾರಿ, ಜನ ಸೆಳೆವೆಲ್ಲ ಗಾಳಿಯಲಿ
ತೂರಿ ಹರಡಿದಿರಿ ; ಮುಸಕಾಗಿದ್ದ ಮೂಲೆಯಲಿ
ಹಚ್ಚಿ ಇರಿಸಿದಿರಿ ತಿಳಿವಾಸೆಗಳ ಹಣತೆಯನು.
ಧನ್ಯರಾದಿರಿ ಇಂತು ನೀವು. ಆದೊಡೆ ಅಂದು
ನಾಡದೀಪಕೆ ನೀವು ಹಾಕಿದಾ ಸಜ್ಜರಸ
ಕ್ಷಣಮಾತ್ರ ಅದನು ಉಬ್ಬಿಸಿ ಬಾಳುವೆಯ ಬೆಳಗಿ
ಮರೆಯಾಯ್ತು. ಉತ್ಸಾಹ ಸಮನಾಗಿ ಪ್ರಜ್ವಲಿಸಿ
ನಂದದಿಹ ದೀಪವಾಗುವುದು ಎಂದೋ ಮುಂದೆ !
ಉದ್ಯಮ ಸ್ನೇಹ ತುಂಬುವುದೆಂದೊ ನಮ್ಮೊಳಗೆ !

## ಶ್ರೀ ಚ. ವೆ. ರಾಮನ್ ಇವರಿಗೆ

ಭೌತತತ್ತ್ವಾನ್ವೇಷಣಾತ್ತ ಕಾರ್ಯಧುರೀಣ,
ಚಂದ್ರಶೇಖರವರ್ಯತನಯ ವೇಂಕಟರಾಮ,
"ಕಸ್ಮೈ ದೇವಾಯ ಹವಿಷಾ ವಿಧೇಮ?"
ಎಂದು ಬಾಳುವೆ ಅಂದು ನಿನ್ನನು ಅನೂಚಾನ
ಜೀವನ ಸಮಸ್ಯೆಯನು ಬಿಡಿಸೆನಲು, ವಿಜ್ಞಾನ
ಇರಲಿ, ಬರಿ ಹೊನ್ನೊಲ್ಲದೆಂದು, ನೀ ಮುಂಬರಿದು,
ಸೃಷ್ಟಿ ಮರೆಸಿರುವ ಸೂತ್ರಗಳನು ಸಮಂತರಿದು,
ವಿಬುಧರಲಿ ಹಿರಿಯನೆಂದೆನಿಸಿಹೆ ಮಹಾಪ್ರಾಣ.
ಉಪನಿಷತ್ಸಂಹಿತೆಯ ಕಾಲದಲಿ ಋಷಿಸುತನು
ಆತ್ಮಸಾನ್ನಿಧ್ಯದಲಿ ಪ್ರಶ್ನೆ ಕೇಳಿದ ರೀತಿ
ನೀನಿಂದು ಪ್ರಕೃತಿದೇವಿಯ ಮುಂದೆ ಕೈ ಮುಗಿದು
ಪ್ರಶ್ನೆ ಕೇಳುತಲಿರುವೆ ; ನಿನ್ನ ಭಕ್ತಿಯ ಬಗೆದು
ಒರೆಯುತಿರುವಳು ತಾಯಿ ; ನೀನಿಂದು ಅವಿಹತನು ;
ಕೇಳು, ತಿಳಿ, ಒರೆ ಜಗಕೆ, ಹೇ ಶ್ವೇತಕೇತು.

## ಹಿಟ್ಲರ್ ಮಹಾಶಯನನ್ನು ಕುರಿತು

ದೇಶವಾತ್ಸಲ್ಯ, ಓಜಸ್ವಿತೆ, ಜನಪ್ರೇಮ,
ನನ್ನ ನಾಡಿದು ಹಿರಿದು ಎಂಬ ಭಾವನೆ, ಇದನು
ಸಾಧಿಸುವ ಕಾರ್ಯದಲಿ ಎನಿತಾದರೂ ಕದನ
ಮಾಡುವೆನು ಎಂಬ ಛಲ, ಯಾವ ಹೇಮಾಹೇಮಿ
ಮಾರಾಂತರೂ ಪಥವ ಬಿಡೆನು ಎನ್ನುವ ನೇಮ,—
ಈ ಗುಣಗಳನು ತೋರುತಿದೆ ನಿನ್ನ ಮುಖಮುದ್ರೆ,
ಹಿಟ್ಲರ್ ಮಹಾಮಾತ್ರ. ಇರಲಪ್ಪುದೇ ಕ್ಷುದ್ರ
ಭಾವಗಳು ನಿನ್ನಲಿ ? ತೋಳವಾದೆಯ ಭೀಮ ?
ಮುಂಬರಿದರೆಂಬ ಕಾರಣದಿಂದ ಯೇಹೂದ್ಯ
ಜನವ ಹಿಂಸಿಸುತಿರುವೆಯಂತೆ ; ಜಗವೇ ಮೆಚ್ಚಿ
ಪೂಜಿಸುತಲಿರುವ ಐನ್‌ಸ್ಟೈನರನು ಜರ್ಮನಿಗೆ
ಬಾರದವೊಲೆಸಗಿರುವೆಯಂತೆ : ತೌರಿನಮನೆಗೆ
ಬೇಡವಾಯ್ತಾ ಹೆಸರ ಹಿರಿಮೆ. ಸ್ವಾರ್ಥವ ನೆಚ್ಚಿ
ನಿನ್ನಂಥ ವೀರರನ್ಯಾಯಗೆಯ್ವುದು ಚೋದ್ಯ.

## ಐನ್‌ಸ್ಟೈನರನ್ನು ಕುರಿತು

ಗಣಿತಶಾಸ್ತ್ರದಿ ನಿನ್ನ ಬಲುಮೆ ಬಹು ಹಿರಿದೆಂದು
ಬಲ್ಲವರ ನುಡಿಯ ಕೇಳಿಹೆನು ಐನ್‌ಸ್ಟೈನ್‌ವರ್ಯ ;
ಆದರರಿಯೆನು ಅದರ ಪರಿಯ. ನಿನ್ನೈಶ್ವರ್ಯ
ಗಣಿತದಾವರಣದಲಿ ನಿಂತಿಲ್ಲ. ಬಾಳಿಂದ
ಜಗಕೆ ಕಲ್ಯಾಣವನು ತರುವ ತೆರನೇನೆಂದು
ತಿಳಿದಿಹ ಮಹರ್ಷಿ ನೀನು. ಯಾರ ಕೂರ್ನೋಟ,
ಉಳಿದ ಭಾವಕೆ ನಿಲುಕದಿಹ ಅಂಕಗಳ ಕೂಟ
ಮಾಟವನು, ನಾವು ಕಾಗುಣಿತವನು ಅರಿದಂದ
ಅರಿದುದೋ, ಆ ನಿನ್ನ ಬುದ್ಧಿ, ಜರ್ಮನ್ ಜನರ
ಈಗಣವಿವೇಕವರ್ತನೆಯ ಖಂಡಿಸುವಂದು,
ನಿನಗೆ ತಾಳ್ಮೆಯುಸಿತ್ತುದು ; ಹಸಿದ ಜನವಿಂತು
ನಡೆಯುವುದು ಸಹಜ ಎಂದಿತು ; ತನ್ನ ಒಳಗ ನರ
ಸರಿಮಾಡಿಕೊಳುವನಕ ಲೋಕದಲಿ ಅವನಿಂದ
ಒಳಿತಾಗದೆಂದಿತು : ಮಿಗಿಲಿಹುದೆ ಇದಕಿಂತ ?

## ಶ್ರೀ "ಶ್ರೀ"ಯವರನ್ನು ಕುರಿತು

ಆಧುನಿಕ ಕರ್ಣಾಟ ಕಾವ್ಯಕುಲಪತಿ ನೀವು,
ಬೆಳ್ಳೂರ ಮೈಲಾರ ಶ್ರೀಕಂಠ ಗುರುವರ.
ಸಿರಿಗನ್ನಡದೊಳಿನ್ನು ಮುಂದಾರು ಬರೆವರು
ಅವರೆಲ್ಲ ನಿಮ್ಮ ನೆನೆಯುವರು, ಪೂಜೆಯ ಹೂವ
ನಿಮರ್ಗಪಿಸುವರು. ಕನ್ನಡದೊಳಿಂದಾವಾವ
ಕಲಕಂಠ ಕೇಳುತಿದೆ ಅದರ ಗಾನದೊಳೆಲ್ಲ
ತೋರುತಿದೆ ನೀವು ತೆರೆದಾ ನವ್ಯ ಅಕ್ಷುಲ್ಲ
ಧೀರಗತಿ, ಸುವಿಶಾಲ ವಿಶ್ವ ವಿಸ್ತರ ಭಾವ.
ನುಡಿದು ಕಲಿಸಿದಿರಿ; ನುಡಿಯದೆ ಮತ್ತೆ ಕಲಿಸಿದಿರಿ:
ದುಡಿದು ಕಲಿಸಿದಿರಿ; ಮನದರಕೆಗಳನೆಚ್ಚರಿಸಿ
ಎಳೆಯರೆದೆಯಲಿ ಹಾಡುವಾಸೆಯನು ಸುಳಿಸಿದಿರಿ.
ಒಂದೊಂದು ವೇಳೆ ನಿಮ್ಮನು ಕುರಿತು ಮಚ್ಚರಿಸಿ
ನುಡಿಯುವರು ಕೆಲರು ಸೋದರರು; ಅವರೂ ಮುಂದೆ
ತಿಳಿಯುವರು ಕನ್ನಡಕೆ ಕಣ್ವಮುನಿ ನೀವೆಂದು.

## ಶ್ರೀ ಬೇಂದ್ರೆಯವರನ್ನು ಕುರಿತು

ಮಳೆಯ ಹನಿಗಳ ನಡುವೆ ತೂರಿಬಹ ಹೊಂಬಿಸಿಲ
ಬಣ್ಣ ಬಣ್ಣದ ಬೆಳಕ ಒಲುಮೆಯೊಳ್ನುಡಿಯಿಂದ,
ನಿನಗಲ್ಲದಾರಿಗೂ ಬರದ ಗಾರುಡಿಯಿಂದ,
ಹಕ್ಕಿ ಹಾರಿದ ತೆರನ ಹಾಡಿ, ಕವಿತೆಯ ಹೊಸಲ
ನೀದಾಂಟಿ ನಿಂತೆ ಗೆಳೆಯ. ನಿನ್ನ ನುಡಿ ಕುಶಲ;
ಊಹೆ ಸುಂದರ, ಭಾವ ಜಗದಂತೆ ವಿಸ್ತಾರ;
ನಿನ್ನೆಣಿಕೆ ಮಾನವನ ಬಾಳ್ವಿಗೇ ಪ್ರಸ್ತಾರ;
ಕಗ್ಗಲ್ಲಗಿರಿ ನಿನಗೆ ಸೃಷ್ಟಿ ಕಮಲದ ಎಸಳು.
ಮನುಜನಾತ್ಮದ ವೀರಗಾರ, ಧೈರ್ಯದಿ ಬದುಕ
ಕೇತಕಿಯ ಹೊಕ್ಕು ಕೇಸರವ ಮೂಸಿದ ತುಂಬಿ
ತಲೆ ತಿರುಗದಂತಿರುವೆ: ಇಳೆಯ ಪಾಪವ ಕೆದಕಿ
ಅದರ ಹೆಡೆ ಹರಡ ತೋರಿಸುತ, ನಿತ್ಯಾತನ್ದ್ರ
ಮಾಂತ್ರಿಕನು, ಬನ್ನಿ ಇದ ಬಡಿದು ಬದುಕಿರಿ, ಎಂಬ
ಮೋಡಿಯನು ಹಿಡಿದು ಜನವನು ಕರೆಯುತಿಹೆ, ಬೇಂದ್ರೆ.

## ಶ್ರೀ ಶಿವರಾಮ ಕಾರಂತರನ್ನು ಕುರಿತು

ಶಿವರಾಮ ಕಾರಂತ, ಕಡಲ ತೀರದ ನಮ್ಮ
ಭಾರ್ಗವ ತಪೋವನದ ಕಲಿ, ಸರ್ವ ದಮನ,
ಹಿಂಸ್ರ ಜೀವಿಗಳಾರು ಈ ನಾಡಿನಲಿ ತಮ್ಮ
ಕ್ಷುದ್ರತೆಯ ತೆರೆವರವರಿಂಗೆ ನೀನು ಯಮನ
ಮೊಗವ ತೋರುತಲಿರುವೆ. ಅವರ ಬಾಯನು ಹಿರಿದು
ಪಾಪಿ ಹೃದಯದಿ ಧರ್ಮಭೀತಿಯನು ಬಿತ್ತು.
ನಿಜದ ನೀತಿಯ ತೆರನ ಕಂಡು ಹಲ್ಲನು ಕಿರಿದು
ಗರ್ಜಿಸಲಿ ಪಾತಕ; ಕೊಂದ, ನಾ ಸತ್ತೆ,
ಎಂದು ಚೀರಲಿ. ನಮ್ಮ ತಾಯ್ನಾಡು ಇದಕೇಳಿ,
ಭಾಗ್ಯದಧಿದೈವ ಇನ್ನೂ ಬಾರನೇಕೆಂಬ
ಭರದ ಚಿಂತೆಯ ಮಧ್ಯೆ, ಇನಿಸು ಸಂತಸದಾಳಿ
ನಸುನಗಲಿ. ಇದು ನಮ್ಮ ಹೊಸ ಯುಗದ ಆರಂಭ.
ಬರುತಿಹನು ನಮ್ಮೆಡೆಗೆ ಶುಭದರಸು ದುಷ್ಯಂತ:
ಅದರಿಂದಲೇ ನಿನಗೆ ದೌಷ್ಟ್ಯದೊಡನೀ ಪಂಥ.

## ಚಿತ್ರಗುಪ್ತನ ಆವಿರ್ಭಾವ

ಮೂರು ದಿನಗಳ ಹಿಂದೆ ಯಮ, ನಿದ್ದೆ ಕೆಟ್ಟಿದ್ದು,
ಏನು ಗದ್ದಲ ಎಂದ. ಊಳಿಗದ ಜನ, ಒಡೆಯ,
ಇಷ್ಟು ದಿನ ಮೂಕುಬಡಿದಿದ್ದ ಕನ್ನಡ ನುಡಿಯ
ಸೊಕ್ಕು ಮಕ್ಕಳು ಕವಿತೆ ಮಾಳ್ಪರಂತೆ, ಸದ್ದು,
ಎಂದರು. ಜವನದಕೆ, ಈ ಮೂಳರಿಗೆ ಬುದ್ಧಿ
ಯಾವನೂ ಹೇಳನೇ, ಎಂದ. "ಯಾರೋ ಒಬ್ಬ
ನಾವು ಬರೆಯುವುದುಂಟೆ? ಏಕೆ ನಮಗೀ ಕೊಬ್ಬು?
ಎಂದು ಹೇಳುತಲಿಹನು." ಬಂದುದೇ ಪ್ರಾರಬ್ಧ
ಎಂದು ಯಮ, ಕನ್ನಡದಿ ಬರೆವವರಿಗೇ ನರಕ
ಒಂದನಿಲ್ಲಿಯೆ ರಚಿಸಿ, ಚಿತ್ರಗುಪ್ತನ ಕಾರ್ಯ
ಯಾರು ಮಾಡುವರೆಂದು ನೋಡೆ, ಈ ಹರುಮುರುಕು
ಕವಿತೆಗಳ ಹಳಿಯುತಿಹ ನಮ್ಮ ಕವಿಕುಲಬಂಧು
ಒಪ್ಪಿಕೊಂಡನು. ಇನ್ನು ಕಾವ್ಯ ಬರೆಯುವ ಧೈರ್ಯ
ಯಾರಿಗಿದೆ? ಅಂಜಿ ಅರಚುತಿದೆ ಕವಿಗಳ ಮಂದೆ.

## ಸಾಹಿತ್ಯದ ಜೋಯಿಸರಿಗೆ

"ನೂರು ಕಾಲಕು ನಿಲುವ ಕವಿತೆಗಳು ಬರಲಿಲ್ಲ;
ಇಂದಿದ್ದು ನಾಳೆ ಸಾಯುವ ಕೃತಿಯೆ ಹೆಚ್ಚಾಗಿ
ನಾಡ ತುಂಬುತಲಿಹುದು; ಬರಿ ಹುಚ್ಚು ಹುಚ್ಚಾಗಿ
ಕವಿತೆಯನು ಬರೆಯುತಿದೆ ಬರೆವವರ ಕುಲವೆಲ್ಲ"
ಎಂದು ಕಡುನೊಂದು ನುಡಿಯುವರು ಕಾವ್ಯವ ಬಲ್ಲ
ಕೆಲರು ಸೋದರರು. ಇಷ್ಟೇಕೆ ಆತುರ, ಬ[illegible]ು?
ಬರೆಯತೊಡಗಿದ ದಿನವೆ, ಇದು ಉಳಿವುದಿಲ್ಲೆಂದು
ತೊರೆಯಲಾಗುವುದೆ ಕಾವ್ಯವ ನಾವು? ತುಸ ನಿಲ್ಲಿ.
ಮಗುವಿಗಿನ್ನೂ ಮೂರು ದಿನವಿಲ್ಲ. ಜೋಯಿಸರು
ರಚಿಸಬಹುದಿದಕುರಿತು ಇಂದೊಂದು ಜಾತಕ.
ಅದನು ಅಲ್ಪಾಯುವೆಂದರಿತರೂ ಕಾಗದಕೆ
ಅವರು ಅರಿಸಿನ ಹಚ್ಚುವರು; ನಾಳೆ ಈ ಬದುಕು
ಮುಗಿದುಹೋಗುವುದು, ಕಾದಿದೆ ನಿಮಗೆ ಸೂತಕ,
ಎಂದು ಕೂಗುತ ಹೆತ್ತ ಜೀವವನು ನೋಯಿಸರು.

## ಆಂಗ್ಲಭಾಷಾ ಪ್ರವೀಣ ಸೋದರನನ್ನು ಕುರಿತು

ಕನ್ನಡದಿ ನುಡಿಯೆ ಬಾರದು, ಆಂಗ್ಲಭಾಷೆಯಲಿ
ನುಡಿಯುವೆನು ಬರೆಯುವೆನು, ಎಂಬೆನ್ನ ಒಡಹುಟ್ಟಿ,
ಈ ನಾಡು ಬಡತನವ ಸಹಿಸಿ ಹೊಟ್ಟೆಯ ಕಟ್ಟಿ
ನಿನಗೆ ವಿದ್ಯೆಯನು ಕಲಿಸಿದುದಾವ ಆಸೆಯಲಿ?
ಕಳೆಯೇರಲೆಂದಕ್ಕಸಾಲಿಗನ ಮೂಸೆಯಲಿ
ಕಾಯಲಿರಿಸಿದ ಮಿಸುನಿ ಹತ್ತು ಬಣ್ಣವ ಪಡೆದು
ಏನೇನಮಾಡಿದರು ಮೂಸೆಯಡಿಯನು ಬಿಡದೆ
ಕಚ್ಚಿಕೊಂಡಿರೆ, ಗೆಯ್ದುದೆಲ್ಲ ಬರಿ ಘಾಸಿಯಲೆ?
ಬಾ ಬಂಧು, ಯಾವುದನು ಹೇಳಬೇಕೋ ಅದನು
ಬಂದಂತೆ ಹೇಳು, ಕೇಳಲು ನಾಡು ಕಾದಿಹುದು.
ಆಂಗ್ಲಭಾಷೆಯೊಳಾಡಿ ಆಂಗ್ಲರನು ತಣಿಸುವರೆ
ಆಂಗ್ಲಸೇವಕರಿಹರು. ಅರಯಿಸು, ನಾವಿಹುದು
ಈ ನಾಡು ಈ ನುಡಿಯ ಸಲುವಾಗಿ. ನಮ್ಮದನು
ಹಳ್ಳದಲಿ ಬಿಟ್ಟು ಹೆರರೊಪ್ಪಿಗೆಗೆ ದಣಿಯುವರೆ?

## ಬರೆಯುವ ತಮ್ಮನಿಗೆ ಸಮಾಧಾನ

'ನಾನೇನಮಾಡಿದೆನು? ಏಕೆನ್ನ ಬಯ್ಯುವರು?
ಕವಿತೆ ಬರೆವುದೆ ತಪ್ಪೆ?' ಎಂದು ಚಿಂತಿಸಬೇಡ,
ಎಲೆ ತಮ್ಮ. ಬಯ್ಯುವರು ಕಾರಣಗಳನು ನೋಡಿ
ಬಯ್ಯುವರೆ? ಬಯ್ಯಬೇಕೆಂದೊಳಗು ತುಯ್ಯುವುದು;
ಅದರಿಂದ ಬಯ್ಯುವರು. ಇದು ನಾಲಗೆಯ ಚಪಲ.
ಕವಿತೆಯನು ನುಡಿವುದಕೆ ನೀನಾಸೆಪಡುವಂತೆ
ಬಯ್ವುದರೊಳವರಿಗಾಸೆ. ಮಾವ ನೆಡುವಂತೆ
ಬೇವನೂ ನೆಡಬೇಕು; ಇದರ ಎಲೆ ಅದರ ಫಲ
ನಾಡಿನೊಳಗಿರಬೇಕು. ನಿನ್ನ ಬಯ್ದಾ ಮನುಜ
ತಾ ಬಲ್ಲವನು ಎಂದುಕೊಂಬನಲೆ. ಕವಿ ನೀನು,
ಇವನೇಕೆ ಬಯ್ಯುವನು, ಎನ್ನ ಕವಿತೆಯೊಳೇನು
ಇವನ ನೋಯಿಸುತಿಹುದು, ಹಾ ನೊಂದನೇ ಅನುಜ,
ಎಂದು ಕನಿಕರ ತೋರು; ಹಿರಿದಾಗಿ ನೀ ಬೆಳೆವೆ.
ಅವನಿಗಾ ಪುಣ್ಯವಿರೆ ಆ ಮನವನೂ ತೊಳೆವೆ.

## ತರುಣ ವಿಮರ್ಶಕರೊಬ್ಬರನ್ನು ಕುರಿತು

"ನುಡಿ ಸಾಲದವನ ಕವಿತೆಯು ನೋಡಿ" ಎಂದೆನ್ನ
ಅರುಣ ಕಾವ್ಯವ ನೀನು ಜನಕೆ ತೋರಿದೆಯಂತೆ.
ನೀನಾಡಿದುದು ನಿಜದ ನುಡಿ, ತಮ್ಮ. ನಾನಂತೆ
ಕನ್ನಡದ ಮಾತ ಸರಿಯಾಗಿ ಕಲಿಯುವ ಮುನ್ನ
ಬರೆಯ ತೊಡಗಿದೆನು. ಕಲಿತಿರೆ, ಕಾವ್ಯದಲಿ ಬಣ್ಣ
ಇನ್ನಷ್ಟು ತುಂಬುತಿರ್ದುದು, ನಮ್ಮ ಜನ ಮೆಚ್ಚಿ
ನನ್ನಿಂದ ನುಡಿ ಬೆಳೆಯುತಿರ್ದುದಿನ್ನೂ ಹೆಚ್ಚು.
ಆಗಿಹೋದುದಕೆ ಚಿಂತಿಸಲು ಫಲವೇನಿನ್ನು?
ಆದರಿನ್ನೊಂದು ಮಾತಿದೆ. ನಾನು ಇತ್ತೀಚೆ
ಇನಿತನಿತು ಮಾತ ಕಲಿತಿಹೆನು. ಆದರೆ ಭಾವ
ಯಾವಾಗಳೂ ಮಾತಿನಿಂದ ಮುಂಚೆಯೆ ಇಹುದು.
ಮನದೊಳಿಹುದೆಲ್ಲಕೂ ಮಾತಿನಲಿ ಮೆಯ್ಪಹುದು
ಸಾಧ್ಯವಲ್ಲೇನೊ? ಒಳಿತೂ ಅಲ್ಲ. ನುಡಿಯಾಚೆ
ಭಾವವಿಹುದೇ ಕ್ಷೇಮ; ಭಾವದಾಚೆಗೆ ಜೀವ.

## ಸರ್ವವ್ಯಾಪಿಯಾದ ಕವಿತೆ

ನಿಮಗೆ ಈ ಕೆಲಸ ಬೇಸರವಾಗಬೇಕೆಂದು
ಸ್ನೇಹಿತರು ಒಮ್ಮೊಮ್ಮೆ ಹೇಳುವರು ನನಗೆ.
ಕತೆ ಹೇಳಿ ಕವಿತೆಯನು ಒರೆಯುವಾತನಿಗೆ
ಈ ಲೆಕ್ಕ ಕಡತಗಳು, ದಿನದಿರವಿನೀ ಕುಂದು
ಕೊರತೆಗಳು, ರುಚಿಸಲಾರವು, ಮಲರು, ಮಾಕಂದ,
ಚೆಂದಳಿರು ಹೊಂಬಾಳೆ ಗಿಳಿ ನವಿಲು ಕೋಕಿಲ,
ಇವು ಇವನ ಮನದೂಟ, ಈ ನಮ್ಮ ವ್ಯಾಕುಲ
ಸರಳ ಸುಂದರ ಸರಸ ಚೇತನಕೆ ಏಕೆಂದು
ಪ್ರೇಮದಲಿ ಇವರು ನೆನೆಯುವರು. ನಿಜದಲಿ ನೋಡೆ,
ತಳಿರಿನಲಿ ಹೂವಿನಲಿ ಚಿಗುರಿದಿಮ್ಮಾವಿನಲಿ
ಎಂತಂತೆ, ಲೆಕ್ಕ ಕಡತಗಳ ಹಿಂಗಡೆ ಅವಿತು,
ನಮ್ಮ ಹಿಡಿ ಬಾ ಎಂದು ಕರೆಯುತಿವೆ ಕತೆ ಕವಿತೆ.
ಮಾನವನ ಬಾಳು ಸೋಕಿದ ಎಲ್ಲ ತಾವಿನಲಿ
ನೋವು ನಗೆಯುಪವನದಿ ಕಾದಿದೆ ರಸಕ್ರೀಡೆ.

## ಅದೇ ವಿಚಾರ

ಕಡತಗಳ ಹಿಂಗಡೆಯು ಕಾವ್ಯವಲ್ಲದೆ, ಇಲ್ಲಿ
ಏನಗಿಹುದು, ಕವಿಯು ಬಾಳುವೆಗೆ ಇರಲೇ ಬೇಕು
ಎಂದೆಂಬ ತಳಿರು ಮಲರುಗಳ ಸವಿ ರಸಪಾಕ.
ಎತ್ತ ನೋಡಿದರತ್ತ ಹಿರಿಯು ಮರ ಗಿಡ ಬಳ್ಳಿ;
ತುಂಬಿರುವ ನಗರದುಪವನದ ಹಸುರಿನ ಕೊಳ್ಳಿ.
ದೂರದಿಂದೈತಂದು ವನದ ಕುಶಲವ ಕೇಳಿ
ನನ್ನ ಕೋಣೆಗೆ ಬಂಧುವಂತೆ ಸುಳಿಯುವ ಗಾಳಿ
ಲೆಕ್ಕಗಳ ಮಧ್ಯೆ ತರುವುದು ಬಯಲ ತನಿ ಸೊಲ್ಲ.
ಕಾರ್ಯಗೃಹದಂಗಳದ ಈ ಕಿರಿಯ ತೋಟದಲಿ
ರಾಜರುಪವನದೊಂದು ಮಾಟವಿದೆ; ಆತಂಕ
ಇನಿಸ ಕಾಣದೆ ಇಲ್ಲಿ ನಿಂದೆರಡು ದೇವತರು
ಕ್ರಮವರಿತು ಬೆಳೆದು, ನಮ್ಮವರು ಸಂಭಾವಿತರು,
ಎಂದುಸುರುತಿವೆ; ಇಲ್ಲಿ ಇಳಿದು ತಮ್ಮಾಟದಲಿ
ಎನ್ನೊಳುಲಿವುವು ಒಮ್ಮೆ ಗಿಳಿ, ಒಮ್ಮೆ ಗೊರವಂಕ.

## ಒಂದು ಉದಯ

ಇಂದು ಕಾರ್ತೀಕದಾರಂಭದ ತೃತೀಯೆ.
ನಿಂದಿಹುದು ಮಳೆ, ವಾರ ವಾರ ದಿನ ಸುರಿದು ;
ಹಗುರಾಗಿ ನಗುತಿಹುದು ನಭ, ಶೀತ ಮುರಿದು ;
ನೇಸರಿನ ಬೆಳಕಿನಲಿ ಹೊಮ್ಮೆರುಗ ನೇಯೆ
ತೊಡಗಿಹಳು ವರ್ಣಕಲೆಯಲಿ ಕುಶಲೆ ತಾಯಿ
ಪ್ರಕೃತಿದೇವಿ. ಮೂಡಣಿಂದ ಚಳಿಗಾಳಿ
ಬನ್ನಿ ಆಡುವ ಎಂದು ಪೈರುಗಳ ಕೇಳಿ
ಸುಳಿಯುತಿದೆ ಹೊಲಗಳಲಿ. ಏನಿದು ಬಡಾಯಿ,
ತಣ್ಮೆಯ್ಯ ನಿನ್ನೊಡನೆ ಯಾರು ತಾವಾಗಿ
ಆಡುವರು, ಹೋಗು ಹೋಗೆನಗಿಲ್ಲ ವೇಳೆ,
ಎಂದು ಮುಸುಕದೆ ಇಹುದು ತೆನೆಹೊತ್ತು ರಾಗಿ ;
ಇನ್ನೀಗ ಹಸುರೇರಿ ನಿಂತ ಎಳೆಜೋಳ,
ಬೇಕಾದರೂ ಬೇಡ ಬೇಡೆಂಬ ರೀತಿ
ಅದರೊಳಾಡುತ, ಮರೆಸಿ ತೋರುತಿದೆ ಪ್ರೀತಿ.

## ಅದರ ಮಾರನೆಯ ದಿನ

ಸ್ವಲ್ಪ ಮುಂದಾಯಿತಾಗಸ ನಿನ್ನೆ ನಕ್ಕುದು.
ಧಣಿಗೆ ಈ ವರ್ಷ ಕೊಡಲಿದ್ದ ಸಾಲದ ಕಂತ
ಕೊಟ್ಟು, ಭಾರವ ಕಳೆದುಕೊಂಡೆನಂತೂ ಇಂತು;
ಎಂದು ಒಕ್ಕಲು ಹಗುರವಾಗೆ, ಕೊಡತಕ್ಕುದು
ಗಡುವಿನಲಿ ತೆರದುದರ ಬಡ್ಡಿ ಇದು ಮಿಕ್ಕಿದೆ,
ಎಂದು ಹಣವಂತ ಮತ್ತೊಮ್ಮೆ ಬರುವಂದದಲಿ,
ಮರಳಿ ಪಡೆಗೂಡಿರುವ ಮುಗಿಲು ನಿರ್ಬಂಧದಲಿ
ನಭವನು ನಿರೋಧಿಸಿದೆ. ಅತಿಯಾಗಿ ಎಕ್ಕಿದ
ಅರಳೆ ಎಳೆಕರಗಿ ಸೊಪ್ಪಾಗಿ ಸೊರಗುವ ತೆರದೆ,
ಎಡೆಗುಡದೆ ಬಾಧಿಸುವ ಮುಗಿಲಿಂದ ಕಂಗೆಟ್ಟು,
ಉಸಿರಾಡುತಿಹುದೊ ಆಡದೊ ಎಂಬ ಶಂಕೆಯನೆ
ಉಂಟುಮಾಡುತಲಿಹುದು ಆಕಾಶ. ಹಿಂಗಟ್ಟು
ಮುಂಗಟ್ಟು ಹಾಕಿ ಅದರಲಿ ತನ್ನ ಅಂಕೆಯನು
ತೋರುತಿವೆ ನೋಡ ತಾ ಧನಿಯಂದದಲಿ ಮೆರೆದು.

## ಒಂದು ಉದಯವನ್ನು ನೋಡಿ

ರವಿಯೊಡನೆ ಹಸೆಯೇರಿ ಸುಖ ಬೆರೆತ ನಾಣಿಂದ
ಮಿಗಿಲಾದ ಚೆಲುವಿನಲಿ ಕಂಗಳಿಸುತಿರ್ದಳುಷೆ ;
ಇವರ ಪರಿಣಯದ ವಿಭವವ ಹರಸಿ ಎಲ್ಲ ದೆಸೆ
ತೊಳಗಿದುವು, ತಿಮಿರವನು ಚಿಂತೆಯೆನೆ ಮಾಣೆಂದು.
ಆಹ ಏಸಿದು ಚಂದ, ಏನು ಈ ಆನಂದ,
ಎಂದು ನಾ ನಲಿಯುತಿರುವಂದೆ ಮುಗಿದುದು ಹಬ್ಬ ;
ಉಷೆ ಹಸೆಯ ತೊರೆದಳು ; ರವಿ ಒಬ್ಬನೇ ಒಬ್ಬ
ಹೊರಟಿಹನು ದಿನದ ದುಡಿತಕೆ ಪೋಪೆ ನಾನೆಂದು.
ಅಂಥ ಚೆಲುವಿನ ನೋಟ ಇಷ್ಟು ಬೇಗನೆ ಮುಗಿದು
ಮರೆಯಾಯಿತೇ ಎಂದು ಮನದಿ ನೊಂದಿಹೆ ನಾನು,
ಶಾಶ್ವತದ ಲೀಲೆ, ಈ ಮಕ್ಕಳಾಟದ ಮಾಡ
ಎನಿತ ಕಟ್ಟುವುದು, ಎನಿತನು ಮುರಿಯುವುದು, ಏನು,
ಎಂಬುದನು ತಿಳಿದಿಹುದು ಮನ ; ಆದೊಡಿದ ಬಗೆದು
ಒಪ್ಪದಿದೆ : ಓಟದಲಿ ಇನಿಸು ನಿಲವನು ಬೇಡಿ.

## ಇನ್ನೊಂದು ಉದಯ

ಬೆಳೆಯುತಿದೆ ಕಾರ್ತೀಕ. ಬೆಳೆದ ಹೊಲದಲಿ ರಾಗಿ
ತುಂಬಿ ಬರುತಿಹ ಕಾಳ ಬಲ್ಮೆಯಲಿ ಕಳೆಯೇರಿ,
ಸುಖಮೀರಿ ಸೋತು, ಈ ಸಲದ ಬೆಳಸಿನ ಭಾರ
ಇನಿತರೊಳೆ ಇಳಿವುದೆಂಬವೊಲಿಹುದು ನಸುಬಾಗಿ.
ಅಲ್ಲಲ್ಲಿ ಮೇಲೆದ್ದು ನಿಂತ ಜೋಳದಿ ಸೋಗೆ,
ಮಗು ಬೆಳೆದುದು, ಇನ್ನು ದೃಷ್ಟಿ ಭಯ ಇಲ್ಲೆಂದು
ಹಸುಳೆಯನು ಬಿಡುವ ತಾಯಂತೆ, ಬಾ ನಿಲ್ಲೆಂದು
ಗೊಂಡೆಯನು ಹೊರಗೆ ತೋರಿದೆ ತಾನು ಅರುಗಾಗಿ.
ವಿಶ್ವಜೀವನದ ಉಚ್ಛ್ವಾಸ ತುಂಬುತಲಿಹುದು ;
ಸಂವತ್ಸರದ ಫಲದ ಉತ್ಸವದ ಐತರವ
ಎದುರು ನೋಡುತಲಿಹುದು ಎಲ್ಲ ತಾಣದಿ ಪ್ರಕೃತಿ ;
ಎಲ್ಲಿ ನಿಲೆ ಬಹಳ ಚಂದವನು ನೋಡಲು ಬಹುದು
ಎಂದು ಕಾಣದ ತೆರದೆ ಈಶಾನ ನಿಋಋತಿ
ಧನಪುರನಃ ಸಾರುತಿದೆ ತೆಳುವ ಗಾಳಿಯ ಹರಿವು.

## ಮತ್ತೊಂದು ಉದಯ

ಮಳೆ ನಿಂದು ಚಳಿ ಬರುವ ಮೊದಲ ಗಡಿ ದಿವಸವಿದು.
ತೊಳುವಾಗಿ ಸಮನಾಗಿ ನಭದಿ ಹರಡಿದ ಮೋಡ
ನೇಸರನು ಮರೆಯಿಸಿದೆ. ಹಸುರ ಹೊದೆದಿಹ ನಾಡು
ವನದಂತೆ ಬಯಲಿನಲಿ ನೋಟವನು ತಣಿಸುತಿದೆ.
ನಗುತ ಬರುತಿಹ ತುಂಬು ಬೆಳಸ ಕಣ್ಣಾಲೆ ಸವಿದು,
ಬಹದಿವಕೆ ಭಯವಿಲ್ಲ ಎಂದು ಮನ ಹಗುರಾಗಿ,
ಹೊಲದಿಂದ ಹೊಲಕೆ ಮಾತಾಡುವರು ಜನ ಕೂಗಿ.
ಇವರಾತ್ಮವನು ಭೂಮಿ ಸುಲಭದಲೆ ಒಲಿಸುವುದು.
ಘನಿಸಿದಂತಿಹುದು ಮಲವಳಿದು ಅಲೆಯದ ಗಾಳಿ.
ಇಂದು ಇಳಿದಿರಬೇಕು ನೋಡೆ ಲೋಕದ ಭಾರ.
ಇಂದಾದರೂ ಕಾಣಬೇಕು ಮನುಜನ ಬಾಳು
ಶಾಂತಿಯನು. ಎರಡು ಗಾವುದವೆ? ಅರೆಹರಿದಾರಿ
ಎಂಬಂತೆ ಬಳಿಗೆ ಸಾರಿಹುದು ಸಾವನದುರ್ಗ.
ಹುಡುಕಿದೊಡೆ ದೊರೆಯಬೇಕಿಲ್ಲೆ ಎಲ್ಲಿಯೊ ಸ್ವರ್ಗ.

## ಬೆಟ್ಟದಪುರದ ಬೆಟ್ಟವನ್ನು ನೋಡಿ

ಆದಕೊ, ಬೆಟ್ಟದಪುರದ ಬೆಟ್ಟ ತಲೆಯನು ಎತ್ತಿ,
ಸಾರ್ವಭೌಮನ ತೆರದೆ, ತನ್ನಾಶ್ರಯದ ದೇಶ
ಎಂತಿರುವುದೆಂದು ನೋಡುತಲಿಹುದು. ಆಕಾಶ
ಕೊಡೆಯಾಯ್ತದಕೆ. ತನ್ನ ರಾಜಮುದ್ರೆಯನೊತ್ತಿ,
ನಾ ನೋಳ್ಪ ಈ ಎಲ್ಲ ನಾಡು ನನ್ನದು:ಸೊತ್ತು;
ಎಂದುಸುರುತಿದೆ ಗಂಡುಗಲ್ಲಿನೀ ಗಿರಿರಾಶಿ.
ಆಹ! ಏನಿದು? ಮರಳಿ ನೋಡೆ ಬೇರೆಯ ದೇಸಿ
ಕಾಣುತಿದೆ ಇದರ ಭಾವದಲಿ. ಅಂದಾಹೊತ್ತು
ನನ್ನ ನೆರಳಲಿ ಬೆಳೆದು ಬೆಳುಗೊಡೆಯ ಹಿಡಿದೆತ್ತಿ,
ನಾಡನೆಲ್ಲವ ವೀರತನದಿಂದ ಪೊರೆದಾಳಿ,
ಹಗೆಯಾಗಿ ಬಂದವರ ಹೃದಯಗಳ ಹುಲುಸೀಳಿ
ಬಾಳ್ದರಸರೇನಾದರು? ಹೋದರೆಲ್ಲಿತ್ತು?
ಎನುತ ನೋಡುವುದೊ ಗಿರಿ ತುದಿಗಾಲಿನಲಿ ನಿಂದು?
ನೆನೆದು ಮಳೆಯಲಿ, ಬೇಗೆಯಲಿ ಬೆಂದು ನೊಂದು?

## ಬೆಂಗಳೂರನ್ನು ಒಂದು ಸಲ ನೋಡಿದಾಗ

ಲಕ್ಕಸಂದ್ರಕೆ ದಾರಿ ತೋರುವೀ ಕಲ್ಲ ಬಳಿ
ನಿಂತು ನಗರವ ನೋಡು. ಎನಿತಂದವೀ ಹರಹು!
ಮೂರು ಲಕ್ಷಕೆ ಮಿಕ್ಕ ಪ್ರಜೆಯ ಪೊರೆಯುತಲಿರುವ
ಕಲ್ಯಾಣಪುರಿ, ತನ್ನ ಹಿರಿತನವ ಬಲ್ಲವಳು,
ಜಗದೆದುರು ಎಂತು ಗಾಂಭೀರ್ಯದಲಿ ನಿಲ್ಲುವಳು,
ಬೆಡಗ ಮರೆಯದೆ! ಎರಡು ಪಕ್ಕಕೂ ಕೈಚಾಚಿ
ಹಿಡಿದಿರುವಳೆಲ್ಲ ಮಕ್ಕಳನೊಮ್ಮೆಗೇ ಬಾಚಿ
ಮಾತಾಯಿ, ಎಳೆವೆಳಗ ಹೊದೆದೊಂದು ಒಲ್ಲಿವೊಲು.
ಇಷ್ಟು ಸಂಸಾರವನು ಕಟ್ಟಿಕೊಂಡಿಹ ತಾಯ
ಒಲವಿನುಸಿರಂತೆ ಕಪ್ಪುರವಾಗಿ ಹರಿಯುತಿದೆ
ಎಳೆವಗಲ ಮೆಲುಗಾಳಿ. ಮಕ್ಕಳನು ಪೊರೆಯೆಂದು
ಇವಳ ಆತುಮ ನಭವನೇರಿ ನಿತ್ಯಾಮೇಯ
ಶಕ್ತಿಯನು ಕೇಳ್ವಂತೆ, ಹಕ್ಕಿಗಳ ದೊರೆಯೊಂದು
ಆಗಸಕೆ ಹಾರಿ ಕೃಷ್ಣಾ ಎಂದು ಕರೆಯುತಿದೆ.

## ಅದೇ ಸಂದರ್ಭದಲ್ಲಿ

ಕರ್ಣಾಟಕದ ಹೃದಯರತ್ನವಾಗಲಿ ಎಂದು
ನಮ್ಮ ಪುರವನು ಪ್ರತಿಷ್ಠಿಸಿದ ಕೆಂಪೇಗೌಡ
ತಾನರಿತ ನಗರ ನಿರ್ಮಾಪಣ ಕಲಾಪ್ರೌಢಿ
ಎನಿತೆಂದು ತೋರಿದನು. ಭೈರವನ ಮಲೆಯಿಂದ
ಹಲಸೂರ ಕೊನೆಗೆ, ನೈಯಾಳಿಗಿರಿ ತಲೆಯಿಂದ
ರಾಜೋಪವನದ ಶೈಲಕೆ, ನೇಗಿಲನು ಹರಿಸಿ
ನಾಲ್ಕು ಮೂಲೆಗೆ ಕಳಶ ಗುಡಿ ಗೋಪುರವನಿರಿಸಿ,
ಬೆಳೆಯುಲಿದುವರೆಗೆ ಮಂಗಳದೆಮ್ಮ ನೆಲೆ, ಎಂದ.
ನಾಡರಸನಂದು ಹಾಕಿದ ಮೇರೆಗಳ ಮುಟ್ಟಿ
ದೇಶದಿರವಿನ ನಾಡಿಯಾಗಿ, ಮಕ್ಕಳ ಸಲಹಿ,
ಹತ್ತು ದೇಶದ ನಾಲ್ಕು ಹತ್ತು ಭಾಷೆಯ ಜನವ
ಜೊತೆಗೆ ಪುರಿ ಹೊರೆಯುತಿದೆ. ಬೆಳೆಗೆ ನಿನ್ನೀ ಬಲುಹು,
ನಗರವೇ ; ಸುಖ ವಿನಯ ವಿಜ್ಞಾನ ಕಲೆ ಧನವ
ಬಂದ ಜನಕನಿಶ ನೀಡಲಿ ನಿನ್ನ ನೆಲಗಟ್ಟು.

## ಅನಂತಪುರದಲ್ಲಿ ಮಾರ್ಗಶಿರದ ಹುಣ್ಣಿಮೆ

ನನ್ನ ತಾಯ್ನಾಡ ಮೂಗುತಿಯೊ ಸೆರಗಿನ ಮುತ್ತೊ
ಹೆರಳಮಲ್ಲಿಗೆಯೊ ಎಂಬಂತಿಹುದನಂತಪುರ,
ಹುಣ್ಣಿಮೆಯ ಸಂಜೆಯಿಾ ಬೆಳಕಿನಲಿ. ಎಂತವರ
ಮನವನಾದರು ಗೆಲುವ ಚೆಲುವಾಂತುದೀ ಹೊತ್ತು.
ದೂರದಲಿ ಮೂಡಿ ಮೆಲುಮೆಲನೆ ಮೇಲೇರುತ್ತ
ಬುಕ್ಕರಾಯ ಸಮುದ್ರವನು ತನ್ನ ತಾಯ್ ಎಂದೆ
ನೆನೆದು ನಗುವೆಳೆಯುನಂತೆಸೆಯುತಿಹನೀ ಚಂದ್ರ.
ಅಕೊ ಬೆಳ್ಳಿ ಪಡುಗಡೆಗೆ ಮೆಲುಮೆಲನೆ ಸಾಗುತ್ತ.
ಅಂತೆ ನೋಡಲು, ಕಾಂಬರಿತ್ತ ಕುಳಿತಿರುವ ಹೆರೆ
ಇತ್ತ ಕುಳಿತಿಹ ತಾರೆ, ಕೆರೆಯ ರಚಿಸಿದುದಾರಿ
ವೀರ ಬುಕ್ಕರಸ, ಜೀವವ ಧಾರೆಯೆರೆದೊಮ್ಮೆ
ಇದನು ಉಳಿಸಿದ ವೀರಮಾತೆ ಸಿರಿಮುಸಿಲಮ್ಮ,
ಇದ ನೋಡ ಬಂದರೆಂಬಂತೆ. ಸಂತಸ ಮಿಾರಿ
ಬಂಧುಗಳ ನುಡಿಸುವಂತಿವೆ ನಗುವ ಹೊಳಲು ಕೆರೆ.

# ಹಳ್ಳ ಹೊಳೆ

ತಾಳೆ ಈಚಲೆ ವನ; ಕಿರಿಜಾಲಿ ಆವರಿಕೆ
ಎಕ್ಕವೇ ಹಸುರು; ಪ್ರಕೃತಿಯು ಎಲ್ಲ ಐಸಿರಿ
ಹೂವಲಾರದೆ ಹೂತ ಈ ಸ್ವರ್ಣ ಕೇಸರ,
ಬೆಳೆಯಲಾರದೆ ಬೆಳೆಯು ತೊಡಗಿರುವ ಈ ಗರುಕೆ.
ಹರುಷಕಿದು ತಾನೆ? ಆದೊಡೆ ಏನು? ಈ ಸರುಕೆ
ತನಗೆ ಸಾಕೆಂಬಂತೆ, ತನ್ನ ದಾರಿಯು ಕಲ್ಲ
ನುಡಿಸಿ ನಲಿಸುತ, ನಗುತ ಹರಿಯುತಿಹುದೀ ಹಳ್ಳ.
ಎಲ್ಲೆಲ್ಲು ಚೆಲುವಿಹುದು ಬಲ್ಲವನ ಗೋಚರಕೆ.
'ಇರುವ ಚೆಲುವನು ನೋಡು, ಆಯ್ತು ಇನಿಸಿದ ಬೆಳಸು,
ಎಂದು ಹಾಡುತ ಮುಂದೆ ಹರಿಯುತಿಹುದೀ ನೀರು.
ಇದರ ಸಂತಸವೆನ್ನ ಎದೆಗೇರಿ ತುಸ ದೂರ
ಜೊತೆಗೆ ನಡೆವೆನೆ, ನೆಲಕೆ ತನ್ನ ತಂಪನು ತಳಿಸಿ
ಹಳ್ಳ ಹೊಳೆಯಾಗಿಹುದು; ಕಿರಿಜಾಲಿ ಕಸ್ತೂರಿ;
ನಾಡ ನಂದನ ಎನಿಸುತಿಹುದು ಪಚ್ಚೆಯು ಪೈರು.

## ಬಯಲಿನಲ್ಲಿ ಆಗುಂಬೆ

ಮಲೆಯ ತಲೆಯ ಕವಾಟದಾಗುಂಬೆಯಲಿ ನಿಂತು
ನೋಡಿಹೆನು, ಪಡುಗಡಲ ಬಿತ್ತರದ ರಂಗದಲಿ
ಚಣಕೊಂದು ರೂಪಾಂತು ವರ್ಣಗಳ ಹೊಂಗಿನಲಿ
ಮರೆಯುವ ದಿನೇಶನಂದವನು. ಇಂದದಕಿಂತ
ಕಡೆಯಲ್ಲವೆಂಬ ಚಂದವನು ಕಂಗಳ ಮುಂದೆ
ತಂದು ಎನ್ನೆದೆಯ ನಿರ್ಬಂಧಿಸಿದುದೀವೂರ
ಬಯಲಂಚ ಸಂಜೆ. ಹೊಂಬೆಳಗುಗಳ ಕಾವೇರಿ
ವರ್ಣಗಳ ಮಾಲೆಯನು ಧರಿಸಿ ಬಾಂದಳದಿಂದ
ಇಳಿದಿಳೆಯ ತುಂಬಿದಳು. ಎದುರಿನಲಿ, ಒಂದಗಸೆ,
ಬಳಿಯ ಈಚಲು ತಾಳೆಗಳಿಗೆ ಓಲಗವಿತ್ತು,
ಸುತ್ತಿನರಸಾಗೆಸೆಯೆ, ವೆಂಕಟಪ್ಪನ ಚಿತ್ರ
ಯಾವುದೋ ಮುಂದೆ ಬಂದಂತೆ ಕಂಡುದು ಸೊಗಸು.
ಚಿಜ್ಜ್ಯೋತಿ ಹೊಮ್ಮಿರಲು ಒಡಲನೆನವಳಿವಂತೆ
ಪಟದ ಗೆರೆಬಣ್ಣದಂತಾಯ್ತು ಮರಗಳ ಪಂಕ್ತಿ.

## ಹೊರಗು ಒಳಗು

ಹೊರಗಿನಂದಕೆ ಇಂತು ಮನಸೋಲುವೀ ಪ್ರಾಣಿ
ಮರೆಯು ದೈವವನೆಂತು ಕಾಣುವನು, ಎಂದೆನ್ನ
ಹೇಳುವನು ಅಣ್ಣ. ಈ ನೋಟ ಹರಿಯಿಂದನ್ಯ,
ಇದಕೆ ಸೋಲುವುದು ಆತ್ಮದೊಳೊಂದು ನಿತ್ರಾಣ,
ಎಂದು ತೋರುವುದಿಂಥವೇಳೆ. ಜಗ ಉಗ್ರಾಣ,
ನಾನಿಲ್ಲಿ ಕಾಳ ಕದಿಯುತಲಿರುವ ಇಲಿ, ಎಂದು
ಅಂತರ್ಯ ನೋಯುವುದು. ಒಡನೆ, ·ನಾಣುಳಿ ಎಂದು,
ಮುಂದೆ ಬರುವುದು ಬೇರೆಯಾಲೋಚನೆಯ ಶ್ರೇಣಿ.
ಅವರವರು ಕಲಿವುದಕೆ ಅವರವರಿಗಿದೆ ಪಾಠ.
ಹೊರಗ ಮುಗಿಸಿದವರೊಳಗನು ನೋಡುವರು. ಹೊರಗೆ
ತಿಳಿಯುವುದು ಇನಿತಿರಲು ನೋಡಲೇಕೆ ವಿಷಾದ?
ಅಂತರ್ಬಹಿಶ್ಚ ತತ್ಸರ್ವಮೆನ್ನದೆ ವೇದ?
ಹರಿಸೇವೆಯಾಗುವುದು ಚೆಲುವ ನೋಡುವ ನೋಟ,
ಒಳಗೆ ಸಲ್ಲುವುದು ನಾ ಹೊರಗೆ ಪಡುತಿಹ ಬೆರಗು.

## ಜೀವಿಕೆಯೊ ಹರಿಸೇವೆಯೊ ?

ನಾರಾಯಣಾ ಎಂದು ಹರಿಯ ನಾಮವ ಹಾಡಿ
ಬೀದಿಯನು ಸುತ್ತಿ ಜನವಿತ್ತ ಭಿಕ್ಷೆಯ ಕೊಂಡು
ಇದೆ ದೈವಸೇವೆ ಎಂಬವನು, ಗಳಿಸಿದುದುಂಡು,
ಹರಿದಾಸನಹನು. ಇವನಂತೆಯೇ ಓಡಾಡಿ,
ಹೊಟ್ಟೆತುಂಬಲು ದುಡಿಯುತಿಹೆನೆಂಬ ನಾಡಾಡಿ,
ಬರಿಯ ಭಿಕ್ಷುಕನಹನು; ಇವನುಸಿರು ಕಾಳಿಗೆ
ಮಿಾಸಲಾಗುವುದು. ಇವನಿಗೆ ದೈವ ಜೋಳಿಗೆ.
ಅವನ ದೇವರ ಸೇವೆ ಇವನ ಹೊಟ್ಟೆಯ ಪಾಡು.
ಆಡಳಿತದಲಿ ನನಗೆ ಸಂದು ಬಂದಿಹ ಕಾರ್ಯ
ಬರಿಯ ಜೀವಿಕೆಯೆಂದು ನೆನೆಯದಂದದಿ ಬುದ್ಧಿ
ಸತತ ಸರಿಯಾಗಿರಲಿ. ಅನುದಿನದ ಕೆಲಸವಿದ
ನಾ ಗೆಯ್ವ ಸೇವೆಯೆಂದೊಡೆಯನಿಗೆ ಸಲಿಸುವುದು
ಎನಗೆ ಮುಕ್ತಿಯ ದಾರಿ. ಇದ ಮರೆತೆನೇ ಮೊದ್ದು,
ಅಧಿಕಾರ ಹರುಕು ಜೋಳಿಗೆಯ ತುಂಬುವ ಚೌರ್ಯ.

## ದೇಗುಲದ ಪರಿಚಾರಕ

ದೇಗುಲದ ಪರಿಚಾರಕನು, ತನ್ನ ಸರತಿ ದಿನ,
ನೈವೇದ್ಯಕೊಪ್ಪಿಸಿದ ರಾಶಿ ಹುಳಿಯೋಗರವ,
ಇಂದು ಬಿಟ್ಟರೆ ಉಂಟೆ ಎಂದೆಣಿಸಿ, ಮೊರ ಮೊರವ
ತನ್ನ ಮನೆಯುವರು, ನಂಟರು, ತನ್ನನರಿತ ಜನ,
ಯಾರೊ ಅವರಿಗೆ ಕೊಟ್ಟು ಉಳಿದವರ ಮರೆತುದನು
ನೋಡಿರುವಿರಾ ನೀವು? ಅಧಿಕಾರದೊಳಗಿರುತ
ತನ್ನೊಳಿಹ ಶಕ್ತಿ ನಾಡಿನದೆಂಬುದನು ಮರೆತು,
ತಮ್ಮವರಿಗಧಿಕ ವೇತನವೀವ ದುರಿತವನು
ಇದರಿಂದ ಬೇರೆಯೆನ್ನುವುದೆಂತು? ಅಧಿಕಾರಿ,
ಹುಳಿಯೋಗರವನು ಮೊರ ಮೊರದಿ ಕದಿಯುವ ಭರದಿ
ಮರೆಯಬೇಡವೊ, ನೀತಿವಂತ, ಆ ರಾಶಿಯನು
ನಿನ್ನಧೀನಕೆ ಕೊಟ್ಟು ನಂಬಿರುವ ದೇಶವನು.
ಮರೆತೆಯೋ, ದೇವರನು ಮುಟ್ಟದಿರುವುದೆ ದೂರು?
ದುರ್ನಡತೆ ಕೊಚ್ಚದಿರುದೆ ನಿನ್ನ ಬುಡಕೊರೆದು.

## ಗುಡಿಯಮೇಲಣ ಮೇಕೆಯನ್ನು ನೆನೆದು

ಮೂರುಚಪ್ಪಡಿ ನೆಟ್ಟು, ಮೇಲೆ ಒಂದನು ಮುಚ್ಚಿ
ಗೂಡೊಂದ ಮಾಡಿಹರು ; ಒಳಗೆ ಗ್ರಾಮದ ದೇವಿ.
ಗುಡಿಗೆ ದೇವಿಗೆ ನೆರಳಮಾಡಿ ಬೆಳೆದಿದೆ ಬೇವು,
ತನ್ನ ಕಟುಗಂಧವನು ಬಳಿಯ ಗಾಳಿಗೆ ಹಚ್ಚಿ.
ಬೇವಿನಿಂದಾವನೋ ಕಡಿದ ಸೊಪ್ಪನು ಮೇಯ್ದು,
ಗೂಡಮೇಗಡೆ ಪವ್ವಡಿಸಿ, ಮೆಲುಕುಹಾಕುತಾ
ಹೊಟ್ಟೆ ತುಂಬಿದ ಸುಖದೊಳಿದೆ ಒಂದು ಮೇಕೆ. ಹಾ
ಆಡೆ, ನೀನರಿಯೆ ದಿನ ಕಳೆಯೆ ನಿನ್ನನು ಕೊಯ್ದು
ನಿನ್ನ ಪೀಠದ ಕೆಳಗೆ ಕುಳಿತಿರುವ ಮಾರಿಗೆ
ಬಲಿಮಾಳ್ಪರೆಂಬುದನು. ನೋಡುವೊಡೆ ಪಶುವೊಳಿದು
ಅಚ್ಚರಿಯೆ? ಮನುಜರುನ್ನತ ಪೀಠಗಳನೇರಿ,
ಬುಡದ ದೇವರ ಮರೆತು, ಅವನ ಕೊಡೆಯಡಿ ಬೆಳೆದು,
ತುಂಬುಸುಖದೊಳಗಿರುವರಲೆ. ಅವರೊಳಾರಿಗೆ
ಕಾಣುತಿದೆ ಮೇಲ್ವಾಯ್ದು ಬರುತಿಹುದು ಹೆಮ್ಮಾರಿ ?

# ಮತಗಳ ಮೈತ್ರಿ

ನಿಜವೆನಗೆ ಗುರು ಪರಬ್ರಹ್ಮ ಶಂಕರನ ಮತ ;
ನಿಜವೆನಗೆ ಗುರುದೇವ ರಾಮಾನುಜನ ಭಾವ ;
ನಿಜ ಅಂತೆ ಮಧ್ವಗುರುರಾಯ ಮಾಡಿದ, ಜೀವ
ಪರಮಾತ್ಮದಿಂದ ಪ್ರತ್ಯೇಕ, ಎಂಬಾ ಪ್ರಮಿತಿ.
ಒಂದೆ ಪರತತ್ತ್ವ ತನ್ನಿಚ್ಛೆಯಲಿ ಈ ಅಮಿತ
ಲೋಕವಾಗಿಹುದು ಎನಲೇನು? ಅದರಲಿ ನೀನು
ಅಂಗ ಎನಲೇನು? ನೀನದು ಅಲ್ಲ ಎನಲೇನು?
ಈ ಮೂರು ಮಾತಿನಲಿ ನನಗೆ ಕಾಂಬುದು ಸಮತೆ.
ನಾನು ಅಲೆ, ಹರಿ ಜಲಧಿ, ಎಂದ ಮಾತಲಿ ನೋಡೆ
ಈ ಮೂರು ಭಾವವೂ ಸೇರಿಹವು. ಸಾಗರದಿ
ಅಲೆಯಂತೆ ನಮ್ಮಾತ್ಮವಿಹುದು ಬರಿಯಾಕಾರ,
ಆದರೂ ದಿಟ, ಅಂತೆ ಅದರಿಂದ ತಾ ಬೇರೆ.
ಮೈತ್ರಿಯಿಂದರಿವುದನು ಬಿಟ್ಟು, ಮಾತನು ಕಾಡಿ,
ಏಕೆ ಸಿಲುಕಿಸಲಿ ಮನವನು ವಾದವಾಗುರದಿ.

## ಸೂತ್ರಗಳ ಜಗಳ

ರಾಜನೋಲಗದಿ ಮಂತ್ರಿಗೆ ನಮಸ್ಕೃತಿಯಿಲ್ಲ,
ದೈವಸಾನ್ನಿಧ್ಯದಲಿ ರಾಜನೂ ಕಿರಿಯ ;
ಹಿರಿಯ ಸೂತ್ರದ ಮುಂದೆ ಕಿರಿಯ ಸೂತ್ರಗಳೆಲ್ಲ
ಅರುಗಾಗುವುವು, ಇದನು ಮೂರ್ಖನೂ ಮರೆಯ ;
ಮನುಜನಲಿ ಮುಖ್ಯವಾದುದು ಆತ್ಮ, ಮೆಯ್ಯಲ್ಲ,
ಎಂದು ಹಿರಿಯರು ನಮಗೆ ಹೇಳುವರು ನಿತ್ಯ;
ದೇಹಶುದ್ಧಿಗೆ ಮನದ ಶುದ್ಧಿ ಮಿಗಿಲೆಂದೆಲ್ಲ
ಸಾರುವರು, ನಾವೆಲ್ಲ ಬಲ್ಲೆವಿದು ಸತ್ಯ.
ಆದರೂ, ನಿನ್ನ ಮನವೆಂತಿದ್ದರೂ ಸರಿಯೆ
ಹೊಲೆಯನಾದರೆ ಬಳಿಗೆ ತರಬೇಡ ಒಡಲ,
ಎಂದು ಸೋದರ ಜನರನಟ್ಟುತಿರುವೆವು ದೂರ ;
ಆತ್ಮ ಹೊಲೆಯಾಯ್ತುಮಗೆ ಆ ಗೂಡ ಸೇರಿ.
ಲೋಕಕಲ್ಯಾಣಲತೆಗೀ ನಡತೆ ಕೊಡಲಿ,
ಎಂದು ತಿಳಿಯದ ಮನುಜನವನೆಂತ ಹಿರಿಯ ?

## ನೀರಮೇಲಣ ಹಾವಸೆ

ನಂದನರ ಚರಿತೆ, ಮಾದಾರ ಚನ್ನಯನ ಕತೆ,
ತಿರುಪಾಣಿಯಾಳ್ವಾರ ಇತಿಹಾಸವನು ಕೇಳಿ,
ದೇವನಿಗೆ ತನ್ನ ನಂಬಿದ ಎಲ್ಲ ಪ್ರಣತಾಳಿ
ಪ್ರಿಯವೆಂಬುದನು ತಿಳಿದು, ನಮ್ಮ ಹೃದಯದ ರಕುತ
ನಲಿಯುವುದು. ಆದರೇನಾಯ್ತು ? ಅಂದಿನ ಭಕುತ
ಅಂದು ದೇವನ ಮೆಚ್ಚಿಸಿದನು ; ಅಂದಿನ ಮಂದಿ
ಕೌತುಕವ ನೋಡಿ ಪರಮಾತ್ಮನಿಳೆಗೇ ತಂದೆ
ಎಂದು ತಿಳಿದರು ; ಅಂದಿಗೇ ಮುಗಿಯಿತಾ ಮುಕುತಿ.
ನೀರಮೇಲಣ ಹಾವಸೆಯ ರೀತಿ ಅಜ್ಞಾನ
ಕಲಕಿದಾಕ್ಷಣಕೆ ತೆರವಹುದು, ಬಿಡೆ ಒಂದಿಗೇ
ಮುಚ್ಚಿಕೊಂಬುದು, ಎಂಬ ಗುರುವಾಕ್ಯ ನಿಜವೆನಿಸಿ,
ಕುಲದ ಹೆಮ್ಮೆಯು ಕಾಲಕೂಟ ಮತ್ತೂ ಜನಿಸಿ
" ಹೊಲೆಯರನು ಒಲ್ಲೆ" ಎನುತಿದೆ. ಇನ್ನು ತಿರುಪಾಣಿ
ಚೆನ್ನನಂದನರ ಕುಲ ಬೇಡವೇ ತಂದೆಗೆ ?

# ಹೃದಯ ಮರುಭೂಮಿ

"ಗಾಂಧೀಜಿ ಬರಲಿ ಯಾರೇ ಬರಲಿ ನಮಗೇನು?
ಈ ಸನಾತನ ಧರ್ಮವನು ನಾವು ಬಿಡುವೆವೇ?
ದೇವರೆಡೆ ಬರುವ ಅಧಿಕಾರವನು ಕೊಡುವೆವೇ
ಹೊಲೆಯರಿಗೆ? ಕೊಟ್ಟೆವೇ ಈ ಮತಕೆ ತಲೆಬೇನೆ
ಬಾರದೇ? ಸಮನಾಗಬೇಕೆನೆ ಮುಸಲ್ಮಾನ
ಕ್ರೈಸ್ತಧರ್ಮಕೆ ಹೋಗಲಿ. ನಾವು ಉತ್ತಮರು,
ಇವರೆಮಗೆ ಜೊತೆಯಲ್ಲ, ನಮ್ಮ ಮತ ಸತ್ತಮರ,
ಬೆಳೆವುದಕೆ ಹೂವುದಕೆ ಇಲ್ಲ ಇದರಲಿ ಪ್ರಾಣ:"
ಎಂಬಂತೆ ನಡೆಯುತಿಹರೆಮ್ಮ ಹಿರಿಯರು ಇಂದು.
ಜಗವ ಪಾವನಮಾಡಬಲ್ಲ ಧರ್ಮದ ಗಂಗೆ
ಮನೆಯ ಬಾವಿಗೆ ಕಡಿಮೆಯಾಯ್ತು. ಇದರಲಿ ಮಿಂದು
ಹೊಲೆಹರಿವ ಮಾತೇನು, ಅದರಿಂದ ಇದಕೆ ಹೊಲೆ
ತಾಗುವುದು ಎಂಬಂದು? ಮತದ ನದಿಯುದಕದಲಿ
ಒಂದು ತೊಟ್ಟುಳಿದಿಲ್ಲ, ನಮ್ಮ ಹೃದಯದೊಳಿಂಗಿ.

## ಶ್ರೀ ವಿವೇಕಾನಂದರ ಕೋಣೆಯನ್ನು ನೋಡಿ

ಇಲ್ಲಿ ಕುಳಿತಿರ್ದನೇ ಗುರು ವಿವೇಕಾನಂದ?
ಇಲ್ಲಿ ನುಡಿದನೆ? ಇಲ್ಲಿ ನಡೆದನೇ? ನೋಡಿದನೆ?
ಇಲ್ಲಿ ತನ್ನಾ ಮಿಂಚು ಗುಡುಗಾಟ ಆಡಿದನೆ!
ಇಲ್ಲಿ ಭಾರತದ ಕೀರ್ತಿಜ್ಯೋತಿ ತಾ ನಂದಿ
ಮರೆದನೇ ಬ್ರಹ್ಮದಲಿ ಬೆಳಗಿ? ತಾಯೇ ನೊಂದೆ.
ಆದರೇನೌ? ಮರಳಿ ಬಾರದಿಹನೇ ಮಗನು?
ಮರಳಿ ನೀನಣಿಮಾಡಿಕೊಡುವ ಒಡಲನು ಹೊಗನೆ?
ನಿನ್ನಳಲ ಮರೆಯಬಲ್ಲನೆ ದಿವದೊಳೇ ನಿಂದು?
ಕಾದಿಹುದು ಅದೆ ಪೀಠ, ಅದೆ ವಸ್ತ್ರ, ಅದೆ ತಲ್ಪ;
ಕಾದಿಹುದು ಅದೆ ನಾಡು, ಅದೆ ಜನತೆ, ಅದೆ ನೋವು.
ಇದ ತನ್ನದೆಂಬ ಮುನ್ನವೆ ನಮ್ಮ ನೆಲಕಿಳಿದ
ಆ ಕರುಣೆ, ಒಮ್ಮೆ ತನತೆಂದ ಭೂಮಿಗೆ ಸುಳಿದು
ಬಾರದಿರುವುದೆ ಮತ್ತೆ? ಆಗುತಿದೆ ಸಂಕಲ್ಪ:
ಇನ್ನೊಮ್ಮೆ ನಮ್ಮ ಸಾರುವುದು ಆ ಹಿರಿಜೀವ.

## ದಕ್ಷಿಣೇಶ್ವರದ ದೇವಿಯನ್ನು ಕುರಿತು

ಭವತಾರಿಣೀ ಮಾತೆ, ದೇವಿ, ಮಹಾಮಾಯೆ,
ಶ್ರೀ ರಾಮಕೃಷ್ಣ ಗುರುವರನಂದು ಅರ್ಚಿಸಿದ,
ಅವನ ಚೇತನವ ಮುಕ್ತಿಯು ನೆಲೆಗಮರ್ಚಿಸಿದ,
ನಿನ್ನ ಆನಂದಮೂರ್ತಿಯ ನೋಡಿದೆನು ತಾಯೆ.
ಧನ್ಯವಾಯಿತು ನೋಟ. ಭಾವಮೂಕತೆ ಬಾಯ
ಮುಚ್ಚಿರುವುದೀಗ; ಕಣ್ಣಲಿ ನೀರು ತುಂಬಿಹುದು;
ನೀನೆ ಗತಿಯೆಂದು ಮನ ಕ್ಷಣಮಾತ್ರ ನಂಬಿಹುದು;
ಎನ್ನನುದ್ಧರಿಸು ದೇವಿ ತಾಯೆ ನಿರಪಾಯೆ.
ನೀನಿತ್ತ ಮೆಯ್ಯ ರತ್ನದ ಪಂಜರದೊಳಿರುತ,
ಎನ್ನುಸಿರ ಬಿಳಿಯ ಗಿಳಿ ರಕ್ತವರ್ಣಕೆ ಬೆಳೆದು
ರೂಪ ಮೃಗತೃಷ್ಣೆಯಲಿ ತೊಳಲುತಿದೆಯೌ; ಎನ್ನ
ಆಸೆಗಳ ತೊಳೆ ದೇವಿ, ತೊಳೆಯೌವ ಕಣ್ಣ.
ಎಲ ಹೆಣ್ಣಾಕೃತಿಯೊಳಿಂತೆಯೇ ಹೊಳೆದು
ಪೂಜೆಯನೆ ಸಲಿಸಿಕೊಳು ಎನ್ನಿಂದ ನಿರುತ.

## ಭಾರತವರ್ಷವನ್ನು ಕುರಿತು

ಓ ನನ್ನ ತಾಯೆ, ಭಾರತವರ್ಷವೇ, ನಿನ್ನ
ಪೂರ್ವದೈಶ್ವರ್ಯವನು ನೆನೆಯೆ ನನ್ನೆದೆಯುಬ್ಬಿ
ಹೆಮ್ಮೆಯಲಿ ಬೀಗುವುದು ; ಒಡನೆ ಮನದಲಿ ಮಬ್ಬು
ಕವಿಸುವುದು ದೇವಿ ಈ ಬಾಳಿನಿಂದಿನ್ನ ಬನ್ನ.
ಅಂದು ಮುಗಿಲನು ಮುಟ್ಟಿ, ಮೂರು ಲೋಕದ ಕಣ್ಣ
ತೆನ್ನೆಡೆಗೆ ಸೆಳೆದು, ಸ್ವರ್ಗವನು ಭೂಮಿಗೆ ದತ್ತು
ಮಾಡಿತಂದಾ ನಿನ್ನ ನೂರ್ಮೊಗದ ಸಂಪತ್ತು
ಏನಾಯಿತೌ ? ಎತ್ತ ಹೋಯ್ತು ಕೀರ್ತಿಯ ಜೊನ್ನ ?
ಮರಳಿ ಬರುವುದು ಎಂದು ತಾಯೆ ಆ ಸಿತಪಕ್ಷ?
ಮರಳಿ ನೀ ಅಂದಿನವೊಲೆಂದು ನಿನ್ನೀ ಹಸಿದ
ಮಕ್ಕಳನು ಜಸದ ಬೆಳುದಿಂಗಳಲಿ ಕುಳ್ಳಿರಿಸಿ
ಆ ಶಾಸ್ತ್ರ ಸಂಗೀತ ಕಾವ್ಯ ಕಲೆಗಳ ರಸದ
ಸವಿತುತ್ತನುಣಿಸುವೆ ? ಎಂದು, ಹಾಕುವೆ ರಕ್ಷೆ,
ಎಂದೆಂದಿಗೂ ಸುಖಿಸಿ ಎಂದು ನಮ್ಮನು ಹರಸಿ ?

# ಕವಿತೆಯ ಪಕ್ಷಿ

ಎಣಿಸಿದುದು ನಡೆಯದಿದೆ. ಎಣಿಸದಿಹುದಾವುದೋ
ತಾನಾಗಿ ಇಂದೆನ್ನ ಕೈಯಿಂದ ನಡೆಯುತಿದೆ;
ಅರಿಯಾದ ಕೆಲಸ ಮುಂಬರಿಯದೊಲು ತಡೆಯುತಿದೆ.
ಎನ್ನ ಮನಸಿನ ಲತೆಯೊಳಿದು ಏನು ಹೂವುದೋ,
ಎನ್ನ ನುಡಿಯಲಿ ರೂಪುಗೊಂಡೇನು ನೋವುದೋ,
ಇದನೆಲ್ಲ ನಾನೆ ತರಲಿಲ್ಲಿನ್ನ ಬಾಳುವೆಗೆ.
ಹಾಡ ರಚಿಸಿದ ಹೆಮ್ಮೆಯೇತಕೆ ಕುಶೀಲವಗೆ?
ರಚಿಸಿದವನಿಹನು ಗಾಯನ ಕಲಾ ಕೋವಿದ.
ಹತ್ತು ರೀತಿಯ ಹಕ್ಕಿ ನಿಲುವುದಕ್ಕೆ ಬೀಡಾಗಿ
ನಿಂತ ಮರವನು ನೋಡು. ಅದಕೊಂದು ದನಿಯಿಹುದೆ?
ಆದರೂ ಉದಯದಲಿ ಸಂಜೆಯಲಿ ಅದರಿಂದ
ಕೇಳುವುದು ಹಕ್ಕಿಗಳ ಗುಂಪುದನಿ ಹಾಡಾಗಿ.
ಈ ಬಾಳ ಮರನೆನಿಸಿ, ಭಾವಸಂಕುಲ ಬಂದು,
ಇರುತ ಹಾರುತ ಇಚ್ಛೆಯಂತೆ ಹಾಡುತಲಿಹುದು.

## ಈ ಕವಿತೆ

ಹರಕೆಗೆಂದಂದು ತರಿಸಿದ ಕುರಿಯನಿವನಿಂದು
ಮೇಕೆ ಮಾಡಿದನೆಂದು, ಸಂನ್ಯಾಸಿಯಾದ ಬಕ
ಇಂದಹಲ್ಯಾರೂಪಿಯಾಯ್ತೆಂದು, ಕ್ರೀಸ್ತಶಕ
ಇಂಥ ವರ್ಷದ ಇಂಥ ಆಂಗ್ಲೇಯ ಕವಿಯಿಂದ
ಇದನು ತಂದಿಹನು, ಈ ಜಳ್ಳು ಗೋದುಮೆ ತಿಂದು
ನಾವು ಬದುಕುವುದೇನು ಎಂದು, ನಾ ಬರೆದಿಡನು
ಹಳಿದೆಸೆಯ ಬೇಡಿ ತಮ್ಮಾ. ಹಿರಿಯರೊರೆದುದನು
ಕೇಳಿಹೆನು ನಿಜ, ನಾನು ಬೆಳೆದಿಹೆನು ಅವರಿಂದ.
ಆದರೂ ಈ ಮಾತು ಯಾವುದೂ, ಹಿರಿಯರನು
ಅನುಕರಿಸಲೆಂದು ನುಡಿದುದು ಅಲ್ಲ, ಬಾಳ್ವೆಯಲಿ
ಕಲಿತ ತಿಳಿವನು ಬಿತ್ತಿ ನಾನು ಬೆಳೆಸಿದ ಕಾಳು.
ಸತ್ತ್ವವಿಹುದೋ ಇಲ್ಲಿ, ಇಲ್ಲ ಇದು ಬರಿಜಾಳೊ,
ಹೇಳುವನು ನಾನಲ್ಲ. ನೋಡಿರಿದ ತಾಳ್ಮೆಯಲಿ.
ಆಮೇಲೆ, ನಿಮ್ಮೊಳಿಹುದೇನತ್ತ ಸರಿಯಿರೆನಿ.

## ಕವಿಗುರುಗಳುಪದೇಶ

ಕವಿಗುರುಗಳೆಮಗೆ ಕಲಿಸುವುದು ಬರಿ ಒಂದು ನುಡಿ
ಒಂದುಪಮೆ ಒಂದು ಚಿತ್ತಾರ ಮಾತ್ರವನಲ್ಲ ;
ಅವರೆಳೆದ ದಾರಿಯಲಿ ನಡೆವವಗೆ, ಸವಿ ಸೊಲ್ಲು,
ತಗುವ ಉಪಮಾನ, ಬಣ್ಣದ ಚಿತ್ರ, ನಿಂತ ಕಡೆ
ಕೈಗೆ ಬರುವುವು ; ಅವರ ಮಂತ್ರವನು ಹೊಂದಿದೊಡೆ
ಮೂಕ ಮಂಕಾಗಿರ್ದ ಭಾವ, ಜೀವದಬಿಲ್ಲ
ಬಾಗಿಸುತ, ಬಿಡಬಹುದು ಬರಿದೊಂದು ನುಡಿ ಹುಲ್ಲ.
ಇಲ್ಲವಾ ನುಡಿಗೆ ಲೋಕದಲಿ ನಿರ್ಬಂಧ ತಡೆ.
ದಿವ್ಯ ದೃಷ್ಟಿಯ ಪಡೆದು ವಿಶ್ವರೂಪವ ಕಂಡ
ಫಲುಗುಣನವೊಲು, ಕಾವ್ಯಗುರುವಿನೊಲುಮೆಯ ಪಡೆದ
ನರನು, ಅಂದೇ ತನ್ನ ಬಳಸಿರುವ ಸೃಷ್ಟಿಯಲಿ
ಚೆಲುವ ಕಾಣುತ ಬಣ್ಣಿಪನು ಮಾತವೃಷ್ಟಿಯಲಿ.
ಹಿರಿಯರನು ಅನುಸರಿಸಿ ಬಾಳತೊಲೆಯನು ಕೊಡೆದು
ತನ್ನನೇ ಹಾಡುವುದು ಕಾವ್ಯದೆಳೆಜೀರುಂಡೆ.

## ಭಾಷಾ ಬಂಧುಗಳಲ್ಲಿ

ಒಳ್ಳಿದನು ಹೇಳಿ ಕೇಳುವೆನು; ಕೆಟ್ಟುದ ಹೇಳಿ
ಕೇಳುವೆನು. ನನಗಿಲ್ಲ ಕನ್ನಡದ ಜನ ಹೊರತು
ಬೇರೆ ಓದುವ ಜನತೆ. ನಿಮಗಾದರೋ, ನುರಿತು
ಮಾತಿನಲಿ ಚೆಲುವ ತರುವವರು ನೂರಕೆ ಮೇಲೆ
ಕಾದಿಹರು. ನನ್ನ ಒಂದೆರಡು ನುಡಿ ಅಲೆತೇಲಿ
ನಿಮ್ಮ ಮನವನು ಮುಟ್ಟಿತೇ ನಾನು ಕೃತಿಯಾದೆ.
ಅಂತರ್ಯದಲಿ ಹುಡುಕಿದೊಡೆ ಇದಕೆ ಅತಿಯಾದ
ಆಸೆಯೇ ಎನಗಿಲ್ಲ, ಬಿಚ್ಚಿ ನುಡಿವೆನು ಕೇಳಿ.
ಇಂತುಂಟೆ, ಬೇರಾಸೆ ಇರಬೇಕು, ಎಂಬಿರೋ,
ಇರುವುದಿದು ಒಂದು. ಕಿರಿದೀತನನುಭವ ಅರಿವು,
ಆದೊಡೆಯು ನಾಡು ನುಡಿಗಳ ಸೇವೆಯಲಿ ಅದನು
ವಂಚಿಸದೆ ನುಡಿದನು, ತಾ ಬೆಳೆದು ಬೆಳೆವುದನು
ನಡೆಸಿದನು, ಎಂದು ನುಡಿಯುರಿ ; ನಿಮ್ಮ ಕನಿಕರವು
ನನ್ನಾಸೆಯಾಳವನು ತುಂಬುವುದು ; ನಂಬಿರಿ.

## ತಂದೆಯ ಸಾವನ್ನು ನೆನೆದು

ಅಖಿಲಾಂಡಕೋಟಿ ಬ್ರಹ್ಮಾಂಡವನು ಪೊರೆವವನು,
ಶ್ರೀನಿವಾಸನು, ನಿನ್ನ ಮಕ್ಕಳನು ನಿನ್ನನೂ
ಪೊರೆಯದಿರುವನೆ ಸುಮ್ಮನಿರು, ಎಂದು ಕಣ್ಣನು
ಮುಚ್ಚಿಕೊಂಡರು ತಂದೆ. ಈ ಬಾಳ ತೊರೆವವನು
ನಿಶ್ಚಿಂತನಾಗಿ ಹೋಗಲಿ ಎಂದು ಬಿಡದಂತೆ,
ನಮಗಾರು ಗತಿಯೆಂದು ತಾಯಿ ಚಾಪಲ್ಯದಲಿ
ಕೇಳಿದರು; ಅವರಿಂತು ಹೇಳಿದರು. ಬಾಲ್ಯದಲಿ
ತಂದೆಯನು ಕಳೆದುಕೊಂಬೆಳೆಯರಿಗೆ ಕೆಡದಂಥ
ಒಂದು ಆಸ್ತಿಯನು ಇವರಿಂದ ಕೊಡಿಸುವ, ಎಂದು
ತಾಯಿ ಕೇಳಿದರೆನಲು ತಪ್ಪಾಗದಾ ಎಣಿಕೆ.
ತಂದೆ ಅಂದಾಡಿದಾ ನಂಬುನುಡಿ ಚಣಚಣಕೆ
ಎನ್ನ ಜೊತೆಯಲಿ ಬೆಳೆದು ಹಿರಿದಾಗಿರುವುದಿಂದು.
ಬ್ರಹ್ಮಾಂಡಗಳನು ಪೊರೆವವನೆಮ್ಮ ತೊರೆಯದೆ
ಪೊರೆದನಿದುವರೆಗೆ, ಪೊರೆವನು ಮುಂದೆ ಮರೆಯದೆ.

## ಗಜೇಂದ್ರ ಮೋಕ್ಷ

ಆದಿಮೂಲನು ನೀನು ಮಾನವನ ಬಾಳುವೆಗೆ ;
ಕಾಲನಿಟ್ಟ ಹನವನು ಸಂಸ್ಕೃತಿಯ ಸರಸಿಯಲಿ ;
ಹಿಡಿದಿರುವುದವನಡಿಯ ನಿರ್ಕಳದ ಕೋಳಬಗೆ,
ನೂರಾರು ತಲೆಮಾರು ಕರಣಗಳ ಪರಿಸೆಯಲಿ
ಆತ್ಮಚೂಡಾಮಣಿಯ ನಾಸೆಗಳ ಕಳ್ಳನಿಗೆ
ತೆತ್ತು ತಿಳಿಯದೆ ನಿಂತ ಗಾವಿಲತೆಯುರುವೊತ್ತು.
ನೀ ಕೈಯ ಬಿಟ್ಟಯೋ ಬೇರೆ ಗತಿಯಿಲ್ಲೆನಗೆ.
ನಿನ್ನಿಂದ ಹೊರಟ ಈ ಜೀವ ಕತ್ತಲಿನತ್ತ
ಹೋಗುತಿರೆ ಅದನು ನೋಡುತ ಸುಮ್ಮನಿರುವರೆ?
ಸರಸಪಾಟಕೆ ಸಮಯವಲ್ಲ ಇದು ನನ್ನರಸ;
ಅಂತರ್ಯದೊಳಗಿರುವ ಸ್ವಾಮಿ, ತಾರಕಶಕ್ತಿ,
ರಭಸದಲಿ ತಿರುಗಿತ್ತ ; ನನ್ನ ಪೊರೆವ ಪ್ರಸಕ್ತಿ
ಬಂದಿಹುದು ; ವಾಸನಾ ಪ್ರಾರಬ್ಧವನು ಹರಿಸಿ
ನಿನ್ನ ಸೇವೆಗೆ ನನ್ನನುಳಿಸಿಕೊಳು ಹರಿ, ದೊರೆ.

## ನರಸಿಂಹಾವತಾರ

ಸಿಡಿಲಿನಂದದಿ ಬಡಿದು ಎದೆಯುಕ್ಕ ಕಂಬವನು
ಒಡೆದು ನೀ ಬಾರದಿರೆ ಭಕ್ತಿ ಉಳಿಯುವುದೆಂತು?
ಬದುಕನುದ್ಭ್ರಮೆಗೊಳಿಪ ಭೀಷಣಾಕೃತಿಯಾಂತು
ಐಸಿರಿಯ ಕರುಳ ಬಗಿಯದೆ ಬಿಡಲು, ನಂಬುವನೆ
ಮಾನವನು ನಿನ್ನ? ಜಗದಲಿ ತನ್ನ ಬಿಂಬವನೆ
ನೋಡಿ ಉಬ್ಬುವನು ; ಓ ಎನಗಾರು ಸರಿಯೆಂದು,
ತನ್ನ ಬಾಳಿನ್ನೆಲ್ಲ ಬಾಳಿಗೂ ಒರೆಯೆಂದು,
ತೂತಾದ ತನ್ನ ಜಂಭದ ಮೊಗೆಯ ತುಂಬುವನು.
ದೇವರನು ನಂಬಬೇಕೆಂದು ಒಂದೆಡೆ ಮನಸು ;
ಬಾಳು ಸುಖವಾಗಿಹುದು, ಇನ್ನು ದೇವರು ಏನು,
ಎಂದು ಸಂದೇಹ ಒಂದೆಡೆ ; ಬುದ್ಧಿ ಹಟವಾರಿ :
ಎದೆಯ ನಡುಗಿಸದೆ, ನಾನೊಪ್ಪಿರುವ ಸೊಗಗನಸು
ನೀರ್ಗುಳ್ಳೆಯೆಂದು ತೋರಿಸದೆ, ಬಿಟ್ಟೊಡೆ ನಾನು
ನಿನ್ನೆಡೆಗೆ ಮೊಗದಿರುಹಲಿಹುದೆ ಬೇರೆಯ ದಾರಿ?

## ಶರಣಾಗತಿ

ಎನಗೆ ನೀನೇ ದಿಕ್ಕು; ಈ ಬಾಳ ಮೊದಲು ಕೊನೆ
ಎಲ್ಲವೂ ನಿನ್ನೊಳಿವೆ; ಇದರಾಟವೆಲ್ಲವನು
ನಡೆಸುತಿರುವನು ನೀನು; ಇದ ನಡೆಸಬಲ್ಲವನು
ನೀನಲ್ಲದಿಲ್ಲ; ಪಯಣದ ನೋವು ನಗೆಯು ಹೊಣೆ
ನಿನ್ನ ಸೇರಿಹುದು; ಎನ್ನಿರವೆಂಬ ಉಸಿರದೊಣೆ
ಕಲ್ಲಮಧ್ಯದಿ ನಿನ್ನ ಕರುಣೆ ತುಂಬಿದ ತಾಣ;
ಆ ಕರುಣೆ ಬತ್ತಿತೇ ಜಾಣಾವನೂ ಕಾಣ
ಅದು ಒಂದು ನೀರಿನಾಸರೆಯೆಂದು; ಮನದಿ ತೊನೆ,
ಕ್ಷಣವಾದರೂ ನಿನ್ನ ಮರೆಯುದಂದದಿ ನನ್ನ
ಹೃದಯದುಯ್ಯಾಲೆಯೊಳಾಡು; ಎಲ್ಲ ಹೊತ್ತಿನಲಿ
ಸ್ಥಳದಲಿ ಅವಸ್ಥೆಯಲಿ, ಎನಗೆ ನೀನೇ ದಿಕ್ಕು
ಎಂಬರ್ಥ ಎಲ್ಲ ಎಣಿಕೆಗಳ ಹಾಸೂ ಹೊಕ್ಕು
ಆಗಿರಲಿ; ನಾ ನಿನ್ನ ಮಗುವೆಂಬ ಗೊತ್ತಿನಲಿ
ಎನಗೆ ಶಾಂತಿಯ ನೀಡು ಹೇ ಕೃಪಾಸಂಪನ್ನ.



# ಮೊದಲ ಪಂಕ್ತಿಗಳ ಸೂಚಿ

## ಮೊದಲ ಪಂಕ್ತಿಗಳ ಸೂಚಿ

## ಮೊದಲ ಪಂಕ್ತಿಗಳ ಸೂಚಿ

## ಮೊದಲ ಪಂಕ್ತಿಗಳ ಸೂಚಿ





# ಶ್ರೀನಿವಾಸರ ಕವನಗಳು

ಶ್ರೀ ವಿ. ಸೀತಾರಾಮಯ್ಯನವರು

ಮಾಸ್ತಿಯವರ ಕವನಗಳನ್ನು ಕುರಿತು ಮಾತನಾಡುವುದಕ್ಕೆ ಸಂತೋಷವಾಗುವುದಾದರೂ ಅಲ್ಪಾವಕಾಶದಲ್ಲಿ ನಾಲ್ಕು ಮಾತು ಹೇಳಿ ಮುಗಿಸುವುದು ಸಾಧ್ಯವಲ್ಲ. ಹೊಸಕನ್ನಡದಲ್ಲಿ ಹುಟ್ಟಿರುವ ಸುಮಾರು ಎಲ್ಲ ಬಗೆಯ ಕವಿತೆಯನ್ನೂ ಹಾಡನ್ನೂ ಅವರು ಬರೆದಿದ್ದಾರೆ. ಆ ಎಲ್ಲ ಜಾತಿಗಳಲ್ಲಿಯೂ ಹಲವಾರು ಮೇಲ್ತರದ ಕವಿತೆ ಅವರ ಲೆಕ್ಕಣಿಕೆ ಯಿಂದ ಹರಿದಿವೆ. ಅತಿ ಸಣ್ಣ ಕವನದಲ್ಲಿಯೂ ಅವರ ವ್ಯಕ್ತಿಗುಣ ಕಾಣುವುದು. ಕರ್ತೃವೇ ಶೈಲಿ ಎಂಬ ನುಡಿಯು ನಿಜ ಈ ಬರವಣಿಗೆ ಯಲ್ಲಿ ತುಂಬಿದೆ. ಇಷ್ಟು ಸಾಕಲ್ಯದಿಂದ ಒಂದು ಬದುಕು ಮತ್ತು ನೋಟದ ರೀತಿ, ಬಹುತರ, ಈಗಿನ ಇನ್ನಾರ ಬರಹದಲ್ಲಿಯೂ ಸಿಕ್ಕದೆನ್ನ ಬಹುದು. ಬೇರೆ ಕಡೆ ಕವಿಜೀವನದ ಕೆಲವು ಮುಖದ ದರ್ಶನವಾದೀತು; ಆದರೆ ಬದುಕಿನ ಹದವೆಲ್ಲ ಇಷ್ಟು ಸ್ಪಷ್ಟ ಸುಂದರವಾಗಿ, ಒಟ್ಟಿಗೂ ಕುಸುರಿ ಕುಸುರಿಯಲ್ಲಿಯೂ ದೊರಕದು. ಇದಕ್ಕೆ ಕಾರಣ ಒಂದೇ: ಅವರ ಮಾತು, ಯೋಚನೆ, ನಡತೆ, ಬರಹ, ಹಾಡು ಎಲ್ಲ ಒಂದು ಅವಯವಿಯ ಅಂಗಾಂಗಗಳು–ಯಾವುದರಲ್ಲಿ ಹೊಮ್ಮುವುದೂ ಅವರದೇ ಸತ್ವ. ಎಲ್ಲ ಸಾಹಿತ್ಯ ಕಲೆಗಳ ತಳದಲ್ಲಿಯೂ ಕಾಣುವುದು ಒಂದು ಮನಸ್ಸು, ಒಂದು ಬದುಕಿನ ರೀತಿ, ಆ ಮನಸ್ಸು ಬದುಕುಗಳಿಗೆ ರಂಗವಾದ ಪ್ರಪಂಚ—ಎಂದು ಹೇಳುವುದುಂಟು. ಮಾಸ್ತಿಯವರ ಮನಸ್ಸು ಬದುಕುಗಳಿಗೆ ತೋರುವ ಸತ್ಯಸ್ವರೂಪದ ಕೆಲವು ಲಕ್ಷಣ ಗಳನ್ನು ತಿಳಿಸಲು ಪ್ರಯತ್ನಿಸುತ್ತೇನೆ.

ಶ್ರೀ ಪುಟ್ಟಪ್ಪನವರ ನೋವರಿಯದ ಕವಿತಾವಿಲಾಸವನ್ನು ಬಿಟ್ಟರೆ, ಬಹುಶಃ ನುರಿತ ಇತರ ಬರಹಗಾರರಲ್ಲೆಲ್ಲ ಇಂದು ಯಾವುದೋ ನೋವೂ ಭರವಸೆಯ ಕುಂದೂ ಕೆರಳಿಕೆಯೂ ಕಾಣಬರುವುದು. ದೇವ ರೆಂಬುದರಲ್ಲಿ ನಂಬಿಕೆಯಾಗಲಿ ಊರೆಯಾಗಬಲ್ಲ ಒಂದು ಭಕ್ತಿಭಾವ ವಾಗಲಿ ಇಲ್ಲದ ಈ ಕಾಲದಲ್ಲಿ ಮಾಸ್ತಿಯವರ ಬರವಣಿಗೆ ಒಂದು ಆಸ್ತಿ

ಕತೆಯನ್ನು ಮೆರಸುವುದು. ಜಗಜ್ಜೀವನಕ್ಕೆ ಮೀರಿದ ಶಕ್ತಿ, ಉಳಿವು, ಚೆಲುವು ಬೇರೆ ಒಂದು ಉಂಟು; ಅದೇ ಪರಮಾತ್ಮ ಶಕ್ತಿ.

'ಮನುಜರು ನೋಡುವ ನೋಡದ
ಎಲ್ಲೆಡೆ ಅರಳಿದೆ ಯಾವುದೊ ಚಂದ;
ಬರಿ ನಗೆಯಾಟದಿ ಸಂತಸವಾಂತು
ಅದು ಯಾವುದೊ ನಲವಿನ ಚಕ್ಕಂದ.'

ಆ ಶಕ್ತಿ ಎಲ್ಲವನ್ನೂ ಬಳಸಿಕೊಂಡಿದೆ, ಆವರಿಸಿ ಕಾಪಾಡಿದೆ, ಎಂದು ಅವರು ತಿಳಿದಿರುವರು. ತಮಗೆ ತಿಳಿಯದೆಯೇ ಮರಳು ಕಾಡಿನಲ್ಲಿ ತಮ್ಮ ಜೊತೆ ನಡೆದು ಆ ಕರುಣೆ ತನ್ನ ಹೆಜ್ಜೆಯ ಜಾಡನ್ನು ತೋರಿಸಿಕೊಟ್ಟಿದೆ ಎನ್ನುವರು. ಅವರ ಆಸ್ತಿಕತೆಯಲ್ಲಿ ಹಳ, ಹೊಸ ಸಂಪರ್ಕಗಳ ಮತ್ತು ಪ್ರಭಾವಗಳ ಚುರುಕು ಸಂಚಾರ ಇರುವುದರಿಂದ ಅದರಲ್ಲಿ ಜೀವದ ಕಾವುಂಟು. ಸುತ್ತಲ ಪ್ರಪಂಚದಲ್ಲಿ ಆದರ, ಇರುವುದನ್ನು ಒಪ್ಪಿ ಅದರಲ್ಲಿ ಸಂತೋಷದಿಂದ ಬೆರೆಯಬೇಕೆಂಬ ಇಷ್ಟ, ಒಳ್ಳೆಯದನ್ನೇ ನೋಡಿ ಅಲ್ಲದುದನ್ನು ಸರಿಗೊಳಿಸಲು ದುಡಿಯಬೇಕೆಂಬ ಆತುರ, ಇರುವ ಸಾವಿರ ಬಗೆಯ ಭಾಗ್ಯಕ್ಕೆ ತಣಿಯದೆ ಇಲ್ಲದ ನೂರಕ್ಕೇ ಕೊರಗುತ್ತಿರುವುದು ಅವಿವೇಕ ಎಂಬ ಹರ್ಷದ ತಿಳಿವು, 'ಮನುಜನನು ಗೆಲುವ ಚೆಲುವಿನ ತತ್ವ ಜಗದ ಮಾನವತೆ' ಎಂಬ ನರನ ಹಿರಿಮೆಯಲ್ಲಿ ವಿಶ್ವಾಸ– ಇವುಗಳನ್ನು ರೂಪಿಸುವ ಕವನಗಳ ಪ್ರಯೋಜನ ಇಂದು ಅಷ್ಟಿಷ್ಟಲ್ಲ.

ಹೀಗೆಂದ ಮಾತ್ರಕ್ಕೇ ಅವರ ಅನುಭವಕ್ಕೆ ನೋವು ಸುಳಿದಿಲ್ಲವೆಂದಂತಲ್ಲ. ನೋವೇ ಏಕೆ, ಕೆಲವೆಡೆ ಯಾತನೆಯೇ ಕಾಣುವುದು. ಆದರೆ ಸಂಸಾರದ ಕರ್ಕಶತೆಯನ್ನು ಮೆಟ್ಟಿ, ಯಾತನೆಯನ್ನು ಕರಗಿಸಿ, ಹೃದಯವನ್ನೂ ಮನಸ್ಸನ್ನೂ ದೃಷ್ಟಿ ರೀತಿಯನ್ನೂ ತಿದ್ದಿರುವ ಒಂದು ಸಂಸ್ಕಾರದ ಹದ ಅವರ ಕವನಗಳಲ್ಲಿ ತಾನೇತಾನು. ಬಂದ ಯಾವುದೇ ಆಗಲಿ ಅವರ ಬದುಕಿಗೆ ತನ್ನ ಬೆಲೆ ಬೆರಸದೆ ಹೋಗಿಲ್ಲ; ಅವರ ಗುಣವನ್ನು ಚೆನ್ನಗೊಳಿಸದೆ, ಮಂಗಳಕ್ಕೆ ಸಾಧನವಾಗದೆ ಹೋಗಿಲ್ಲ. ಅದುದ

ರಿಂದಲೇ ಅವರ ಕವನಗಳಲ್ಲಿ ಒಂದು ಬದುಕೂ ಸಂಸ್ಕಾರವೂ ಸಮರಸವಾಗಿ ಬೆಳೆದ ದಾರಿ, ಸಂಗತಿ ಕಾಣಿಸುವುದು. ತಿಳಿವಿನಿಂದಲೂ ಬಾಳಹದದಿಂದಲೂ ಮನುಷ್ಯನು ತನ್ನ ವಿಧಿಯನ್ನು ಗೆಲ್ಲಬಲ್ಲನೆಂಬ ನಯದ ತತ್ವ ಒಂದುಂಟು. ಆ ತತ್ವ ಈ ಜೀವಕ್ಕೆ ಇಳಿದಿದೆಯೆನ್ನಿಸುತ್ತದೆ. ಒಂದು ಕಠಿನವನ್ನೊ ನಿರ್ಬಲತೆಯನ್ನೊ ಅನ್ಯಾಯವನ್ನೊ ತೋರಿಸುವಾಗಲೂ ಮೊದಲೇ ಅದರ ವಿಷ ಹಿಂಡಿ ಬಿಟ್ಟಿರುವರು; ಬಲಿದ ಮುಳ್ಳನ್ನು ಕಿತ್ತು ಬಿಸುಟಿರುವರು. ನಗೆಯನ್ನೂ, ಅರ್ಥಮಾಡಿಕೊಳ್ಳುವ ಒಂದು ಸುಮನಸತೆಯನ್ನೂ ಎರೆದು, ವಿಷಹರಡದಂತೆಯೂ ಮುಳ್ಳು ಒಳಗೇ ಮುರಿದು ಉಳಿದುಕೊಳ್ಳದಂತೆಯೂ ನೋಡಿಕೊಳ್ಳುವರು. ಕಟುಟೀಕೆ ಮಾಡುವ ಸಂದರ್ಭದಲ್ಲಿ ಕೂಡ ಮಾತು ನಯ ನುಣುನುಡಿಯುವುದು. ಪ್ರತಿಪಕ್ಷದ ವಾದಕ್ಕೆ ಕೂಡಲೆ ತೆರೆದ ವಿವೇಚನೆ ಔದಾರ್ಯವನ್ನೂ ತಾಳ್ಮೆಯನ್ನೂ ಬೋಧಿಸುವುದು. ಅವರ ಕವಿತೆಯಲ್ಲಿ ಎಲ್ಲಕ್ಕೂ ಮಿಗಿಲಾಗಿ ಕಾಣುವುದು ಬದುಕಿಗೆ ಒಲಿದ ಮನಸ್ಸು; ಸುಖ ಸಂತೋಷ ಧೈರ್ಯಗಳನ್ನು ಹುಡುಕುವ ಕಣ್ಣು; ಅವನ್ನು ಮೆರಸುವ ಬುದ್ಧಿ; ಎಲ್ಲದರ ಹದ ಹಿಡಿದೇ ನಡೆಯಬೇಕೆಂಬ ಒಂದು ಹಾರೈಕೆ; ಒಂದು ಮಾತಿನಲ್ಲಿ ಜೀವನ ಸೌಂದರ್ಯದ ಸಾಧನೆ. ಆದ್ದರಿಂದಲೇ ಕವನ ಒಂದು ಅರ್ಥ, ಚಿತ್ರ, ನಾದ, ಕಥಾ ಅಥವಾ ಭಾವಖಂಡವಾಗಿ ಮಾತ್ರವೊ ಕಲೆಯಾಗಿ ಮಾತ್ರವೊ ಮುಗಿದು ನಿಲ್ಲುವುದಿಲ್ಲ; ಸಮಾಜ ಹಿತಕ್ಕೆ ದುಡಿಯುವ ಹಂಬಲಿಕೆಯುಳ್ಳ ಒಂದು ಪ್ರಭಾವವಾಗಲು ಬಯಸುತ್ತದೆ.

ಸೌಂದರ್ಯ ಎಂದೆ: ಅದು ಹೊರಗಿನದು, ಒಳಗಿನದು, ಮನಸಿನದು, ಮಾತಿನದು, ನಡತೆಯದು; ಕಲೆಯದು, ಕಾರ್ಯದ್ದು; ಮಾನವನ ಮಧುರ ಬಾಂಧವ್ಯದ್ದು. ಈ ಚೆಲುವಿನ ವಿಹಾರವೂ ಅರಕೆಯೂ ಕೊನೆಯಿಲ್ಲದ ಉದ್ಯಮವಾಗಿ ಅವರ ಕೃತಿಗಳಲ್ಲಿ ಕಟ್ಟಿ ನಿಲ್ಲುವುದು. ಹಣ್ಣು, ಹೂ; ಪ್ರಾಣಿ, ಪಕ್ಷಿ; ನದಿ, ಕೊಳ, ಬೆಟ್ಟ, ಮುಗಿಲು; ಕಾಡು, ಕಲ್ಲು, ಮೇಡು; ಹಳ್ಳಿ, ಪಟ್ಟಣ; ಪ್ರಾಕೃತ, ನಾಗರಿಕ; ಕಲೆ, ಕಡತ—ಎಲ್ಲದರ ಮರೆಯಲ್ಲಿಯೂ ಅವರಿಗೆ ಬಾಳ

ಸೊಗಸೇ ಕಾಣುವುದು. ಹೊರಗಿನ ಜೀವನದಲ್ಲಿ ಹರ್ಷವನ್ನೇ ಆಸಕ್ತಿಯನ್ನೇ ಹುಟ್ಟಿಸುವುದು.

'ಹೊರಗದಾವುದೊ ಚೆಲುವ ಮುಗುಳರಳುತಿಹುದು ;
ಒಳಗರಳುತಿಹುದಂತೆ ಅದನರಿವ ಶಕ್ತಿ ;
ನಿರುತವೂ ನಡೆವವೀ ಎರಡು ವಿನ್ಯಾಸ ;
ಬೆಳೆವುದಿಂತನವರತ ಚೆಲುವಿನ ವಿಕಾಸ.'

ಈ ಸತ್ಯಕ್ಕೆ ಕೈಮುಗಿದು ಪ್ರಪಂಚವನ್ನು ಸಹಾನುಭೂತಿಯಿಂದಲೇ ಅರಿಯತೊಡಗುವುದರಿಂದಲೂ, ಒಳಹೊಕ್ಕು ಪರೀಕ್ಷಿಸುವುದರಿಂದಲೂ ಅವರಿಗೆ ವಸ್ತುಗಳ ಹೃದಯಮರ್ಮ ಗೊತ್ತಾಗುವುದು. ಮನಸ್ಸು ಸದಾ ಎಚ್ಚರವಾಗಿರುವುದರಿಂದ ಕಲ್ಲು ಕತೆ ಹೇಳುವುದು, ಮಣ್ಣು ಮಾಣಿಕ್ಯವಾಗುವುದು, ಕಾಡುಕುರುಬನ ಬದುಕು ಸಂಸ್ಕೃತಿಯ ತಿರುಳಾಗುವುದು, ಸತ್ತುಮಾಯವಾದದ್ದು ಊಟೆಯೆದ್ದು ಸಂಜೀವನವೆರೆಯುವುದು. ವಸ್ತುಶೀಲವಾಗಿ ಆಸಕ್ತಿ ಜಾಗ್ರತವಾಗಿರುವುದರಿಂದ ಜಗತ್ತಿನ ಬಹುಮುಖಕ್ಕೆ ಅವರ ಅನುಭವದ ಸಂಪತ್ತಿಯನ್ನೂ ಸತ್ಯತೆಯನ್ನೂ ಸೂಕ್ಷ್ಮತೆಯನ್ನೂ ಹೆಚ್ಚಿಸುವುದು. ಅನೇಕ ಕವನಗಳಲ್ಲಿ ಆವೇಶ ಸಾಮಗ್ರಿ ಅಥವಾ ಸನ್ನಿವೇಶಕ್ಕೂ ಕವಿತೆಗೂ ಅತಿ ಹತ್ತಿರದ, ನೇರದ ಸಂಬಂಧವಿರುತ್ತದೆ. ಸಾಮಗ್ರಿ ಎದುರಲ್ಲಿಯೇ ಹುಟ್ಟಿ ಬೆಳೆವಂತೆ ಬರೆದುವು ಹಲವು. ಎಲ್ಲವೂ ಸ್ಪಷ್ಟ ಚಿತ್ರಗಳು : ಹೊಲದಲ್ಲಿ ಹಾರಾಡಿ ಕೊಂಬೆಯ ತುದಿಯಲ್ಲಿ ತೂಗಿ ಕೂಡುವ ಉದ್ದ ಬಾಲದ ಪುಟ್ಟ ಹಕ್ಕಿ. ಆವರಿಕೆ ದತ್ತೂರಿಗಳ ಹೊಳಪು ಹೊನ್ನು, ವಿಷ್ಣು ಕ್ರಾಂತಿಯ ಪರಿಮಿತ ನೀಲ. ತಾವರೆಕೊಳದ ಅರಳು ಸೊಗಸು. ವಿಂಧ್ಯೆಯ ಶ್ರೇಣಿಯದು ಸಂಜೆ ಬೆಡಗು, ಊರು ಹೆಸರುಗಳಲ್ಲಿ ಹಿಂದಿನ ಬಾಳ ಸೌಭಾಗ್ಯದ ಕೊಂಬು ಮೊಳಗು. ಮುಗಿಲ ಮೇಲಿಂದ ದುಮುಕುವ ಜೋಗದ ಭಯತರುವ ಬೀಳು, ಮಾರಿಯ ಮಂಟಪಹತ್ತಿ ಹಸುರು ಮೇಯುವ ಮೇಕೆ, ಮುರಿದುಬಿದ್ದ ಬೀದಿಯ ವೀರಗಲ್ಲು, ಆಕಾಶದಲ್ಲಿ ಹಾರಿ ಒಂದನ್ನೊಂದು ಕೂಗುತ್ತ ಒಲವು ಬೆಳಸುವ ಜೊತೆಹದ್ದುಗಳ

ಸರಸ- ಯಾವುದೇ ಆಗಲಿ ಖಚಿತ, ಸಹಜ, ಸುಂದರ. ಒಂದು ವಿವರ ದಲ್ಲಿಯೂ ಸಂದಿಗ್ಧತೆ ಅರೆನೋಟ, ಕೊರೆನೋಟ ಇಲ್ಲ. ಪ್ರೀತಿ ಯಿಂದ ಎಲ್ಲವನ್ನೂ ನೋಡುವುದರಿಂದ 'ಏನು ಮೋಹ ಏನು ಮಾಯ ಏನು ಸೊಬಗು ಸೌಂದರ್ಯ' ಎಂದು ಹಾಡುತ್ತ ಶಾಹನರಾಗ ಲಯ ದಲ್ಲಿ ಮೈಮರೆಯ ಬಲ್ಲರು ಅವರು. ಈ ಬಗೆಯಲ್ಲಿ ಪದಾರ್ಥಗಳನ್ನು ನೋಡುವಾಗ ಅವರಿಗೆ ಕಿರಿದಿಲ್ಲ, ಹಿರಿದಿಲ್ಲ, ರೂಪಿಲ್ಲ, ಕುರೂಪಿಲ್ಲ; ಸಾಧಾರಣರಿಗೆ ಬೇಸರದ ಹುಚ್ಚು ಹಿಡಿಯುವ ಸಂದರ್ಭದಲ್ಲಿ ಕೂಡ ಅವರಿಗೆ ಸೌಂದರ್ಯದ ಅಣಿಯರವೇ ಕಾಣಿಸುವುದು. ಇದನ್ನು ಕೇಳಿ:

'ಕಲ್ಲು ಮಣ್ಣು ಹೆಂಟೆ ಮುಳ್ಳು:
ಅವುಗಳ ನಡುವೆ ಇದೆಕೊ ರತ್ನ;
ಮುಳ್ಳು, ಮಣ್ಣು, ನೊರಜಿನ ನಡುವೆ,
ಇಕೊ ಹೊಚ್ಚ ಹೊಸ ಹೊನ್ನಕ್ಷತ್ರ"!

ಹಾಗೆಯೇ, ಈ ಪದ್ಯವನ್ನು ಓದುವ ರೀತಿ ಓದಿದರೆ ಇಲ್ಲಿನ ಸರಳತೆ ಹಿಡಿತಗಳಲ್ಲಿ, ನಡಸಿ ಮುಗಿಸುವ ಕೊನೆಯ ಸಾಲಿನಲ್ಲಿ ಯಾವ ಸೆಳೆತ ಶರಸಂಧಾನ, ಶರಪಾತವಿದೆ ಎಂಬುದರ ಅರಿವಾದೀತು.

ಅಂದಿನ ಕಪಿಲವಸ್ತುವನ್ನು ಬುದ್ಧನು ಹಿಗ್ಗಿ ವರ್ಣಿಸಿದಂತೆ ಇಂದಿನ ಬೆಂಗಳೂರು, ಅನಂತಪುರ, ಹನುಮನಗಿರಿಗಳನ್ನು ಕವಿ ಬಣ್ಣಿಸುವರು. ತಾವರೆಯನ್ನು ಹೇಗೊ ಹೆಜ್ಜಾಲಿ, ಈಚಲು ಮರಡಿ, ಹಳ್ಳಕೊಳ್ಳಗಳನ್ನು ಕಂಡು ಪುಳಕಗೊಳ್ಳುವರು. ನೇಮಕ್ಕೆ ಮಾಸಲಾದ ನೀಲಗಾರನ ದೃಢವನ್ನು ನಕ್ಕು ಮೆಚ್ಚಿ ಅಭಿಮಾನಪಡುವರು; ಒಡಲು ಕೊಳೆ ಎಂಜಲಾಯಿತು, ಇನ್ನು ಅದನ್ನು ಗಂಡನಿಗೆ ಬಡಿಸಲಾರೆನೆಂಬ ಸತಿಯ ಶುಚಿವೀರಕ್ಕೆ ಒಲಿದು ಹೊಂಡಕ್ಕಿಳಿವ ಹೆಣ್ಣನಿರ್ಧರವನ್ನು ಕಂಡು, ಹೊಕ್ಕರಣೆಯನ್ನು ಹೊಗುವ ಕೊಕ್ಕರೆಗೆ ಆಕೆಯನ್ನು ಹೋಲಿಸಿ ನಮ್ಮ ಬೇಗೆ ಇಳಿಸುವರು. ಒಂದೆಳೆ ಈಚೆ ಆಚೆ ಆದರೆ ನಸುಜಾದರೆ, ನಾಜೂಕು ಕೆಟ್ಟು ಬೀಳಾಗಬಹುದಾಗಿದ್ದ ಗೌಡ ಮಲ್ಲಿಯರ ಬೇಟವನ್ನೂ ಬದುಕಿನ ಕಥೆಯನ್ನೂ ಅಡಿತುದಿಯಾಗಿ ಒರೆದು ಎರಡು ಜೀವಗಳು

ಬೆಸೆದು ಒಂದಾದ ಮತ್ತು ಮಾಗಿದ ಬಗೆಯನ್ನು ಮನಮುಟ್ಟುವಂತೆ ಚಿತ್ರಿಸುವರು. ಇಂತಹ ಸಂದರ್ಭಗಳೂ ನೋಟಗಳೂ ನೂರು.

ಕಾಕನಹಾಡು, ಜೋಗದ ದರ್ಶನ, ಚೆಲುವದೇವಿ, ತಂಗಾಳಿ–ಎಂಬ ನಾಲ್ಕನ್ನು ಆರಿಸಿ ಎತ್ತಿಕೊಂಡು, ಚೆಲುವು, ಬಾಳು, ಸುಖದ ಸಂದೇಶ, ನಂಬಿದ ಆತ್ಮದ ಹಂಬಲ, ಇವು ಹೇಗೆ ವಿಶೇಷವಾಗಿ ಅವರ ಕವನದಲ್ಲಿ ಕಾಣುವುವೆಂಬುದನ್ನು ಹೇಳಿ ಈ ಮಾತನ್ನು ಮುಗಿಸುವೆನು.

ನಾಲ್ಕರಲ್ಲಿಯೂ ಪ್ರಕೃತಿಸೌಂದರ್ಯದ ವಿಲಾಸವೂ ಒಂದೊಂದು ತೆರದ ವಿವರಣೆಯೂ ಇದೆ. ಚೆಲುವಿನ ಗಂಭೀರಸಂದೇಶ ಒಂದು ಕಡೆ ಇದ್ದರೆ ಮತ್ತೊಂದು ಕಡೆ ಅದೇ ದೈವದ ಶುಭ ಸಂಕೇತವೆಂಬ ನುಡಿ ಇದೆ. ಹೆಂಗಸಿನ ಬದುಕಿಗೆ ಕವಿ ಕೊಡುವ ಸ್ಥಾನಮಾನದ ನಿರ್ದೇಶ ಒಂದರಲ್ಲಿದೆ. ಇನ್ನೊಂದರಲ್ಲಿ ಭಕ್ತಿಜೀವದ ಅಗಲಿಕೆ, ಕರೆ ಇವೆ. ಮತ್ತೊಂದರಲ್ಲಿ ಚೆಲುವಿನಲ್ಲಿ ಕೂಡ ಸೌಮ್ಯ ಭೀಷಣಗಳೆಂಬ ಪರಸ್ಪರ ವಿರೋಧವಾದ ಎರಡು ಮುಖಗಳ ದರ್ಶನವುಂಟು, ಸರಿಯಾದ ತಿಳಿವಿನಲ್ಲಿ ಅವು ಸಮರಸಗೊಳ್ಳುವುವು, ಎಂಬ ರಹಸ್ಯದ ವಿವರವಿದೆ.

'ಕಾಕನಕೋಟೆ'ಯ ಮೊದಲಗೀತ ಕಾಕನ ಹಾಡು; ಅದರಿಂದಲೇ ನಾಟಕ ಆರಂಭವಾಗುವುದು. ಅದನ್ನು ಓದಿದೆವೆಂದರೆ ಯಾವ ಸೊಬಗಿನ ಸುಗ್ಗಿ ಆ ದುಂಬಿಗೆ ಬಂದಾಗಿತ್ತು ಎಂಬುದೂ ಆ ದುಂಬಿ ಹೇಗೆ ಸೊಕ್ಕುವಂತೆ ಝುಂಕಾರಮಾಡುತ್ತಿತ್ತು ಎಂಬುದೂ ತಿಳಿಯುವುದು. ಮೂರ್ತ ವನಸೌಂದರ್ಯವೇ ಆ ಮೆಚ್ಚಿನ ಹಾಡಾಗಿರುವುದು. ಕೀಟ್ಸ್ ಕವಿಯ ರೂಪಸೌಭಾಗ್ಯದ ಪರಿಚಯವುಳ್ಳವರೂ ಏರಿಯೆಲ್ ಕಿನ್ನರಗಾನ ಕೇಳಿದವರೂ ಈ ಝುಂಕಾರಕ್ಕೆ ಕಿವಿಗೊಟ್ಟರೆಂದು ನನ್ನ ನಂಬಿಕೆ. ಇದನ್ನು ಕೇಳದವರು ಕಿವುಡರು. ತುಂಬು ಸೊಬಗು ಕಾಕನನ್ನು ಸುತ್ತಿಕೊಂಡಿತ್ತು. ಅದನ್ನು ತನಗೂ ತನ್ನವರಿಗೂ ಉಳಿಸಬೇಕೆಂದು ಆ ನಾಡಬಂಟನ ಬಯಕೆ; ಉದ್ಯೋಗ. ಅಷ್ಟು ನಾಡಭಕ್ತಿ ಅವನಲ್ಲಿಲ್ಲದಿದ್ದರೆ ಅವನು ತನ್ನ ಜನರ ತಲೆಯಾಳಾಗಿ ಆಗುತ್ತಿದ್ದನಾದರೂ ಹೇಗೆ?

ಜೋಗದ ದರ್ಶನದಲ್ಲಿ ಕೆಂದಾವರೆಯ ವೈವೆತ್ತ ಬಣ್ಣದ ಹಬ್ಬ

ಹರಡಿರುವುದು. ಕಾಡು ಮೂಲೆಯ ಕೊಳವೊಂದರಲ್ಲಿ ನಾಲ್ಕು ದಿನ ಮಾತ್ರ ಅರಳಿ ಅಳಿದರೂ ಅಭಿಮನ್ಯುವಿನಂತಹ ಬಾಳು ತಾವರೆಯದು. ಆದರೆ ಜೋಗದ ನಿತ್ಯಾದ್ಭುತ ಸ್ರೋತದ ಭೀಷಣ ಭವ್ಯತೆಯೆದುರು ಅದರ ಬಾಳು ಕಿರಿದು: ಅದಕ್ಕೆ ಇದು ಹೇಗೆ ಸಾಟಿಯಾದೀತು? ಅದೆಲ್ಲಿ, ಇದೆಲ್ಲಿ? ಎಂಬ ಭಾವ ಸಹಜವಾದರೂ ಕವಿ ಮನಸ್ಸಿನಲ್ಲಿ ಅವು ಉಳಿಯುವುದು ಜೊತೆನೆನಪಾಗಿ: ಅವನ್ನು ಕುರಿತು ಅವರು ಅನ್ನುವರು—

" ಶ್ರುತಿಯಾಗಿ ನೆರೆದೇಕ ಮತದಿಂದ ನುಡಿಯುವಿರಿ :
' ಹಿರಿದು ಕಿರಿದಿಲ್ಲ ಫಲಿಸಿದ ಬಾಳಿಗೆ;
ಇಂದಿಲ್ಲ, ಅಂದಿಲ್ಲ, ಕುಂದಿಲ್ಲ, ಕೊರೆಯಿಲ್ಲ;
ವಿಶ್ವ ಮಾನಸನ ನಿಜ ನಿತ್ಯಸುತರ
ದಿನ ಯುಗದ ಹಿರಿಕಿರಿಯರೆಂಬ ನುಡಿ ಜಲ್ಪ;
ಫಲಿಸೆ ಕಣವೇ ವಿಶ್ವ, ಕ್ಷಣ ಬ್ರಹ್ಮಕಲ್ಪ "

ಎಂದು. ಸತ್ಯಕ್ಕೆ ಎರಡೂ ಮುಖಗಳುಂಟು: ಒಂದರಿಂದಲ್ಲದೆ ಇನ್ನೊಂದು ಪೂರ್ಣವಾಗದು.

ವಿಂಧ್ಯಾಟವಿಯ ಸಂಜೆಯ ಚೆಲುವು ಹಬ್ಬಿ ವಿಜೃಂಭಿಸಿದ್ದರೂ ಚೆಲುವೆಯೊಬ್ಬಳು ಕೊಡಹೊತ್ತು ನೀರಿಗಾಗಿ ಅಲ್ಲಿಗೆ ಬಂದು ನಿಂತಾಗ ಪ್ರಕೃತಿ ದೇವಿಯ ಚೆಲುವಿಗೆ ಕಳಸವಿಟ್ಟಂತಾಯಿತೆನ್ನುವರು.

' ಮುಟ್ಟಿದುದು ಮುಗಿಲನಾಕ್ಷಣ ಚೆಲುವ ಶಿಖರ;
ಸೃಷ್ಟಿಯಂದಕೆ ಹೆಣ್ಣಿನಂದ ಮಣಿಮುಕುರ. '

ಅಂತೆಯೆ ಮಾನವನ ಎಲ್ಲ ಸುಖಕ್ಕೂ ಕಾರಣವಾಗಿ, ನಯನೇಹವಾಗಿ,

' ಮಗುವಾಗಿ ತಾಯ್ತಂದೆವಿರ ಮನವ ನಲಿಸಿ
ಸತಿಯಾಗಿ ಪತಿಯ ಹೃದಯದ ಸುಖವ ಸಲಿಸಿ,
ಜಗದಂಬೆಯವತಾರದಂತೆ ಕಳಕಳಿಸಿ,
ಸುತರ ಹಡೆದೆತ್ತಿ ಮುದ್ದಾಡಿ ಸಲೆ ಬೆಳೆಸಿ '

ಸೃಷ್ಟಿಗೆ ಸಫಲತೆ ಉಂಟುಮಾಡುವ ಹೆಣ್ಣು ಜೀವನಕ್ಕೆ ಎಷ್ಟು ಬಗೆ

ಯಲ್ಲಿ ಕಾಣಿಕೆಯಿತ್ತರೂ ಕವಿಗೆ ತೃಪ್ತಿಬಾರದು. ಮೊಲ್ಲೆ, ಮುದಲಿಂಗನ ನಾದಿನಿ, ಮಲ್ಲಿ, ಚಿಕ್ಕಮಲ್ಲಮ್ಮ, ಯಶೋಧರೆ–ಒಬ್ಬೊಬ್ಬರೂ ತಮ್ಮ ರೀತಿಯಲ್ಲಿ ಮನುಷ್ಯ ಭಾಗ್ಯದ ಲಕ್ಷ್ಮಿಯರು. ಅವರ ಸಂತತಿ ಗಂಡು ಸಂತತಿಗೆ ಒಂದು ಕೈ ಮೇಲೇ ಹೊರತು ಕಡಮೆ ಅಲ್ಲ. ಗಂಡಿಗೆ ಸರಿ ನಿಂತಾಗಲೂ ಹೆಣ್ಣುಗುಣ, ಹೆಣ್ಣುನಯ, ಉಳಿಸಿಕೊಂಡೇ ಗೆಲ್ಲಬಲ್ಲವರು. ಚೆಲುವಿನ ತಿಳಿವೊಂದುಂಟು, ಆ ತಿಳಿವನ್ನು ರೂಢಿಸಿದ ಸುಖವುಂಟು, ಬಾಳುಂಟು, ಅಂತಹ ಬಾಳಿಂದ ಮಂಗಳವುಂಟು ಎಂಬ ತತ್ವ, ನುಡಿಗಳ ನಡುವೆ ಸೇರಿ ಹೆಣೆದುಕೊಂಡಿರುತ್ತದೆ. ಕಣ್ಣಿಗೆ ಕಾಣುವ ಹೊರ ಚೆಲುವು ವಸ್ತುಪ್ರಪಂಚದ ಉಡುಗೆ ತೊಡುಗೆ. ಹೃದಯದ ಮತ್ತು ಆತ್ಮದ ಚೆಲುವು ಒಂದುಂಟು. ಬಾಳಚೆಲುವು ನಡೆಯುಸೀತಿಗೆ ಸಂಬಂಧಿಸಿದ್ದು. ಇವು ಅವಳಿಬಿದ್ದ ಅಕ್ಕತಂಗಿಯರಂತೆ. ನಗೆಯಲ್ಲಿ, ಸುಖದಲ್ಲಿ ಇವು ನೆರೆಯುವಂತಾದರೆ ಬಾಳಿಗೆ ಅದಕ್ಕಿಂತ ದೊಡ್ಡ ಸಫಲತೆ ಬೇರೆ ಯಾವುದಿದೆ?

ಸತ್ಯ, ಚೆಲುವು ಇವೆರಡೂ ಭಗವಂತನವೇ ಎರಡು ನಿತ್ಯರೂಪಗಳು. ಆತನ ಕುರುಹು ಸಂಕೇತಗಳು. ಆತನ ಮಾಯೆ ಮೋಹಕತೆಗಳನ್ನೇ ನಾವು ಹೀಗೆ ಕಾಣುತ್ತಿರುವುದು. ಆ ಮೂಲಕವೇ ದೇವರ ಕರೆ. ಆ ಕರೆ, ಆ ನೋಟ ಎಂದಿಗೂ ಕಾಣಲೊಲ್ಲದೆ, ಕೇಳುತ್ತಿರಲೊಲ್ಲದೆ? ಎಂಬುದೇ ಚಿಂತೆ. ಅದಕ್ಕಾಗಿ ತೆರೆದ ಕಣ್ಣು, ಕಿವಿ. ಅದರಲ್ಲಿ ಬೆರೆದು ಒಂದಾಗಬೇಕು ಎಂಬ ಹೃದಯ. ಆದ್ದರಿಂದ ವಿಶ್ವಾತ್ಮಕ್ಕಾಗಿ ತವಕಪಡುತ್ತ, ಅಗಲಿ ಬೇನೆ ಪಡುತ್ತ ಇರುವುದು ಮಾಸ್ತಿಯವರ ಹಾಡುಗಳ ಸೊಲ್ಲು. ನಲ್ಲನಲ್ಲರ ಹಂಬಲಿಕೆ, ರಾಧೆ ಗೋಪಿಯರ ವಿರಹ, ರಾಣಿಯ ಮನೆಯ ಕೊಳಲು, ಅಭಿಮಾನಿ ಯಶೋಧರೆಯ ಎದೆಬೇನೆ, ಭಕ್ತ ಪಾಣಿಯ ಮೊರೆಗೀತೆ, ತಂಗಾಳಿಯ ಬರವಿಗಾಗಿ ಉತ್ಕಂಠೆ—ಎಲ್ಲ ಈ ತೆರನೇ. ದೊರಕಿರುವ ಸಂಪತ್ತಿಗೆ ತೃಪ್ತಿ ಪಟ್ಟುಕೊಂಡು, ಬಾಳು ಆ ಮಟ್ಟಿಗಾದರೂ ಕೃತಾರ್ಥವಾಯಿತೆಂಬ ಭಾವ ಬಲಿಸಿ ಶ್ರದ್ಧಾಳುವಾಗಿರುವ ಜೀವವೃತ್ತಿಯೂ ಇದರ ಜೊತೆಗೆ ಸೇರುವುದು. ಸುಖದಲ್ಲಿಯೂ ಪರಮಾತ್ಮನುಂಟು; ಚೆಲುವು ಎಲ್ಲೆಲ್ಲಿಯೂ ದೊರೆಯಾಳುತ್ತಿದೆ; ಮರಣ

ದಲ್ಲಿ ಜೀವನದ ಮೊಳೆ ಇದೆ ಎನ್ನುತ್ತ, ಹೊಸ ಚೇತನ ಊಡುತ್ತ, ದೇವದೂತನಂತೆ ತಂಗಾಳಿ ಬರುವಾಗ ಎಲ್ಲ ವಿರಹ ಆರುವುದು, ಬೇಗೆ ತಂಪೊಂದುವುದು, ಮೆಲ್ಲಗೆ ಬೀಸಿ ಬರುವ ಆ ಮೃದು ಉಸಿರಲ್ಲಿ ನೋವು ಮಾಯುವುದು, ಹಣ್ಣೆಲೆ ಉದುರಿ ಬೀಳುವುದು, ನೂರು ವಿರಸತೆಯ ತೊಟ್ಟು ಕಳಚಿ ತೂರಿಹೋಗುವುದು, ಸರಸ ಸಂಪರ್ಕ ದೊರೆತು ಅಕ್ಷಯ್ಯ ಪರಸತ್ವ ಚಿಗುರಿಡುವುದು, ಆದ್ದರಿಂದ ಓ ಮುಂಬೇಸಗೆಯ ಮೆಲು ನಡೆಯ ಮಾರುತ, ಬಾ. ನಿನಗಾಗಿ ಕಾದು ತಲ್ಲಣಿಸುತ್ತಿರುವ ಈ ಮಲ್ಲಿಗೆಯನ್ನು (ಪುನಃ ಅದೇ ಹೂವು) ಮೊದಲು ಸಂತೈಸು ಎಂದು ನಾವೂ ಕೂಗಿ ಕರೆಯೋಣವೆನ್ನಿಸುತ್ತದೆ. 'ತಂಗಾಳಿ' ಬಹುಹಿಂದೆ ಅವರು ಬರೆದ ಕವನವಾದರೂ ಮಾಸ್ತಿಯವರ ಕವಿಬದುಕಿನ ಕನ್ನಡಿಯಂತೆ, ಸಂಗ್ರಹದಂತೆ ಇದೆ.

ಇಂಥ ಕವಿತೆಗಳು ಹುಟ್ಟುವುದು ಒಂದೊಂದು ಕಾಲದ ಭಾಗ್ಯ. ಅಂಥ ಅನೇಕ ಸೌಭಾಗ್ಯಗಳನ್ನು ದಾನಮಾಡುತ್ತ ಮಾಸ್ತಿಯವರ ಕೃತಿಶಕ್ತಿ ಕನ್ನಡದ ಜೀವ ರಸದಲ್ಲಿ ಸೇರಿಕೊಂಡು ಸಂತತವಾಗಿ ಸಂಚರಿಸುತ್ತಿರಲಿ.

---

೧೯೪೦ರಲ್ಲಿ ಮಾಸ್ತಿಯವರ ಚಿತ್ರದ ಅನಾವರಣದ ವೇಳೆ ಆಡಿದ ಮಾತಿನ ವರದಿ.

ಪ್ರಕಾಶಕರು :
ಜೀವನ ಕಾರ್ಯಾಲಯ
೪೪, ಗವಿಪುರ ವಿಸ್ತರಣ
ಬೆಂಗಳೂರು ೪

ಮೊದಲನೆಯ ಮುದ್ರಣ 1940
ಎರಡನೆಯ ,, 1952

ಬೆಲೆ ಒಂದು ರೂಪಾಯಿ



ಮುದ್ರಕರು :
ಶ್ರೀ. ಶೇ. ಗೋ. ಕುಲಕರ್ಣಿ
ಸಾಧನ ಮುದ್ರಣಾಲಯ
ಧಾರವಾಡ

# ಮೊದಲಮುದ್ರಣದ ಮುನ್ನುಡಿ

ಈ ಕವನದ ವಸ್ತು ಈಗ ನಾಲ್ಕು ವರ್ಷದ ಹಿಂದಿನ ಕಾರ್ತೀಕ ಮಾಸದಲ್ಲಿ ನಮ್ಮ ವಿಸ್ತರಣದ ಬಳಿಯ ಹನುಮನಗಿರಿಯ ಸುತ್ತಿನ ಹೊಲಗಳಲ್ಲಿ ಸುತ್ತುತ್ತಿರುವಾಗ ನನ್ನ ಮನಸ್ಸಿನಲ್ಲಿ ಮೂಡಿತು. ಆಗಲೇ ಕೆಲವು ಪದ್ಯಗಳನ್ನು ಬರೆದದ್ದಾಯಿತು; ಆದರೆ ಅನೇಕ ಕಾರಣದಿಂದ ಕೆಲಸ ಮುಂದರಿಯಲಿಲ್ಲ. ಆಮೇಲೆ ಎರಡು ಕಾರ್ತೀಕ ಮಾಸ ಬಂದು ಕೃತಿ ಅಲ್ಲಿಗೇ ನಿಂತಿತಲ್ಲ ಎಂಬ ವ್ಯಥೆಯನ್ನು ತಂದು ಮುಂದೆ ಸಾರಿದುವು. ಹೋದ ವರ್ಷದ ಕಾರ್ತೀಕಮಾರ್ಗಶಿರದಲ್ಲಿ ಕಥೆಯನ್ನು ಮುಂದರಿಸಿ ಮುಗಿಸಿದ್ದಾಯಿತು. ಅಲ್ಲಿಂದ ಒಂದೆರಡು ತಿಂಗಳಲ್ಲಿ ಇದು ಧಾರವಾಡದಿಂದ ಹೊರಡುತ್ತಿರುವ ನನ್ನ ಗೆಳೆಯರ 'ಜೀವನ' ಪತ್ರಿಕೆಯಲ್ಲಿ ಪ್ರಕಟವಾಯಿತು; ಈ ಕಾರ್ತೀಕದಲ್ಲಿ ಪುಸ್ತಕವಾಗಿದೆ.

ಈ ಕೃತಿಯಲ್ಲಿ ಯಾವುದಾದರೊಂದು ನಡೆದ ಕಥೆಯನ್ನು ಹೇಳುತ್ತಿಲ್ಲ. ಆದರೂ ಇದನ್ನು ಕೇಳಿದ ಮಿತ್ರರು ಗೌಡಮಲ್ಲಿಯರಿಗೆ ಮೂಲ ವ್ಯಕ್ತಿಗಳು ಯಾರೋ ಇರಬೇಕೆಂದು ಭಾವಿಸುತ್ತಾರೆ. ಕೃತಿಯ ಪಾತ್ರಗಳೂ ಸಂಗತಿಗಳೂ ಮಿತ್ರರಿಗೆ ಹೀಗೆ ನಿಜವಾಗಿ ಕಾಣುವುದು ನನಗೆ ಬಹು ಧೈರ್ಯವನ್ನು ಕೊಡುತ್ತದೆ. ಊಹೆಯ ಪಾತ್ರವೂ ಸಂಗತಿಯೂ ಜೀವನದಿಂದ ಬಂದವೆಂಬಂತೆ ಕಂಡಾಗಲೇ ಊಹೆ ಸಾಧುವೆಂದು ಸಿದ್ಧವಾಗುವುದು. ನೋಡಿದ ಬಾಳಿನಿಂದ ಕಂಡ ವಿಷಯಗಳನ್ನು ತೆಗೆದುಕೊಂಡು ಚಿತ್ರಕಾರನು ಒಂದು ಮುಖವನ್ನು ಮಾಡುತ್ತಾನೆ. ಅದು ನಿಜವಾದ ಯಾವ ಒಬ್ಬ ವ್ಯಕ್ತಿಯ ಮುಖವೂ ಆಗಬೇಕಾದದ್ದಿಲ್ಲ. ಆದರೆ ಅದರಂತೆ ಒಬ್ಬ ವ್ಯಕ್ತಿ ಇದ್ದರೂ ಇರಬಹುದು. ಚಿತ್ರ ವಾಸ್ತವವಾಗುವುದಕ್ಕೆ ಈ ಗುಣ ಅವಶ್ಯಕ. ಕಾವ್ಯಕ್ಕಾದರೂ ಇದೇ ನಿಯಮ ಅನ್ವಯಿಸುತ್ತದೆ. ಜೀವನದಲ್ಲಿ ಕಂಡ ಹಲವಾರು ಸಂಗತಿಯಿಂದ

ಮನಸ್ಸಿನಲ್ಲಿ ಹಲವಾರು ಭಾವನೆ ಮೂಡುತ್ತವೆ. ಈ ಭಾವನೆಗಳಲ್ಲಿ ಕೆಲವದರ ಸಂಯೋಗ ಜೀವನದಲ್ಲಿ ಕಾಣಬಹುದು; ಇನ್ನು ಕೆಲವದರ ಸಂಯೋಗ ಜೀವನದಲ್ಲಿ ಕಾಣದೆ ಇದ್ದು ನಮ್ಮ ಮನಸ್ಸಿನಲ್ಲಿ ಆಗಬಹುದು. ಇಂಥ ಸಂಯೋಗವನ್ನು ಕಥೆಯಾಗಿ ಬರೆದಾಗ ಅದು ನಡೆಯದೆ ಇದ್ದರೂ ನಡೆಯಬಹುದಾದದ್ದು ಸಹಜ ವಾದದ್ದು ಎಂದು ತೋರುತ್ತದೆ.

ಈ ಕೃತಿಯನ್ನು ಕೇಳಿರುವ ನನ್ನ ಮಿತ್ರರು ಇದನ್ನು ಬಹಳ ವಾಗಿ ಮೆಚ್ಚಿಕೊಂಡಿದಾರೆ. 'ಜೀವನ'ದ ಸಂಪಾದಕರಾದ ಗೆಳೆಯರು ಇದನ್ನು ಕುರಿತು ಹೀಗೆಂದಿದಾರೆ: "ವಿವೇಕಿಗಳಾದವರ ಲೌಕಿಕ ಜೀವನದಲ್ಲಿಯೂ ಮಧುರ ಪ್ರೀತಿಯು ಯಾವ ಮಟ್ಟವನ್ನು ಮುಟ್ಟಬಲ್ಲುದೆಂಬುದನ್ನು ಈ ಕವನವು ತೋರಿಸುವುದು. ಪ್ರೇಮದ ಅನನ್ಯತೆ, ಸರ್ವ ಸಮರ್ಪಣ, ಆಂತರಿಕ ಔಚಿತ್ಯಗಳಿಂದ ಹಸನಾದ ಜೀವರುಗಳಲ್ಲಿ ದಿನದ ನಡತೆಯೂ ದಿವ್ಯವಾಗಿ ತೋರುವುದು." ನಮ್ಮ ಜನಕ್ಕೆಲ್ಲ ಇದು ಹೀಗೆ ಮೆಚ್ಚಿಕೆಯಾಗಲೆಂದು ನಾನು ಬಯಸುತ್ತೇನೆ.

ಈ ಕೃತಿ ಒಂದನ್ನೇ ಪ್ರಕಟಮಾಡುವುದು ಚೆನ್ನವೆಂದು ಗೆಳೆಯರು ಸಲಹೆ ಮಾಡಿದ್ದರಿಂದ ಇಷ್ಟು ಸಣ್ಣದಾದರೂ ಇದನ್ನು ಒಂದು ಪುಸ್ತಕವಾಗಿ ಪ್ರಕಟಿಸಿದೆ. ಇದೇ ಮಿತ್ರರ ಸಲಹೆಯಂತೆ ಕೃತಿಯೊಂದಿಗೆ ಕೆಲವು ಚಿತ್ರಗಳನ್ನು ಸೇರಿಸಿದೆ. ಈ ಚಿತ್ರಗಳನ್ನು ಬರೆದುಕೊಟ್ಟ ನನ್ನ ಮಾನ್ಯ ಮಿತ್ರ ಶ್ರೀ|| ಪುರುಷೋತ್ತಮರಾಯರಿಗೆ ನಾನು ಇಲ್ಲಿ ಅನೇಕ ವಂದನೆಗಳನ್ನು ಸಲ್ಲಿಸುತ್ತೇನೆ. ಕೃತಿಯ ಮಾತು ಹೇಗಾದರೂ ಇರಲಿ, ಚಿತ್ರಗಳನ್ನು ಜನ ಮೆಚ್ಚಲೇ ಮೆಚ್ಚುವರೆಂದು ನನ್ನ ನಂಬಿಕೆ.

ಗವಿಪುರದ ವಿಸ್ತರಣ: ವಿಕ್ರಮ ಸಂ||<br>ಆಶ್ವೀಜ ಬಹುಳ ತ್ರಯೋದಶೀ

ಶ್ರೀನಿವಾಸ



ಮಹಾನವಮಿ ಕಳೆದಿತ್ತು; ದೀವಳಿಗೆ ಸಾಗಿತ್ತು

# ಗೌಡರ ಮಲ್ಲಿ

ಮಾನವಮಿ ಕಳೆದಿತ್ತು; ದೀವಳಿಗೆ ಸಾಗಿತ್ತು;
ಮುಗಿಲು ಮಳೆ ಹುಯ್ದಾಗಿ ನಿಲ್ಲುತಿತ್ತು;
ಚಳಿ ಸುಳಿದು ಬರುತಿತ್ತು; ದೇಗುಲದಿ ತಿಂಗಳಲಿ
ಸಾಲು ಸೊಡರಿನ ಪೂಜೆ ಸಲ್ಲುತಿತ್ತು.

ಬೆಳೆದ ರಾಗಿಯ ಹೊಲವ ಕಾಯುತಿರುವಳು ಮಲ್ಲಿ,
ಹದಿನೆಂಟು ಹರೆಯದ ಬೇಡ ಹೆಣ್ಣು;
ಕುಯ್ಲುದಿನ ಬಂತೇನೊ ಎಂದು ನೋಡುತ ಗೌಡ
ಬಂದನಲ್ಲಿಗೆ, ತಣಿಯೆ ನೋಡಿ ಕಣ್ಣು.

## ಗೌಡರ ಮಲ್ಲಿ

ಹುಲುಸು ಬೆಳೆದಿದೆ ಪೈರು ; ತೆನೆತುಂಬಿ ಉದುರುತಿದೆ;
ಹೂವಾಗಿ ಹೊಳೆದು ಹುಚ್ಚೆಳ್ಳು ಅವರೆ
ಭೂಮಿದೇವಿಯ ಸೆರಗ ಬಣ್ಣವಾಗೆಸೆಯುತಿವೆ ;
ಹಸುರುಕ್ಕಿ ಆ ಸೇಲೆಗಂಚು ತೆವರೆ.

ಬೆಳೆ ನೋಡಿ ನಲಿದವನೆ ಗೌಡ ಮರುಚಣದಲ್ಲಿ
ಹೋದ ಹೆಂಡಿರ ನೆನೆದು ನೋವುಗೊಂಡ:
ಬೆಳೆಯ ಕಾಣದೆ ಮೂರುವರುಷ ಸೋತಿದ್ದವಳ
ಅದು ಬಂದದಿನಕೆ ಜವನೇಕೆ ಉಂಡ?

ಜೊತೆಗೆ ನಲಿಯುತಲಿದ್ದ ಜೀವ ಇಲ್ಲದೆ ಹೋಯ್ತೆ
ಎಂದು ದುಗುಡಕೆ ಕಣ್ಣು ತೇವವಾಗಿ
ಗೌಡ ದೂರದ ಬಾನ ನೋಡತಿರುಗಿದ: ಎದುರು
ಯಾರು ಹೆಂಗುಸು ಇಂತು ಹಾವವಾಗಿ?

ಹೊಲವ ಕಾಯುವ ಮಲ್ಲಿ; ತನ್ನೂರ ತಳವಾರ
ಎಡಚುಕ್ಕೆ ವೆಂಕಟನ ಮಗಳೆ? — ತಂಗಿ.
ಎಲ ಎಲಾ ಈ ಹುಡುಗಿ ಏನು ಬೆಡಗಿ! ಇವಳು
ಎಲ್ಲಿ ಕಲಿತಳು ಇಂತು ನಿಲುವ ಭಂಗಿ?

## ಗೌಡರ ಮಲ್ಲಿ

ಹೆಂಡಿರಾದವಳಳಿದ ಹದಿನೈದು ದಿವಸದಲೆ
ಮನೆಯ ಹಿರಿಯರು ಕಿರಿಯರೆಲ್ಲ ಸೇರಿ,
ಹರೆಯದಲಿ ಒಂಟಿಯಾಗಿರಬೇಕು ಏತಕೆ,
ತರುವೆವೆಂದರು ಹೆಣ್ಣನೊಂದ ಬೇರೆ.

ಬೇಡ, ಎಂದನು ಗೌಡ. ಎಳೆತನದಿ ಕೈ ಹಿಡಿದು
ಜೊತೆಗೆ ಜೊತೆಯಾಗಿದ್ದು ಬಾಳ ಬೆಳಗಿ
ಕೆಳೆಯಾದವಳು ಕಣ್ಣ ಮರೆದೊಡನೆ ಅಳಿದಳೆನೆ,
ಮರಿಯಾದೆಯೇ ಇದ್ದು ಹೋದವಳಿಗೆ?

ಕೈಗೆರಡು ನೀರು ಕೊಡುವವಳು ಇರಬೇಕೆಂದು
ತಾಯಿ ಹೇಳಿದಳು. ಕೈನೀರಿಗಾಗಿ
ಗಂಡಾದವನು ಎಷ್ಟು ಹೆಣ್ಣ ಬೇಕಾದರೂ
ತರಬಹುದೆ ಮುದಿಯಾಗಿ ಬೆನ್ನು ಬಾಗಿ?

ಅಲ್ಲದೆಯೊ ಮನೆತುಂಬ ಹೆಂಗಸರು; ಹೊಸಬಳಿಗೆ
ಅತ್ತೆ, ಓರಗಿತಿ, ನಾದಿನಿ, ಅತ್ತಿಗೆ;
ತನ್ನ ಸುಖಕೆಂದು ಒಂದೂ ಅರಿಯದೆಳೆಹೆಣ್ಣು
ಇಲಿಯ ಕರೆತಹುದೆ ಹಾವಿನ ಹುತ್ತಿಗೆ?

# ಗೌಡರ ಮಲ್ಲಿ

ಮನದಮೊಗೆಯಲಿ ಆಸೆ ತೂತು; ಅದ ತಡೆದಿರುವ
ಕೆಚ್ಚು ಮೆತ್ತಿರುವ ಹುಸಿ ಹಸಿಯ ಮಣ್ಣು.
ಇದರ ಬಲ ಎಷ್ಟೆಂದು ಚುಚ್ಚಿ ನೋಡುವುದಿದಿರು
ಬೆಡಗಿನಲಿ ನಿಂತ ಎಳೆಹೆಣ್ಣ ಕಣ್ಣು.

ಗೌಡನಿಗೆ ನಡುಹರೆಯ; ಮದುವೆ ಬೇಡೆಂಬುದಕೆ
ಮುದಿಯೆಂಬ ಮಾತನೊಡ್ಡಿದ್ದನಹುದು.
ಒಗ್ಗಿದ್ದ ಹೆಣ್ಣಳಿದ ಹೊಸತರಲಿ ಯಾರಿಗೂ
ಮೂರು ದಿನ ಇಂತ ವೈರಾಗ್ಯಬಹುದು.

ಮೂರು ದಿನ ವೈರಾಗ್ಯವೆನೆ, ನಾಲ್ಕನೆಯ ದಿವಸ
ಅಳಿಯದಾಸೆ ಬರುವುದೆಂದಲ್ಲ ಅರ್ಥ;
ಅದರಾಸೆಯವಸ್ತು ಬರೆ ಮನಸು ಒಲೆಯುವುದು;
ಇಂತು ಮಾಡಿಹನೆಮ್ಮ ಸೃಷ್ಟಿಕರ್ತ.

ಗೌಡ ತನ್ನನು ನೋಡುತಿಹನೆನ್ನುವುದ ಮಲ್ಲಿ
ತಿಳಿದಳೊಮ್ಮೆಯಲಿ. ಏನಾದರೊಂದು
ಮಾತ ಆಡುವುದು ಸರಿಯೆಂದು ತೋರಲುಮನಕೆ
ಅವನ ನುಡಿಸಿದಳು ಓಸರಿಸಿ ನಿಂದು.

## ಗೌಡರ ಮಲ್ಲಿ

‘ ಮೂರುದಿನ ನಿಮಗೆ ಮೈಯಲ್ಲಿ ಚೆನ್ನಿರಲಿಲ್ಲ
ಎಂದು ಹೇಳಿದ ನಮ್ಮ ವೆಂಕಟಣ್ಣ.
ಈಗ ವಾಸಿಯೆ ಗೌಡರೆ? ಹೊಲಕೆ ಬಂದಿರೆ.
ಇಲ್ಲ, ಅಂತೆಯೆ ಇದೆಯೊ ದುಗುಡ ಇನ್ನಾ ? ’

ಜ್ವರವಾಗಿ ಮಲಗಿದ್ದ, ನಿಜ, ಗೌಡ. ಊರಜನ
ಹೆಂಡಿರಿಲ್ಲದೆ ಇಹುದೆ ಇವನ ವ್ಯಾಧಿ
ಎಂದಾಡಿಕೊಂಡಿತ್ತು: ಪಿಲ್ಲಿ ಮಾದಿಗೆ ಹೇಳಿ,
ಲಕ್ಕಮ್ಮ ಗೌಡಿತಿಗೆ ಹೇಳಿ ಮಾದಿ.

ಮಲ್ಲಿ ಬೇಡರಹೆಣ್ಣು ಸರಿ; ಅಂತು ದಿಟವರಿಯೆ
ಬೇಡ ಎನ್ನುವುದೊಂದು ಬರಿಯ ಮಾತು;
ಹೆಣ್ಣು ಎಂಬುದೆ ಸತ್ಯ; ಅದರ ಹೆಚ್ಚಳದಲ್ಲಿ
ಎಲ್ಲೊ ಮರೆವುದು ಅವಳ ಜಾತಿ ಸೋತು.

ಒಳಗೆ ಬರಬಿಡೆನೆಂದು ಮನದಬಾಗಿಲನೊಮ್ಮೆ
ಇಕ್ಕಿ ಬಡಿಯುವೆಯೊ ಬಡಿ; ಹಿಂಚುಮುಂಚು,
ಏನೆಂದು ಎಂತೆಂದು ತಡೆದೆಯೋ, ಕಂಡಿಯಲಿ
ಎಡೆಯ ಸಾರಿತು ಹೆಣ್ಣನಗೆಯ ಸಂಚು.

## ಗೌಡರ ಮಲ್ಲಿ

ಮಲ್ಲಿ ನಿಂತಾರೀತಿ, ನಗುತ ನುಡಿದಾರೀತಿ,
ನಮ್ಮ ಗೌಡನ ಎದೆಯ ಹೊಕ್ಕು ಅಲ್ಲಿ
ಪಡೆಗಟ್ಟಿನಿಂತ ದುಮ್ಮಾನವನು ಚೆದರಿಸಿತು,
ಮೋಳೆಯಲಾಟದ ಆಸೆ ಮನಸಿನಲ್ಲಿ.

ಸತ್ಯವಂತನು, ಹೆಣ್ಣು ಬೇಡೆಂದವನು, ಗೌಡ
ಇಂತಾದನೇ? ಏನು ವಿಧಿಯ ಚದುರೊ?
ಸಿಲುಕದೋಡುವ ಬೇಟೆಯನು ತಡೆವುದೇನೊ ಅದು?
ಯಾರು ಬಲ್ಲರು? ಯಾವ ಹುಲಿಯೊ, ಹೊನರೊ?

ಏನೊಂದನೂ ತಿಳಿಯದೆಳೆಹೆಣ್ಣು ಎದುರಿನಲಿ
ಬಹಳ ದೊಡ್ಡವಳೆಂಬ ತೆರದಿ ನಿಂತು
ಮಾತನಾಡಿಸುತಿರಲು ನಗುತನುಡಿದನು ಗೌಡ,
ಊರ ಹೆಂಗಸರ ನುಡಿ ಮನಕೆ ಬಂದು.

‘ ದುಗುಡವೇನೂ ಇಲ್ಲ ಈ ಹೊತ್ತು; ಅಂದರೆ
ಚೆನ್ನಾಗಿ ಗುಣವಾಗುವುದಕೆ ಮದ್ದು
ಏನೇನೊ ಹೇಳತಿದ್ದಾರೆ; ಆ ಔಸದ
ಯಾರು ತರಬೇಕು? ಎಲ್ಲಿಂದ ಕದ್ದು? ’



ತಿನಬೇಕು, ಗುಣವಿಲ್ಲ ಇದನು ಬಿಟ್ಟು

## ಗೌಡರ ಮಲ್ಲಿ

‘ ಏನು ಔಸದವಂತೆ ? ’ ಎಂದಳರಿಯದ ಮಲ್ಲಿ.
‘ ಯಾವುದೋ ಕರಿಮಿಂಚ ಗೊಂಡೆಯಂತೆ;
ಅದರ ಮುಡಿ ಹಾವಹೆಡೆ; ಅದರಡಿಗೆ ಅರ್ಧಹೆರೆ:
ತಾರೆ, ಸಂಪಿಗೆ, ಕಳಿತ ತೊಂಡೆಯಂತೆ;

‘ ಗೊಂಡೆಯನು ಎದೆಗಿಟ್ಟು, ಮುಡಿಯ ಮೂಗಿಗೆ ಹಿಡಿದು,
ಹೆರೆತಾರೆಯನು ಕೆನ್ನೆ ತುಟಿಗೆ ಇಟ್ಟು,
ಒಂದು ದಿವಸಕೆ ಮೂರು ಹೊತ್ತು ತೊಂಡೆಯಹಣ್ಣ
ತಿನಬೇಕು ಗುಣವಿಲ್ಲ ಇದನು ಬಿಟ್ಟು. ’

‘ ಯಾಕೆ ಬಿಡಬೇಕು ? ಗೌಡರಿಗೇನು ಕಡಿಮೆಯೆ ?
ತರಿಸಿಕೊಳಬಾರದೇ ಮದ್ದುಗಿಡವ ?
ಯಾವ ಸೋಜಿಗದ ಬೇರೋ ಏನೊ ! ಎಲ್ಲಿದೆಯೊ !
ಅಣ್ಣನಿಗೆ ಹೇಳಲೇ ತಂದುಕೊಡುವ ? ’

‘ ಮದ್ದೇನೊ ಸೋಜಿಗ; ಅಂದರಲ್ಲಿಡೆಯು ಇದೆ.
ಅಂದರೂ ಮುಪ್ಪಾಗ ಮೂರುವೀಸ
ಮುಟ್ಟಬಾರದ ಹಾವು ಹೆರೆತಾರೆಯಾಗಿಹುದು.
ದುಡುಕಿ ಹಿಡಿಯುವೆನೆನಲು ಬಹಳ ಮೋಸ. ’

## ಗೌಡರ ಮಲ್ಲಿ

'ಎಲ್ಲಿಡೆಯು ಇದೆಯೆ ಆ ಮದ್ದು ? ಇದೆಯೋ ಇಲ್ಲಿ ? '
'ಇಲ್ಲಿ ಇದೆ ' ' ತೋರಿದಿರೆ ನಾನು ಮುಟ್ಟೆ
ನಿಮ್ಮ ತುಟಿಗಿಟ್ಟೇನು, ತೋರಿ ' ಎಂದಳು ಮಲ್ಲಿ,
ಇವನ ಬದುಕಿಪೆನೆಂಬ ಆಸೆಹುಟ್ಟೆ.

ತನ್ನ ರಕ್ಷಿಸಲೆಂದು ತವಕಪಡುತಿಹ ಹೆಣ್ಣ
ಸಡಗರಕೆ ಗೌಡ ಮನಸೋತನಂದು ;
ಇವಳ ಕೂಡುವೆನೆ ಎಂಬೆಡೆಗೆ ಬಂದಿರೆ ಮನಸು,
ಎಲ್ಲಿಂದಲೋ ಹೊರಟ ಮಾತಿನಿಂದ.

ಹೊಲದ ಅಂಚಿನ ಒಂದು ಮರದ ಮೇಗಡೆ, ಎರಡು
ಗೊರವ ಎಲ್ಲಿಂದಲೋ ಹಾರಿ ಬಂದು
ಒಂದು ಕೊಂಬೆಯ ಕೊನೆಗೆ ಜೊತೆ ಆಗಿ ಕುಳಿತಿಹವು,
ಜೊತೆಯಿಂದ ಸುಖಪಡಿಸಿ ಒಂದನೊಂದು.

ಭೂಮಿ ಬಾನನು ನೋಡಿ ನಗುತಿಹುದು; ಬಾನ್ ಅಂತೆ
ಭೂಮಿಯನು ನೋಡಿ ಮುಖ ತಿಳಿಯುತಿಹುದು;
ಚಳಿಯ ದಿನವಾದರೂ ನಭವತುಂಬಿದ ಬೆಳಕು
ಜಗಕೆ ಹೊಸತಾವುದೋ ಕಳೆಯ ತಹುದು.

## ಗೌಡರ ಮಲ್ಲಿ

ಮನೆಯಿಂದ ಹೊರಟ ಹೊತ್ತಲಿ ಮನವ ಮುಸುಕಿದ್ದ
ಹಿರಿಯಬೇಸರು ಜಾರಿ ದೂರಸರಿಯೆ,
ಗೌಡನೆದೆ ಎಂತೊ ತಣಿಯಿತು: ಬಾಳುವೆಯ ಬೆಳಗೆ
ಒಲಿಯುಬಲ್ಲೆಳೆಹೆಣ್ಣ ನಗೆಗೆ ದೊರೆಯೆ?

ನಗೆಮುಗುಳ ಮುಖಮುದ್ರೆಯಲಿ ಮಲ್ಲಿ ಎದುರಿನಲಿ
ನಿಂತಪರಿ ಊರುತಿರೆ ಮನದಾಳಕೆ
ಏನ ಹೇಳವುದು ಎನ್ನುವುದು ಕಾಣದೆ ಗೌಡ
ತೊಡಕಿದನು ಹೆಣ್ಣಹಂಗಿನ ಜಾಲಕೆ.

ಇವನು ಲೋಕವ ಕಂಡವನು; ಕಾಣದವಳವಳು.
ಅರಿತಿವನು ಬಲಿತಿಹನು; ಮಲ್ಲಿ ಎಳಸು.
ಬಾಳ ಹೊಸ್ತಿಲ ಮುಂದೆ ಇನ್ನೀಗ ಬರುವಳಿಗೆ
ತಿಳಿಯುಬಹುದೆಂತಿವನ ಬಲ್ಲಬಳಸು?

ಮಾತನಾಡದೆ ಕುಳಿತ ಊರಹಿರಿಯನ ನೋಡಿ
ತಪ್ಪುನುಡಿದೆನೊ ಎಂದು ಅಂಜಿ ಮಲ್ಲಿ
'ಸಿಟ್ಟಾಯ್ತೆ ಗೌಡರೆ' ಎಂದುಸುರಿದಳು, ಹಸುಳೆ
ಬಟ್ಟೆಯರಿಯದ ರೀತಿ ಸಂಜೆಯಲ್ಲಿ.

## ಗೌಡರ ಮಲ್ಲಿ

ಅರಿಯದೆಳೆಹೆಣ್ಣಿನಲಿ ಅತಿಸರಸವನು ಮಾಡಿ
ಬಿಡಿಸಿಕೊಳ್ಳುವುದೆಂತು ಎಂದರಿಯದೆ,
ಗೌಡ ಬೇಸರಗೊಂಡ, ಅವನ ಕಾಣದೆ ಮನಸು
ನಲಿಯುತಿರೆ ಎದಿರಾಂತ ಸೌಂದರಿಯದೆ.

ಅಷ್ಟರಲಿ ಕಾವಲಿಲ್ಲದ ಯಾವ ಹೊಲದಲ್ಲಿ
ಅವರೆ ತಟ್ಟೆಯ ಕಳುವುದೆಂದರಸುತ
ಪಿಲ್ಲಿ ಆ ಬಳಿಸಾರೆ ಅವಳ ಪ್ರೌಢಿಯ ನೋಟ
ಮಲ್ಲಿ ಗೌಡರ ಪರಿಯನಾವರಿಸಿತು.

ಅವರೆ ತಟ್ಟೆಯ ಹುಳಿಯ ರುಚಿಯ ಬಲ್ಲಳು ಪಿಲ್ಲಿ ;
ಆದರೆಯು ಇವರಿದ್ದ ತೆರನ ಕಂಡು
ಇದರ ಪರಿಯರಿವ ಹಿರಿರುಚಿಗೆ ಹೆಣ್ಮನ ಸೋತು
ನಿಂತಳಾಬಳಿಯೊಂದುಮರನ ಹಿಂದು.

ಹಿರಿಯರುಚಿಯೇನೆ? ತನ್ನನು ಗಂಡುಸೋಕಿದುದು
ಬರಿಯ ನೆನವಾಗಿರುವ ನರೆತ ಹೆಣ್ಣು
ಎಳೆ ಹೆಣ್ಣು ಗಂಡಾಡೆ ನೋಡಿ ಮನ ಅರಳುವುದು,
ಕೋಳಿಗರಳುವ ರೀತಿ ನರಿಯಕಣ್ಣು.

## ಗೌಡರ ಮಲ್ಲಿ

ಮರದ ಹಿಂದಕೆ ಸಾರುವವಳ ಕಂಡನು ಗೌಡ;
ಊರಹಿರಿಯನು ತನ್ನ ತಳವಾರನ
ತಂಗಿಯನು ಕೆಡಿಸಿದನು ಎಂದಾಳು ಇವಳೆಂದು
ಅಂಜಿದನು: ಮೂಳಿ ಬಿಡುವಳು ಯಾರನು?

ಪಿಲ್ಲಿ ಕೆಟ್ಟವಳಲ್ಲ. ಆದರೂರಿನ ಮಂದಿ
ಅವಳ ಬಾಯಿಗೆ ಬೀಳುವುದನೊಲ್ಲದು.
ಕಂಡುದಕೆ ಕಾಣದುದ ಬೆರಸಿ ಅದ ಕಹಿಮಾಡಿ
ಅಳಿವಳಿವಳೆಂದು ಕೊಳಗದೆ ಬಳ್ಳದೆ.

‘ ನಾಳೆಯೋ ನಾಡಿದ್ದೊ ಹೊಲಕೆ ಆಳನು ಬಿಡಲಿ
ಅಣ್ಣನಿಗೆ ಹೇಳಕ್ಕ ’ ಎಂದೆನ್ನುತ
ನೆವಕೆ ಮಾತನು ಮುಗಿಸಿ ಗೌಡ ಹೊರಟನು ಮನೆಗೆ,
ಇಂತು ಉಳಿಸುತ ತನ್ನ ಸಂಪನ್ನತೆ.

ಪಿಲ್ಲಿ ಬಂದುದ ಕಂಡು ಗೌಡ ಓಡಿದನೆಂದು
ಮಲ್ಲಿ ಕಾಣಳು; ತನ್ನ ನುಡಿ ಕೆಟ್ಟಿತು,
ಕೋಪದಲಿ ಅವನು ನಡೆದನು, ಎಂದೆ ಎಣಿಸಿದಳು;
ಭಯ ಮನದೆ ಆಕ್ಷಣಕೆ ಗುಡ ಕಟ್ಟಿತು.

## ಗೌಡರ ಮಲ್ಲಿ

ಏನ ಮಾಡಿದೊಡೆ ಸರಿ ಆಗುವುದೊ ಈ ತಪ್ಪು,
ಅಣ್ಣನಿಗೆ ಹೇಳುವುದೆ? ಏನಗೆಯ್ವು? –
ಎನುತಿರಲು ಹುಡುಗಿ, ಅವಳೆಡೆಗೆ ಬಂದಳು ಪಿಲ್ಲಿ,
ಇವರೀರ್ವರೊಲವಿನಭಿಮಾನಿ ದೈವ.

‘ ಏನೆ ಮಲ್ಲೀ? ಒಳ್ಳೆ ಜಾಣೆ; ಗೌಡರ ಹಿಡಿದೆ;
ಆರುತಿಂಗಳ ಹಿಂದೆ ನಮ್ಮ ಹೈದ
ಬಾಯೆನಲು ಒಲ್ಲೆನೆಂದೆ. ಪಾಪ, ಪ್ರಾಯದವ,
ಅಂತೆ ಉಗುಳನು ನುಂಗಿ ಸುಮ್ಮನಾದ.

‘ ಬಸವಿಯಾದರೆ ಏನು? ಚೆಲುವಿ ನೀ, ಬಲುಚೆದುರಿ;
ಬಡಪಾಪಿ ಹುಡುಗನಿಗೆ ಸೆರಗಹೊದಿಸಿ
ಒಡವೆ ವಸ್ತುವನೇನ ಪಡೆಯುವುದು? ದೊರೆಗೊಲಿಯೆ
ಬೆಳಗುವನು ಬರಿಕೈಯ ಕಡಗ ತೊಡಿಸಿ.

‘ ಎಷ್ಟು ಕೊಟ್ಟರು ಏನಕೊಡಬಹುದು ಬಡಹೈದ,
ಚಿಂದಿ, ತಂಗಳು, ಬರಿಯಮೈ ಅಲ್ಲದೆ?
ಗೌಡನಿಗೆ ನಕ್ಕರೆ ತುಪ್ಪದನ್ನದ ಊಟ
ಪಟ್ಟೆಯಂಚಿನ ಸೀರೆ ಕೈಯಲ್ಲಿದೆ.

## ಗೌಡರ ಮಲ್ಲಿ

‘ ಮುದುಕನಾಡುವ ಸರಸ ಕುದುಪಲಕ್ಕಿಯ ಅನ್ನ ;
ಒದಗುಹಿಟ್ಟಿನ ದೋಸೆ; ಒಳಿತು ಮೈಗೆ.
ಹೊಸ ಸೇಲೆಗಿಂತ ಹಿಂದಿನ ಸೇಲೆ ಒಡಲಂದ ;
ಬಹಳ ಮಿದು ಕೈಗೆ ಆ ಹಳತು ನೇಯ್ಗೆ.’

ಸ್ವಾತಿಗೆಳಸುತಲಿರುವ ಎಳೆ ಹೆಣ್ಣ ಕಿವಿದೆರೆಗೆ
ಹಿಮದ ಹನಿಯನು ಸುರಿದಳಿಂತು ಜ್ಯೇಷ್ಠೆ.
ಅರ್ಥ ತಿಳಿಯಿತು; ಅರ್ಥ ತಿಳಿಯದಿದ್ದಿತು: ಎಳೆಯ
ಶುದ್ಧಮನಸಿಗೆ ಅರಿವುದೆಂತು ಚೇಷ್ಟೆ ?

ಬಸವಿ ನಿಜ ಮಲ್ಲಿ. ಅವಳನು ಅದಕೆ ಮುಂದಾಗಿ
ಸರಸ ಹೊಂದಿಕೊ ಎಂದು ಕರೆದಿದ್ದನು.
ಬೇಕೆನಿಸಲಿಲ್ಲ ಅವಳಿಗೆ; ಒಲ್ಲೆನೆಂದಳು ;
ಆ ಚಪಲವನು ಅವನು ಮರೆತೊದ್ದನು.

ಆದರೇನಿದು ಬಲ್ಲ ಪಿಲ್ಲಕ್ಕನಾಡಿದುದು ?
ಗೌಡ ಒಲಿವನೆ ತನ್ನ ? ಯಾಕೆ ಕನಸು ?
ಎಂಬ ಹೊತ್ತಲೆ, ಒಲಿವನೇ, ಒಲಿಸಲೇ, ಎಂದು
ಒಳಗೆ ಕುಡಿ ಒಡೆದಿತ್ತು ನಾಲ್ಕು ಮನಸು.

ಇಂತು ಸೊರೆದಿರೆ ಆಸೆ, ತಾವರೆಯ ನೀರಂತೆ
ಪಿಲ್ಲಿ ಆಡಿದ ಮಾತ ಎಲ್ಲ ಕೊಂಕು
ತರುಣಿಯೆದೆಯನು ಮುಟ್ಟಲಾರದೋಡಿತು ಹರಿದು;
ಎಳೆ ಉಸಿರ ಸೋಕುವುದೆ ಬಲ್ಲಡೊಂಕು?

‘ ಪಿಲ್ಲಕ್ಕ ನಾನು ನರಸಣ್ಣನ್ನ ಒಲ್ಲದ್ದು
ಕೋಪವಾಯಿತೆ ನಿನಗೆ? ’ ಎಂದು ಮಲ್ಲಿ
ಮನಮರೆಸಿ ನುಡಿದಳು. ಇಂತು ನಡೆವುದು ಮುಂದಿ
ಹಾವು ಎದುರಿಗೆ ಬರಲು ಸಂದಿಯಲ್ಲಿ.

ಅಕ್ಕ ಮಂತ್ರಕೆ ಅಣ್ಣ ತಂತ್ರಕ್ಕೆ ಮನಸೋತು
ಪಿಲ್ಲಿ ನಿಂದಳು ವರದಮುದ್ರೆಯಾಗಿ;
ಗೌಡನಿಗೆ ಇವಳ ಸೇರಿಸಬೇಕು ಎಂಬಾಸೆ
ಬೇರೂರಿ ಮನಸಿನಲಿ ಭದ್ರವಾಗಿ.

ಒಳಿತು ತಾನಾಗಿ ನಡೆಯುವ ವೇಳೆ ನೆರವಾಗಿ
ಹಿರಿಮೆ ಪಡೆಯುವುದೊಂದು ತೆರನ ಚೆದುರು.
ಅಂತೆ ಅದು ಒಂದು ರೀತಿಯ ನಲ್ಮೆ. ಅರ್ಘ್ಯಕೊಡ:
ಮೇಲೇರಿಬಹುದು ನೇಸರಿನ ಕದಿರು.

## ಗೌಡರ ಮಲ್ಲಿ

‘ ನರಸಣ್ಣ ಒಲ್ಲದಿರೆ ಬೇಡ; ಗೌಡನ ಒಲಿಸಿ
ನೀ ಬಾಳಿ ಸಿನ್ನವರನೆಲ್ಲ ಹೊರೆಸು;
ಏನ ಹೇಳಿದ ಗೌಡ? ನಾ ಬಲ್ಲೆ; ಒಲಿದಿಹನು;
ಸಂದಿಯಲಿ ಸಿಲುಕಿಹುದು ಹುಲ್ಲೆಗೊರಸು ’

ಎಂದು ನುಡಿದಳು ಪಿಲ್ಲಿ, ಏನೊಂದನರಿಯದೆ.
ಏನೊಂದನರಿಯದೆಯೆ ಮಲ್ಲಿ, ‘ ಅಕ್ಕ,
ಗೌಡ ಜ್ವರದೊಂದು ಔಸದದ ಮಾತಾಡಿದರು, ’
ಎನಲು, ‘ ಆ ’ ಎಂದಳು ಪಿಲ್ಲಿ ನಕ್ಕು.

‘ ಆ ಔಸದದ ಮಾತೆ ನಾನಾಡಿದುದು ಕೂಡ ’
ಎಂದು ಹೇಳುತ ಪಿಲ್ಲಿ, ಎಲ್ಲ ಕೇಳಿ,
‘ ಇಂದು ನಡುರಾತ್ರಿ ಗೌಡನ ಕಾಲ ಹಿಡಿ ಒಮ್ಮೆ,
ಗೌಡ ಆಕ್ಷಣದಿಂದ ಮಲ್ಲಿಯಾಳು. ’

ಎಂದು ಮಲ್ಲಿಗೆ ಎಲ್ಲ ಕಲಿಸಿದಳು. ಹಿರೆ ತಾರೆ
ಹಾವು ತೊಂಡೆಯ ಮಾತು ಹಳತವಳಿಗೆ;
ಉಷೆ ಕಲಾವತಿ ವೃಂದೆ ದಮಯಂತಿಯರ ಕತೆಯ
ಅರಿದವರಿಗಿಂತ ನುಡಿ ತೆಳು ಜವನಿಕೆ.

೧೫

ಗೌಡರ ಮಲ್ಲಿ

ಹಿರಿಯವಳು ಹೇಳಿದುದನೆಲ್ಲ ಕೇಳುತ ಮಲ್ಲಿ
ಬೆರಗುಗೊಂಡಳು; ಗೌಡ ತನ್ನ ಮೆಚ್ಚಿ
ಸರಸವಾಡದನೆಂದು ಹೆಮ್ಮೆಗೊಂಡಳು; ಅವಳ
ಮನತಣಿಸಿತವನ ಆ ಕಣ್ಣ ಮುಚ್ಚಿ.

ಮಾತನಾಡುತ ಪಿಲ್ಲಿ, ಕುಳಿತಿದ್ದ ತಾಣದಲಿ
ಇಷ್ಟು ಅವರೆಯ ತಟ್ಟೆಯನು ಕುಯ್ದಳು;
ಗೌಡನರಸಿತಿಯಾಗಿ ನನ್ನ ಮರೆಯದಿರೆಂದು
ನಗುತ ನುಡಿಯುತ ಅದನು ಮನೆಗುಯ್ದಳು.

ಮಲ್ಲಿ ಅಲ್ಲಿಯೆ ಕುಳಿತು ಗೌಡನಾಸೆಯ ತಾನು
ಎಂತಾದರೂ ಸಲಿಸಬೇಕು ಎಂದು
ಮನಮಾಡಿದಳು; ಅದನು ತನ್ನಾಸೆಯೆನ್ನದೆ.
ಇದು ಹೆಣ್ಣಮನದ ಪರಿಪಾಕ ಒಂದು.

* * *

## ಗೌಡರ ಮಲ್ಲಿ

ಜ್ವರ ಬಂದು ನಿಂತಂದಿನಿಂದ ಚಳಿದಿನವೆಂದು
ಗೌಡ ಮಲಗುವನೊಂದು ಕೋಣೆಯಲ್ಲಿ.
ಆ ಇರುಳು ಮಲಗಿದನು: ನಿದ್ದೆ ಬಾರದು. ಏಕೆ?
ಮನ ಕದಡಿಹಳು ಚೆಲುವ ಜಾಣೆ ಮಲ್ಲಿ.

ತೊಟ್ಟಿಯಲಿ ತುಂಬುತಿಂಗಳ ಬೆಳಕು: ಕೋಣೆಯನು
ಬೆಳಗುತಿದೆ ದೀಪಬೇಡೆಂಬ ರೀತಿ.
ಗೌಡನಿಗೆ ಮನದಿವ್ಯಥೆ: ಹೆಂಡಿರನು ಮರೆತಿವಳ
ನೆನೆವೆನೇ, ಇದು ಯಾವ ಹುಂಬನೀತಿ?

ತುಂಬುತಿಂಗಳ ಬೆಳಕು ಹಗಲೆಂದು ಭ್ರಮೆಗೊಳಿಸೆ
ಹೊರಗೆ ಅರಳಿಯಮರದಿ ಹಕ್ಕಿ ಜೋಡಿ
ಮೊರೆದೆದ್ದು ಜೊತೆಕರೆದು ಸುಮ್ಮನಾದುವು ಮತ್ತೆ,
ಹಗಲಲ್ಲ ಬಿಡು, ಎಂದು ತರ್ಕಮಾಡಿ.

ಮಗ್ಗುಲಿಗೆ ಹೊರಳಿದನು ಗೌಡ. ಎದುರಲಿ ಯಾರು?
ನೆನಹು ಹೊರಗಡೆ ಮೂರ್ತಿಯಾಯಿತೇನು?
ಯಾರು ಎಂದನು ಗೌಡ; ನಾನು ಎಂದಳು ಮಲ್ಲಿ.
ಅದೆ ರೂಪು, ಭಂಗಿ; ಅದೆ ಬಾಯ ಜೇನು.

‘ ಇಲ್ಲಿ ಯೇತಕೆ ಬಂದೆ ’ ಎಂದು ನುಡಿದನು ಗೌಡ;
ಮಲ್ಲಿ ಉಸುರಿದಳು ‘ ನಾ ಬಸವಿ ’ ಎಂದು.
ಯಾವ ಮಾತಿಗೆ ಯಾವ ಮಾತು? ಆದರೆ ‘ ಬಸವಿ ’
ಬಿಡಿಸಿತವನನು ಒಂದು ವಿಷಮದಿಂದ.

ಗೌಡ ಮಲ್ಲಿಯನಂತೆ ಕಣ್ಣಿಕ್ಕಿ ನೋಡಿದನು.
ತುಂಬುತಿಂಗಳ ಭ್ರಮೆಗೆ ಮನತೆತ್ತನು.
ಹೆಂಡಿರೇ ಇವಳೆಂದು ತಿಳಿದಂತೆ ಕೈಚಾಚಿ
ಬಂದವಳನೊಪ್ಪಿ ಇಟ್ಟನು ಮುತ್ತನು.

* * *

ಬೆಳಗಾಗ ಊರೂರೆ ಬೆರಗಾಗಿ ಕೇಳಿತು,
ಗೌಡ ಮಲ್ಲಿಯ ಕೂಡಿಕೊಂಡನೆಂದು.
ಮಲ್ಲಿ ಅಣ್ಣಗೆ ಹೇಳಿಕಳುಹಿದಳು, ಗೌಡನನು
ಕೂಡಿದೆನು, ಅವ ನನ್ನ ಗಂಡು, ಎಂದು.

## ಗೌಡರ ಮಲ್ಲಿ

ಕೈಹಿಡಿದು ಒಬ್ಬ ಸೊಸೆಯನೆ ತರದೆ ಹೋದನೇ
ಎಂದು ಗೌಡನ ತಾಯಿ ಮರುಗಿ ಇನಿಸು,
'ಒಳಿತಾಯಿತೊಬ್ಬೊಂಟಿ ನಿಲ್ಲನೇ ಇದೆ ಸಾಕು'
ಎಂದು ನುಡಿದಳು ಮತ್ತೆ ಕರಗಿ ಮನಸು.

ಓರಗಿತಿಯರಿಗೇನು? ಮನೆಗೆಲಸ ಮಾಡುವರೆ
ತಮ್ಮೊಡನೆ ತೊತ್ತಿವಳು ಮತ್ತೊರುವಳು.
ಮದುವೆಯಾದರೆ ಹೆಚ್ಚು, ಇಲ್ಲದಿರೆ ಕಡಿಮೆಯೇ?
ತಾಲಿಯಿದ್ದಂತೆಯೇ ಕಸ ಹೊರುವಳು.

ಅತ್ತಿಗೆಗೆ ನಾದಿನಿಗೆ ಮನಕೆ ಇದು ಸಂತೋಷ.
ಹೊಸಬಳಾವಳೊ ಬಂದು, ಒಡತಿಯೆಂದು
ಮನೆಯನಾಳುವಳೆಂಬ ಭಯವಿಲ್ಲ. ಈ ಮಲ್ಲಿ
ಹಾವು ಹುಳು ಅಲ್ಲ; ಬರಿಮಿಡಿತೆ ಒಂದು.

ಮಧ್ಯಾಹ್ನ ಪಿಲ್ಲಿ ಬಂದಳು. 'ಏನು ಮಲ್ಲಕ್ಕ
ಚೆನ್ನವೇ' ಎಂದು ಮರ್ಯಾದೆ ಕೊಟ್ಟು.
ನಿನ್ನೆ ಏನೇ ಎನಿಸಿಕೊಂಡವಳು ಇಂದೊಡತಿ;
ತಾನೆಂದಿನಂತೆಯೇ ಪ್ಯಾದೆ, ಮಟ್ಟು.

## ಗೌಡರ ಮಲ್ಲಿ

ಮಲ್ಲಿ ಈ ಮರ್ಯಾದೆ ಹೀನಾಯ ಒಂದನೂ
ಕಾಣಳವಳಿಗೆ ಇದ್ದುದೊಂದೆ ಚಿಂತೆ:
ದೊರೆಯ ನಲಿಸುವುದು ದೊರೆಯನು ನೋಡಿ ತಣಿಯುವುದು
ಶಿವನೆದುರಿನಲಿ ಕುಳಿತ ನಂದಿಯಂತೆ.

ಮಾಗಿ ಮಾಗುತ ಚಳಿಯ ದಿವಸಗಳು ಸಾಗುತ್ತ
ಹೊಲ ಕುಯ್ಯಲಾಗುತಿರೆ ಮಲ್ಲಿ ನಲ್ಲ
ಒಡಲೊಡಲ ತಣಿಸಿದರು, ಪ್ರೇಮರಸದೋಕುಳಿಯ
ಸೂರ್ಯ ಚಂದ್ರರ ಸಾಕ್ಷಿಯಲ್ಲಿ ಚೆಲ್ಲಿ.

ಏನು ಇದು ಬಹುವಿಷಯ ಎಂಬಿರಾ?  ನಾನಿದನು
ವಿಷಯವೆಂಬೆನೆ ಅಲ್ಲವೆಂಬರೆದುರು?
ಸೀಒಂದುವಸ್ತುಅಲ್ಲದ ಜನಕೆ ರಸತಾಳೆ
ಕಬ್ಬಲ್ಲ;  ತೆಳುವಾದ ಬೊಂಬು ಬಿದಿರು.

ಗೌಡನಿಗೆ ಮಲ್ಲಿಗೀ ತಿಳಿವಿಲ್ಲ.  ಹೊಸ ಒಲವ
ಸುಖಕವರ ಬಾಳಾಗ ಒತ್ತೆಯಾಗಿ
ಮೆಯ್ಯ ಸವಿಯುತ ಅವರು ಇರುವುದನೆ ಮರೆತರು,
ಭೂಮಿಯೇ ಸ್ವರ್ಗಕ್ಕೆ ದತ್ತುಹೋಗಿ.

ಮಾಂಸ ಮಸ ಮೊದಲಹ ವಿಕಾರದಿಂದಾನಂದ
ಬರಬಹುದೆ? ಈ ಜಗವ ಮಾಡಿದವಗೆ
ಇದೆ ಪದ್ಧತಿಯೊ ಏನೊ? ಇಂತಲ್ಲದಿರೆ ಎಂತು
ಮಣ್ಣು ಕಸ ಹಣ್ಣು ಹೂ ಆಗುವ ಬಗೆ?

* * *

ಎರಡು ಮಕ್ಕಳ ಹೆತ್ತು ಕಳೆದುಕೊಂಡಳು ಮಲ್ಲಿ;
ಗಂಡು ಹುಟ್ಟಿದ ತರುಣದಲೆ ತೀರಿತು.
ಹೆಣ್ಣು ಬೆಳೆಯಿತು ಆರುವರುಷ; ಹೊನ್ನಲಗಂತೆ
ಹೊಳೆದು, ಎಳೆಹೆರೆಯಂತೆ ಕಳೆಯೇರಿತು.

ಆರುವರುಷದ ಹುಡುಗಿ ಒಂದು ದಿನ ಹಸು ಹಾಯ್ದು
ಗಾಯವಡೆದುಸಿರುಳಿದು ಕಣ್ಮುಚ್ಚಿತು.
ಮಲ್ಲಿ ಗೌಡರ ಆಸೆ ಒಲವಿನೆರಕದ ಗೊಂಬೆ
ಎದೆಯಿಂದ ಕೆಡೆದುರುಣೆ ಮಣ್ಣಚ್ಚಿತು.

ಮಲ್ಲಿ ಅತ್ತಳು: ಕಣ್ಣನೊರಸಿಕೊಂಡಳು. ಅತ್ತೆ
ಗೌಡ ಉಳಿದೆಲ್ಲರನು ಸಂತೈಸುತ,
' ಸಾಕಿನ್ನು, ಅಳು ಬಿಡಿರಿ, ' ಎಂದವರ ಗದರಿದಳು;
' ತೊತ್ತು ಹೆತ್ತುದಕಿಷ್ಟು ಚಿಂತೆ ಹೊಸತು. '

ಇಷ್ಟು ವೇಳೆಗೆ ಮಲ್ಲಿ ತನ್ನ ಗೌಡಗೆ ಮಾತ್ರ
ಮೆಚ್ಚಾದಳಲ್ಲ; ಮೆಚ್ಚವಳತ್ತೆಗೆ;
ಮೆಚ್ಚು ಅತ್ತಿಗೆಗೆ ನಾದಿನಿಗೆ, ಮೆಚ್ಚೆಲ್ಲರಿಗೆ;
ಮೆಚ್ಚು ಊರಿಗೆ; ಊರ ಆಸುತ್ತಿಗೆ.

ಮನೆಗೆಲಸವನು ಜೀತದಂದದಲಿ ಮಾಡುವಳು;
ಗೌಡನುಣುವಂದವನ ಬಳಿಗೆ ಸಾರಿ
ಅವನುಣುತಲಿರುವ ಮುದ್ದೆಗೆ ಕೈಯಹಿಡಿಯುವಳು;
ಅದನು ತಾನುಣ್ಣುವಳು, ಗಳಿಗೆ ಮೀರಿ.

ಏನು ಶಾಸ್ತ್ರವಿದೆಂದು ಕೋಪವಾಡುವ ಗೌಡ.
ಮಲ್ಲಿ ' ಈ ಶಾಸ್ತ್ರ ನನ್ನದು ' ಎಂಬಳು.
' ಈ ಒಡಲು ನಿನ್ನದು. ನಿಜದಿ ಇದಕೂ ಹಿಟ್ಟು
ನೀ ತಿನಿಸಬೇಕು ' ಎನ್ನುತ ತಿಂಬಳು.

## ಗೌಡರ ಮಲ್ಲಿ

ಹಲ್ಲಿಲ್ಲದತ್ತೆಗೆ ಎಲೆ ಅಡಿಕೆಯನು ಕುಟ್ಟಿ
ಕೊಡುವುದಿವಳದೆ ಕೆಲಸ ಜಾವಕೊಮ್ಮೆ.
ಮುದುಕಿ ಮೈನೋವೆನಲು ಒತ್ತುವಳು; ತನಗೇನು,
ಯಾವ ಕೆಲಸ? ಇಲ್ಲ, ಯಾವ ಹೆಮ್ಮೆ?

ಅತ್ತಿಗೆ ನಾದಿನಿ ಓರಗಿತಿಯರ ಜೊತೆಗೆ
ನಗುತ ಇರುವಳು. ತನ್ನ ಸೀರೆ ಒಗೆಯೆ
ಕೊಳಕೆ ಹೋಹೆಂದು ಅವರರಿವೆಗಳನೊಯ್ಯುವಳು.
ಒಲ್ಲರಾರಿಂತಿವಳು ಮೇಲ ಬಗೆಯೆ?

ತಾನು ಗೌಡನ ಕೂಡಿದೊಂದು ವರುಷಕೆ ಮಲ್ಲಿ
ಮೂರು ಹಣದೊಂದು ಸೀರೆಯನು ಕೊಂಡು
ಪಿಲ್ಲಿಗಿತ್ತೆಂದಳು: 'ಪಿಲ್ಲಕ್ಕ ನಿನ್ನಿಂದ
ನಾ ನನ್ನ ದೊರೆಯ ಸೇರಿದೆನು. ಕಂಡ್ಯಾ?'

ಬತ್ತ ಕುಟ್ಟಿದರೆ ರಾಗಿಯ ಬೀಸಿದರೆ, ಒಂದು
ಹಿಡಿ ತನಗೆ, ಎಂದು ಅತ್ತೆಯನು ಕೇಳಿ
ಕೂಡಿಸುತ ಗುಡಿಗೊ ಭಿಕ್ಷಕ್ಕೊ ಅದನು ನೀಡುವಳು.
ದಿನದಿನಕೆ ಹಸನಾಯಿತವಳ ಚಾಳಿ.

ಗೌಡನಿಗೆ ಇವಳ ಬೆಳವಿಯು ನೋಡಿ ಅಚ್ಚರಿ.
ತೃಣವನರಿಯದೆ ಬಂದ ಮೊದ್ಲು ಹೆಣ್ಣು
ಎಷ್ಟು ಕಲಿತಳು! ಅಂತೆ ಎಷ್ಟು ಚೆನ್ನಾದಳು!
ಮೊಲ್ಲೆಯೆನೆ ಹಲ್ಲು, ಕಿವಿಯುದ್ದ ಕಣ್ಣು.

ಮುಗಳು ತೀರಿದ ಸಮಯ ಬೋಯಿಗಳ ಗುಂಪೊಂದು
ಊರಿಗೈತರೆ ಮಲ್ಲಿ, ಮುಕ್ಕಂಡುಗ
ಎರಡು ಐಗಳ ರಾಗಿ ಮಾತಾಡಿ, ಕೊಳ ಒಂದೆ
ಹೊಯ್ಸಿದಳು, ಊರ ಏರಿಯ ದಂಡೆಗೆ.

ಧರ್ಮದಲಿ ನಾವಿಷ್ಟು ಮಾಡಿಕೊಡುವೆವು ಎಂದು
ಬೋಯಿಗಳು ಹಿಟ್ಟಿಗೇ ಕಲ್ಲನೊಡೆದು
ತಿಂಗಳೂ ದಿವಸ ಕಟ್ಟಿದರು. ಕೊಳ ಚೆಲುವಾಯ್ತು
ಜಲದೇವಿ ಪೂಜೆ ಶುಭದಲ್ಲಿ ನಡೆದು.

ಕೊಳಕೆ ಗೌಡರ ಬಾವಿ ಎಂದು ಹೆಸರಿರಲೆಂದು
ಮಲ್ಲಿ ಎಂದಳು. ಗೌಡ ಆಗದೆಂದ:
ತೊತ್ತಾಗಿ ದುಡದ ರಾಗಿಗೆ ತೆಗೆದ ಬಾವಿ ಇದು,
ಕೊಳ ನಿನತು ಎಂದ, ಅನುರಾಗದಿಂದ.

## ಗೌಡರ ಮಲ್ಲಿ

ಕೊನೆಗೆ ಜೋಯಿಸರೊಂದು ನ್ಯಾಯವನು ಮಾಡಿದರು:
‘ ಕೊಳವ ಮಲ್ಲಿಯ ಗೌಡರದು ಎನ್ನುವ;
ಬಾವಿ ಗೌಡರದು, ಗೌಡರು ಮಲ್ಲಿಯವರಾಗಿ;
ಇಟ್ಟು ನೋಡಿರಲಿ ಹೆಸರಿನ ಚೆನ್ನವ.’

ಕೆಲದ ನೆಲವನು ಕೊಂಡು ತೋಪು ನೆಡಿಸಿದ ಗೌಡ.
ಹತ್ತುವರುಷದ ದಿವಸ ಅದನು ಬೆಳೆಸಿ,
ದೇವರನು ಬಿಜಗೈಸಿ, ವನಭೋಜನವ ನಡೆಸಿ,
ಅದನು ಮಲ್ಲಿಯ ತೋಪು ಎಂದ ಎಳಸಿ.

ಮಲ್ಲಿಯೆಂದಳು: ‘ ಗೌಡನನು ಬಿಟ್ಟು ಬರಿ ಮಲ್ಲಿ
ಯಾವ ಕೆಲಸಕೆ ಬಹುದು? ಎಸೆಯಿರತ್ತ.
ಗೌಡ ತೊಟ್ಟರೆ ಜೋಡು; ಕಳೆಯೆ ಬರಿಚಕ್ಕಳ;
ಬಹಳ ಮಾಡಲು ಸಲ್ಲ ಬರಿಯ ತೊತ್ತ.

‘ ತೋಪ ಗೌಡರ ಮಲ್ಲಿಯದು ಎನಲಿ,’ ಎಂದಳು.
ಆ ಹೆಸರೆ ನಿಂತಿಹುದು ತೋಪಿಗಿಂದೂ.
ಬಹುವರ್ಷ ಇಲ್ಲಿ ಗಿಡದೊಡನೆ ಕಾದಲರೊಲವ
ಬೆಳೆಸಿದರು ಸರಸಸಲ್ಲಾಪದಿಂದ.

## ಗೌಡರ ಮಲ್ಲಿ

ಸಂಕ್ರಾಂತಿಯಲಿ ಅಲರ ಮೇಲ ಸುಂದರಿ ತೌರ
ಶುಭವ ಬಯಸಲು ಬರುವ ಉತ್ಸವಕ್ಕೆ
ಮಲ್ಲಿ ಗೌಡನ ತಾಯ ಹೆಸರಲ್ಲಿ ಮಂಟಪವ
ಕಟ್ಟಿಸಿದಳೆತ್ತರದ ರಚ್ಚೆಯಿಕ್ಕಿ.

ಮದಿವೆಯಾದವಳು ಗಂಡಗೆ ಕೊಡುವ ಎಲ್ಲ ಸುಖ
ಮದಿವೆ ಆಗದ ಮಲ್ಲಿ ತನ್ನರಸಗೆ
ಇತ್ತಳೆಂದೆನೆ ಮಾತು ಬಹು ಕಡಿಮೆ ಆಗುವುದು;
ಅಷ್ಟು ಚೆಲುವಿವರುಸಿರ ಹೊನ್ನ ಬೆಸುಗೆ.

ಗೌಡಿಕೆಯ ಕೆಲಸದಲಿ ಊರ ಮಂದಿಯ ಜೊತೆಗೆ
ಚಾವಡಿಯೊಳಿರುವಂದು ಅಲ್ಲೆ ಇದ್ದು
ಎರಡಡಕೆ ಸುಣ್ಣ ಹಚ್ಚಿದ ಎಲೆಯ ಕೊಡುವಳೇ
ಹೆಂಡಿರಾದವಳು? ಇದು ಎಲ್ಲಿ ಸುದ್ದಿ?

ಮಲ್ಲಿ ಇದ ಮಾಡುವಳು; ಎಲ್ಲಿ ಹೋದರೆ ಅಲ್ಲಿ
ಜೊತೆಯಲಿರುವಳು; ಬೇರೆ ಕೆಲಸವಿಲ್ಲ.
ಇಂತು ಬಾಳಿದರಿವರು; ಈ ಪ್ರೇಮಪರಮಾನ್ನ
ಕೊನೆಗು ಬಿಸಿಯಾಗಿತ್ತು, ಹಳಸಲಿಲ್ಲ.

## ಗೌಡರ ಮಲ್ಲಿ

ಮನೆಯ ಮಕ್ಕಳು ಬೆಳೆಯೆ, ಮದಿವೆಗಳ ಮಾಡಿದರು;
ಸೊಸೆಯದಿರು ಬೇರೆ ಅತ್ತೆಯ ಕಾಣರು;
ತೊತ್ತಾಗಿ ಬಂದರೂ ಅತ್ತೆಯಾದಳು ಮಲ್ಲಿ;
ಯಾರೇನು ಮಲ್ಲಿಗೊಲಿಯದೆ ಮಾಣರು.

ಯಾವ ಮಂತ್ರವೊ ಯಾವ ತಂತ್ರವೋ! ಎಲ್ಲಿಂದ
ಕಲಿತಳೋ ಮಲ್ಲಿ ಈ ಎಲ್ಲ ಹದಿರ?
ಕುಲ್ಲ ಕಾಣದ ಒಳ್ಳೆ ಮನಸೊಂದು ಅವಳದು.
ಇದಕೆ ಸಮನಾಗುವುದೆ ಬಲ್ಲ ಚದುರು?

ಇಷ್ಟರಲಿ ಬಾಳ ಮುಗಿಸಿದಳು ಗೌಡನ ತಾಯಿ,
ಮಲ್ಲಿಯಿಂದೆಲ್ಲ ಸೇವೆಯನು ಕೊಳುತ.
'ಮಗಳಾದೆ, ಸೊಸೆಯಾದೆ, ಮನೆಗೆ ನೀ ಸಿರಿಯಾದೆ
ಅಪರಂಜಿ ನೀ' ಎಂದವಳ ಹೊಗಳುತ.

ಮಲ್ಲಿ ಗೌಡನನು ಸಂತಯಿಸಿದಳು; ಮಕ್ಕಳಿಗೆ
ತಾನೆ ಅಜ್ಜಿಯ ತಾಣವನು ಕೊಂಡಳು.
ಹೆತ್ತ ಮಕ್ಕಳು ಇಲ್ಲದವಳು ಅದಕೂ ಮಿಗಿಲು
ಮಕ್ಕಳನು ಹೊರೆವ ಸೌಖ್ಯವನುಂಡಳು.

## ಗೌಡರ ಮಲ್ಲಿ

*　　*　　*

ಐವತ್ತು ವರುಷದಿನ ಗೌಡ ಮಲ್ಲಿಯರಿಂತು
　　ಹೆಣ್ಗಂಡು ಬಾಳಿನಲಿ ಜೊತೆ ನಡೆದರು.
ಮರೆದು ಹೋದುವು ಜಾತಿ, ಮದಿವೆಯೆಲ್ಲದ ಮಾತು;
　　ಹಿರಿಯೊಲವ ಹೆಸರನಿರುವರು ಮುಡಿದರು.

ದಿನ ಕಳೆದು ಗೌಡ ದೇವರ ಸೇರೆ ಹೊರಟನು.
　　ಮಲ್ಲಿ ಧೈರ್ಯದ ಮಾತಗಳನಾಡುತ
ಎದುರಿನಲಿ ಕುಳಿತವಳು ಇಂತೆಂದು ಬೇಡಿದಳು,
　　ಕೈಬೆರಳು ಅವನ ಕುರುಳಿನೊಳಾಡುತ.

‘ ನೀನೀಗ ಹೋಗುತಿಹೆ; ಹಿಂದೆಯೇ ನಾ ಬರುವೆ.
　　ಹೋದವನು ನನ್ನ ಮರೆಯುವುದು ಸಲ್ಲ.
ಕೈಹಿಡಿದು ಹೋದವಳು ಅಲ್ಲಿಹಳು, ಸೇರುವಳು;
　　ಆದರೂ ನೆನವಿರಲಿ ಬಡವಿ ಮಲ್ಲಿ.

ಗೌಡರ ಮಲ್ಲಿ

'ಇಲ್ಲಿ ದಿನ ಮುಗಿದು ನಾ ಸನ್ನಿಧಿಗೆ ಬಂದಂದು
ಪರಿವಾರದವರು, ಇವಳಾರ ಹೆಣ್ಣು,
ಎಂದು ಕೇಳುವ ಮೊದಲೆ, ಎನ್ನವಳು, ಎನಬೇಕು.
ಗಂಡಿಂತು ನುಡಿವುದು ಅಪಾರ ಚೆನ್ನ.

'ಮದಿವೆಯಾಗಿದ್ದನೇ, ನಾ ಹೇಳಬಹುದಿತ್ತು,
ಗೌಡರವಳು, ಎಂದು; ಮದಿವೆಯಿಲ್ಲ.
ಗಂಡು ಎನತೆನ್ನದಿರೆ ಹೆಣ್ಣೆನೆಗೆ ಹೊಗಲಿಲ್ಲ.
ಎನತೆನಲು ಅದುವೆ ಹೊಸ ಕುದಿಯಬೆಲ್ಲ.

'ಬಹ ಜನ್ಮ ಮದುವೆಯೇ ಆಗುವ. ಇದು ಬೇಡ,
ಕೂಡಿಕೊಂಡವರೆಂಬ ಅಡ್ಡ ಗೀಟು;
ಒಲಿದವರು ಎಂಬುದನು ಕಂಡನೇ, ದೇವರಿಗೆ
ಇದ ನೀಡುವುದು ಏನು ದೊಡ್ಡ ಮಾತು?

'ಕೈಹಿಡಿದ ಹೆಣ್ಣಾಗಿ ಇನಿಸು ಅನಿಸನು ಅಟ್ಟೆ
ನಾ ನಿನಗೆ ತಳಿಗೆಯಲಿ ಇಕ್ಕಬೇಕು.
ಬಹು ಎಳಸುವರು ಎಂದು ಕಂಡೊಡನೆ ಸಲಿಸುವನು;
ಈ ಸಲಕೆ ತೊತ್ತೆಂಬ ಕುಕ್ಕು ಸಾಕು.'

## ಗೌಡರ ಮಲ್ಲಿ

ಗೌಡ ಛಾಪೆಯ ಕೊಟ್ಟ, ಕೈಯಲ್ಲಿ ಕೈಯಿಟ್ಟ
ಕಣ್ಣಕಣ್ಣಲಿ ನೆಟ್ಟು ಜೀವ ಬಿಟ್ಟ;
ಮಲ್ಲಿ ಮಲಗಿದಳಲ್ಲೆ ಸತ್ತುದಕು ಮಿಗಿಲಾಗಿ,
ನಲ್ಲನಳಿವಿನ ಬೇನೆ ಕುಸಿಯೆ ಕುಟ್ಟಿ.

ದೇವರಡಿಯನು ಜೀವ ನೇರ ಸಾರಲಿಯೆಂದು
ಮಲ್ಲಿ ಶಾಸ್ತ್ರವನೆಲ್ಲ ನಡೆಯಿಸಿದಳು;
ಬಹು ದಿನದ ಬಾಳ ಮೇಲ್ಮೆಗೆ ತಕ್ಕ ರೀತಿಯಲಿ,
ಅನ್ನ ಬಟ್ಟೆಯ ದಾನ, ಕಡೆಯ ಹದುಳ.

ತಾಯಿ ತೀರಿದ ಅಂದು ತಮ್ಮದಿರ ಹೆಂಡಿರು
ಪಾಲು ಮಾಡುವ ಮಾತನೆತ್ತಿದ್ದರು.
ಜೊತೆಯಾಗಿ ಬಾಳುವುದು ನೋಡುವವರಿಗೆ ಚೆನ್ನು;
ಮನೆಯಲ್ಲಿ ಎಷ್ಟೋ ಮುಸುಕಿನ ಗುದ್ದಲು.

ತಮ್ಮದಿರು ಪಾಲಾಗಿ ಬೇರೆ ಆದರು ಆಗ;
ಈಗ ಗೌಡನ ಮನೆಯ ಪಾಲ ಮಾತು
ಸೊಸೆ ಒಬ್ಬಳೆತ್ತಿದಳು. ಮಲ್ಲಿ ಆದಕೆಂದಳು:
'ಅಮ್ಮ! ಈ ಬದಿಯಲ್ಲಿ ಕಾಲು ಹೂತು

## ಗೌಡರ ಮಲ್ಲಿ

ನಾನೊಂದ ಮುದಿಗೊಡ್ಡು ಇಹೆನು. ಅಯ್ಯೋ ಪಾಪ
ಎನ್ನಿ; ನಾ ಗೌಡ ಕಳೆದೆಸೆದ ಜೋಡು.
ನಾನಿರುವವರೆಗೆ ಜೊತೆಯಾಗಿ ಇರಿ; ಆ ಮೇಲೆ
ನಿಮ್ಮಿಷ್ಟದಂತಾಗಿ ನಿಮ್ಮ ಪಾಡು.

' ನನ್ನ ಗಂಡನು ನಾನು ಎನ್ನಬಲ್ಲದು ಹಕ್ಕಿ;
ನನ್ನ ಮಗ ನಾ ಎನ್ನಬಲ್ಲದು ಹಸು;
ಅಣ್ಣತಮ್ಮಾ ಎಂದು ಅಕ್ಕತಂಗೀ ಎಂದು
ಸೈರಿಸಲು ಬಲ್ಲೆ ನೀನೇ ಹೆಂಗಸು '

ಇಂತವಳ ಬೇಡಿ ಗೌಡನ ಮಕ್ಕಳಿಗೆ: ' ಅಪ್ಪ!
ನಿಮ್ಮ ಮೊಮ್ಮಗ ನಿಮ್ಮ ತೋಳ ನೆಲೆಗೆ
ಬೆಳೆದಂದು ಪಾಲಾಗಿ; ಆತುರದಿ ಹಿರಿದಿರೆ,
ಕಾಳರ್ಧ ಹೋಗುವುದು ಆಳುಗಳಿಗೆ.

' ಮೊಮ್ಮಕ್ಕ ದುಡಿವರು, ನಾನು ಕುಳಿತಿಹೆನೆನುತ,
ಪಾಲಾಗುವರೆ ಅದೇ ಬೇರೆ ತೀರು;
ನಾ ದುಡಿದು ಮಗನಿಂದ ಆಳಿಂದ ದುಡಿಸುವೆನು
ಎಂಬವನ ನೆಲನಿಟ್ಟು ತಾರು ಮಾರು. '

ಎಂದು ಹಂಬಲಿಸಿದಳು. ಮಕ್ಕಳೇನೆಳೆಯರೆ?
ಕಿರಿಯರಿವಳಿಗೆ; ಊರ ಹಿರಿಯರವರೆ.
'ಸುಮ್ಮನಿರು, ಪಾಲ ಮಾತೇನೀಗ,' ಎಂದರು.
ಹಳೆಯ ಬಾಗಿಲೆ ಮನೆಗೆ, ಹೊಲಕೆ ತೆವರೆ.

* * *

ನಾನು ಮಲ್ಲಿಯ ಕಂಡ ದಿನ ಅವಳು ಹಣ್ಮುದುಕಿ;
ಮನೆ ಮುಂದೆ ಜಗಲಿಯಲಿ ಕುಳಿತಿರುವಳು;
ಇಹುದೊ ಇಲ್ಲವೊ ಎಂಬ ತೆಳು ಸುಕ್ಕು ಮೊಗದಲ್ಲಿ;
ಎಲ್ಲ ಮುಪ್ಪಿನ ಕುರುಹು ಅಂತೆಯೆ ತೆಳು.

ಮನೆ ನೆರೆಯ ಮಕ್ಕಳೆಲ್ಲರು ಕಣ್ಣಕಟ್ಟಾಟ
ಅಲ್ಲಿ ಆಡುವರವಳನಜ್ಜಿ ಮಾಡಿ.
ಎಳೆಯುವರು, ಕೆಲೆಯುವರು, ಕುಣಿಯುವರು; ಅವರಿತ್ತ
ಹಿಂಸೆಯೆಷ್ಟೆನಲು ಅದು ಲಜ್ಜೆಗೇಡು.



ಮಕ್ಕಳೊಡನಾಡುವಳು ನಗುತ ನಗುತ

ಆದರೂ ಮಲ್ಲಿ ಮಗುವಾದಂತೆ ಹಣ್ಣುದುಕಿ
ಮಕ್ಕಳೊಡನಾಡುವಳು ನಗುತ ನಗುತ :
'ನಾನೆ ಮುದಿಯಾಗಿಹೆನು, ಅಜ್ಜಿ ಮಾಡುವಿರೇನ?
ಹಿಮದ ನೀರಾಗುತಿದೆ ಮೈಯು ರಗುತ.'

ಇದ್ದೆರಡು ಹಲ್ಲು ಸುಲಿಹಲ್ಲು; ಆ ಕಣ್ಣಿನಲಿ
ಸುಖದೊಳದ್ದಿದ ದಿನದ ನೆನವ ಹೊಳಪು;
ಹಣ್ ಮಾಟ; ಕಿರಿದು ಕಿವಿ; ನಗೆ ಚಂದ; ಮುಪ್ಪಿನಲು
ಮಲ್ಲಿ ಆಗಿರಲಿಲ್ಲ ಅಂಥ ಕಳಪೆ.

ಮಲ್ಲಿ ತೀರಿದ ದಿವಸ ಊರೂರೆ ಅತ್ತಿತು.
ಅವಳ ಗೌಡನ ಕಾಲ ಬೆಸೆಗೆ ನೋಡಿ,
ಮಣ್ಣು ಮಾಡಿದರವಳ; ಅವಳೆಳಸಿದಂತಿರುಳು
ಗುಡಿಯಲುತ್ಸವ ಮಾಡಿ, ಒಸಗೆ ಹಾಡಿ.

ಗೌಡ ತನ್ನನು ಕೊಂಡ ದಿವಸ ದೇಗುಲದಲ್ಲಿ
ಒಂದು ಉತ್ಸವ ನಡೆಯುವಂತೆ ಮಲ್ಲಿ
ಬಹುದಿನದ ಹಿಂದೆ ಪುದಿವಟ್ಟು ಹಾಕಿಸಿದಳು.
ಎಂಥ ತೊತ್ತವಳು! ಅವನೆಂಥನಲ್ಲ!

## ಗೌಡರ ಮಲ್ಲಿ

ಮಾನವಮಿ ಕಳೆದಿಹುದು; ದೀವಳಿಗೆ ಸಾಗಿಹುದು;
ಮುಗಿಲು ಮಳೆಹುಯ್ದಾಗಿ ತೆರೆಯುತಿಹುದು;
ಚಳಿಯ ದಿನ ಬರುತಿಹುದು; ತಿಂಗಳಿದೊ ತುಂಬಿಹುದು;
ಗುಡಿಯಲ್ಲಿ ಸೊಡರ ಸಾಲುರಿಯುತಿಹುದು.

ಇಂದು ಆ ನಲ್ಲ ನಲ್ಲೆಯರ ಹೆಸರಿನ ಪೂಜೆ.
ಊರೂರೆ ಸಾರುವುದು ಅವರ ನೆನೆದು.
ಇಂತು ಬಹುದಿನ ನಡೆಯೆ ಈ ಗೌಡ ಈ ಮಲ್ಲಿ
ದೇವರಾಗುವರೇನೊ ಜನರ ಮನದಿ?

ತಾವು ಕುಳಿಯನು ತೆಗೆಸಿ ತಾವು ಗಿಡವನು ನೆಡಿಸಿ
ತಾವಾಗಿ ತಮ್ಮೊಡಲ ಕಷ್ಟದಿಂದ
ಸಾಕಿ ಬೆಳೆಸಿದ ತೋಪ ಇಪ್ಪೆಯೆಣ್ಣೆಯ ದೀಪ
ದೇವರಿಗೆ ಹಚ್ಚುವರು ಎಷ್ಟು ಮಂದಿ?

ಇದ ಗೌಡ ಮಲ್ಲಿ ಮಾಡಿದರು; ಅವರಾ ತೋಪ
ಆರಿಪ್ಪೆಮರದ ಎಣ್ಣೆಯ ಬಿಂದಿಗೆ
ಇಂದು ಬರುವುದು ಗುಡಿಗೆ; ಒಂದು ಸಾವಿರ ದೀಪ
ಆ ಯೆಣ್ಣೆಯಿಂದ ಉರಿವುವು ಒಂದಿಗೆ.

## ಗೌಡರ ಮಲ್ಲಿ

ಮಾಸವಮಿ ದೀವಳಿಗೆ ಬರುವೆಲ್ಲ ಕಾಲಕೂ
ಗೌಡ ಮಲ್ಲಿಯರ ಹೆಸರಿಂದ ದೀಪ
ಇಂತೆ ಬೆಳಗಲಿ ಬಿಡದೆ; ಜಗದೆ ಗಮಗಮಿಸಿರಲಿ
ಅವರ ಒಲವಿನ ನೆನವಿನಗರುಧೂಪ.

## ಶ್ರೀನಿವಾಸ ರಚಿತ

ಕೆಲವು ಸಣ್ಣ ಕತೆಗಳು
ಬಿನ್ನಹ (ಗೀತೆಗಳು)
ಶಾಂತಾ (ಸಣ್ಣ ದೃಶ್ಯ)
ಸಾವಿತ್ರಿ ( ,, )
ಸಣ್ಣ ಕತೆಗಳು
ಸಾಹಿತ್ಯ (ಉಪನ್ಯಾಸ)
ಅರುಣ (ಪದ್ಯಗಳು)
ವಿಮರ್ಶೆ ೧ (ಲೇಖನಗಳು)
ಉಷಾ (ಸಣ್ಣ ದೃಶ್ಯ)
ಸುಬ್ಬಣ್ಣ (ಕತೆ)
ತಾಳೀಕೋಟೆ (ಐತಿಹಾಸಿಕ ದೃಶ್ಯ)
ವಿಮರ್ಶೆ ೨ (ಲೇಖನಗಳು)
ನಾಲ್ಕು ಸಣ್ಣ ಕತೆಗಳು
ಕನ್ನಡದ ಸೇವೆ (ಭಾಷಣ)
ಮಂಜುಳಾ (ಸಾಮಾಜಿಕ ದೃಶ್ಯ)
ತಾವರೆ (ಪದ್ಯಗಳು)
ಕರ್ನಾಟಕದ ಜನತೆಯ ಸಂಸ್ಕೃತಿ
ಚೆಲುವು (ಪದ್ಯಗಳು)
ಶಿವ ಛತ್ರಪತಿ (ಐತಿಹಾಸಿಕ ದೃಶ್ಯ)
ವಿಮರ್ಶೆ ೩
ಯಶೋಧರಾ (ನಾಟಕ)
ಮಲಾರ (ಪದ್ಯಗಳು)
ಸಣ್ಣ ಕತೆಗಳು ೪
ರವೀಂದ್ರನಾಥ ಠಾಕೂರರು

ಸಣ್ಣ ಕತೆಗಳು ೫
ಶ್ರೀ ರಾಮಕೃಷ್ಣ
ತಿರುಪಾಣಿ (ಗೀತಪ್ರಧಾನ ನಾಟಕ)
ಕರ್ನಾಟಕದ ಜನಪದ ಸಾಹಿತ್ಯ
ಕಾಕನಕೋಟೆ (ದೃಶ್ಯ)
ಆದಿಕವಿ ವಾಲ್ಮೀಕಿ
ವಿಮರ್ಶೆ ೪
ಸಣ್ಣ ಕತೆಗಳು ೬
ಗೌಡರ ಮಲ್ಲಿ (ಪದ್ಯ ಕತೆ)
ರಾಮನವಮಿ ,,
ಮೂಕನ ಮಕ್ಕಳು ,,
ತಾಯ್ನುಡಿಯ ತಮ್ಮಡಿ (ಭಾಷಣ)
ನವರಾತ್ರಿ ೨, ೪ (ಕಥನ ಕವನ)
ಚಿತ್ರಾಂಗದಾ (ಭಾಷಾಂತರ)
ಸುನೀತ (ಪದ್ಯಗಳು)
ನವರಾತ್ರಿ ೩
ಪ್ರಸಂಗ (ಲೇಖನಗಳು)
ಸಣ್ಣ ಕತೆಗಳು ೭, ೮, ೯, ೧೦
ನವರಾತ್ರಿ ೫
ಚೆನ್ನಬಸವನಾಯಕ (ಕಾದಂಬರಿ)
ಮನವಿ (ಗೀತಗಳು)
ಪೂಜನ (ಮುನ್ನುಡಿಗಳು)
ಚಿಂತನ (ವಿಚಾರ ತರಂಗ)

(ಇಂಗ್ಲಿಷಿನಲ್ಲಿ)

Subbanna (Story)
The Poetry of Valmiki
Short Stories (4 Vols)
Popular Culture in Karnataka
Rabindranath Tagore

**ಈ ಪುಸ್ತಕಗಳು ದೊರೆಯುವ ಸ್ಥಳಗಳು:—**

**ಜೀವನ ಕಾರ್ಯಾಲಯ, ಬಸವನಗುಡಿ, ಬೆಂಗಳೂರು**
**ಬೆಂಗಳೂರ ಪ್ರೆಸ್, ಮೈಸೂರು ರೋಡ, ಬೆಂಗಳೂರು ಸಿಟಿ**
**ಸಾಹಿತ್ಯ ಭಾಂಡಾರ, ಹುಬ್ಬಳ್ಳಿ**

# ಮೂಕನ ಮಕ್ಕಳು

## “ರಾಮನವಮಿ”ಯ ಜವರಗೌಡರು ಹೇಳಿದ ಇನ್ನೊಂದು ಸಂಗತಿ

**ಗೌಡರು**

ಗಾಳಿಹನುಮನಗಿರಿಯ ಮುಂಗಡೆ
ಮೋಡಿನಲಿ ಮರ ಮೂರಿವೆ.
ಕಂಡುದುಂಟೇ ಒಡೆಯರವನು?
ಒಮ್ಮೆ ಬಂದರೆ ತೋರುವೆ.

ಗಾಳಿಹನುಮನಗಿರಿಯ ಮುಂದಣ ಮೂರು ಮರವನ್ನು ಜನ ಮೂಕನ ಮಕ್ಕಳು ಎನ್ನುತ್ತಾರೆ.

ಗಿರಿಯ ಮುಂಗಡೆ ಮೋಡ ತಲೆಯಲಿ
ನಿಂತು ಮೂರೂ ಒಟ್ಟಿಗೆ
ತಳಿರುತುಂಬಿದ ದಿನಕೆ ತುಂಬಾ
ಚೆನ್ನ, ನೋಡುವ ದಿಟ್ಟಿಗೆ.

ಒಂದೆ ಮಡಲಲಿ ಬೆಳೆದು, ಒಂದನು
ಒಂದು ನೋಡುತ ನುಡಿಸುತ,
ಒಂದು ಬಾಳುವೆಬಾಳಿ, ನೋಡುವ
ಮಂದಿಯನು ಸುಖಪಡಿಸುತ,

### ಮೂಕನ ಮಕ್ಕಳು

ಮಲೆಗೆ ಬಯಲಿಗೆ ಸುತ್ತ ಹರಹಿದ
ನೆಲಕೆ ಭೂಷಣವಾಗಿವೆ.
ಮೋಡಿಗೆನಿತೋ ಸಾರಿ ನಾ ಇವ
ನೋಡಲೆಂದೇ ಹೋಗುವೆ.

ಇವನು ಮೂಕನ ಮಕ್ಕಳೆಂಬರು
ಸುತ್ತಿನೆಲ್ಲಾ ಊರಲಿ;
ಮೂಕ ಎನ್ನುವ ಹೆಸರ ನೆನೆವರು,
ಯಾರೆ ನಿಮಗಿವತೋರಲಿ.

### ಕತೆಗಾರ

ಮರಳಿ ಬೋವನಹಳ್ಳಿಯೆಡೆ ನಾ
ಒಂದು ಉದಯದಿ ಸುಳಿಯುತ,
ಬಸರಿಮರದಡಿ ಜವರಗೌಡರು
ತಮ್ಮತಮ್ಮಲಿ ತಿಳಿಯುತ,

ಕತೆಗಾರನು ಮರಳಿ ಗೌಡರನ್ನು ಕಂಡಾಗ ಅವರು ಈ ಮಾತನ್ನು ಹೇಳಿದರು ;

ಉಣ್ಣೆ ನೂಲುತ ಧ್ಯಾನಮಾಡುತ
ಕುಳಿತಪರಿಯನು ನೋಡಿದೆ;
ಸುಳಿವ ಬಣ್ಣಿಸಿ ಗಾಳಿಹನುಮನ
ಗಿರಿಯಮಾತನು ಆಡಿದೆ.

## ಮೂಕನ ಮಕ್ಕಳು

ಗಾಳಿಹನುಮನ ಗಿರಿಯ ಮಾತಿಗೆ
ಗೌಡರೀಕತೆ ಒರೆದರು ;
ಸುರಿತ ಅನುಭವದವರ ಮನವನು
ನನ್ನ ನೋಟಕೆ ತೆರೆದರು.

### ಗೌಡರು

ಮೂಕ ನಮ್ಮೂರವನೆ ಹೈದ ;
ನಟ್ಟು ಹೊರೆದನು ಮರ ಇವ ;
ಇದರ ಪರಿಯನು ಬಲ್ಲೆ ನಾನು ;
ಕೇಳುವಿರೆ, ಮನ ಕರಗುವ

ಮೂಕನದು ಮನ ಕರಗಿಸುವ ಕತೆ, ಹೊತ್ತಿದ್ದರೆ ಹೇಳುತ್ತೇನೆ, ಎಂದರು.

ಚರಿತ ಅವನದು ; ಹೊತ್ತಿರುವುದೇ
ಒಡೆಯರಿಗೆ, ಅದ ಒರೆವೆನು ;
ದೈವ ನಾಲಗೆ ಕೊಡದೆ ಕಾಡಿದ
ಪಾಪಿ ಬದುಕಿದ ತೆರನನು.

### ಕತೆಗಾರ

ಹೇಳಿ ಗೌಡರೆ ಕೇಳಹೊತ್ತಿದೆ,
ಎಂದು ನಾ ಮರುನುಡಿಯಲು
ಗೌಡರೊರೆದರು ; ಅವರ ಮನಸೇ
ಮಾತಿನಲಿ ಕುಡಿಯೊಡೆಯಲು.

ಕತೆಗಾರನು ಹೊತ್ತಿದೆ ಹೇಳಿ ಎಂದನು.

## ಮೂಕನ ಮಕ್ಕಳು

### ಗೌಡರು

ಮೂಕ ನಮ್ಮೂರವನೆ ಹೈದ ;
ನೋಡೆ ನನ್ನದು ಅವನದು
ಒಂದೆ ಪ್ರಾಯ ಸುಮಾರು ; ಅವನ
ಕರ್ಮ ಬೇಗನೆ ಸವೆದುದು.

ಗೌಡರು ಹೇಳಿದ[illegible].

ಮೂಕ ಆ[illegible]ರ
ಊರವನು ಅವ[illegible]
ಜೊತೆ.

ಮೂಕ ಎಂಬುದು ಹೆತ್ತ ತಾಯಿ
ಇಟ್ಟ ಹೆಸರಿನ ಓಸರ ;
ಕರೆವ ದಿನದಲಿ ಅವಳು ಕಾಣಳು
ಇವನ ಪ್ರಾಪ್ತಿಯ ಬೇಸರ.

ವಿಧಿವಿಲಾಸವನಾರುಬಲ್ಲರು ?
ಕರೆದುದೇ ದಿಟವಾಯಿತು ;
ದಿವಸ ಕಳೆಯಿತು, ಬೆಳೆದ ಹುಡುಗಗ್ಗೆ.
ಬಾಯಿ ಇಲ್ಲದೆಹೋಯಿತು.

ಮೂಕ ಎನ್ನುವುದು
ಇಟ್ಟ ಹೆಸರು.
ಗ್ರಹಚಾರಕ್ಕೆ ನಿಜವೇ
ಆಯಿತು.

ಕೆಂಚ ಎನ್ನರೆ ಕರಿಯ ಕೊಂತವ ?
ಗರುಡ ಎನೆ ಗರಿ ಬರುವುದೆ ?
ಕಾಳ ಎನ್ನರೆ ಹೇಡಿ ಹುಡ ಗನ ?
ತಿಪ್ಪ ಎನೆ ಮನೆ ತೊರೆವುದೆ ?

## ಮೂಕನ ಮಕ್ಕಳು

ಮೂಕನಾಗಲೆಬೇಕೆ ತಾಯಿ
ಮಗುವ ಮೂಕ ಎಂದರೆ?
ಅವಳ ತಪ್ಪೇ, ಅವನು ತಾನು
ಕೇಳಿಬಂದುದ ತಂದರೆ?

ಮೂಕ ಮೂಕನೆ ಆಗಿ, ಊರಲಿ
ನಮ್ಮ ಜೊತೆಯಲಿ ಬೆಳೆದನು;
ದೈವ ಅವನಿಗೆ ಹಾಕಿ ತೋರಿದ
ಬಾಳದಾರಿಯ ತುಳಿದನು.

ಅವನ ಎಳೆತನದಲ್ಲೆ ಮಡಿದಳು
ತಾಯಿ; ಮಗ ತನ್ನಷ್ಟಕೆ
ಕೂಲಿನಾಲಿಯ ಎಂತೊ ತಿನ್ನುತ
ಎರವು ಹೋದ ಅದೃಷ್ಟಕೆ.

ಬಾಲ್ಯದಲ್ಲಿ ಅವನ ತಾಯಿ ತೀರಿಕೊಂಡಳು, ಮೂಕ ಎಂತೋ ಬಾಳಿದ.

ಮೂಕನಾದವ ಬಡವನಾಗಿರೆ
ದೈವಕಿಂತಲು ಹೆಚ್ಚಿಗೆ
ಕಾಡುವುದು ಜನ ಅವನ; ಎಳೆವುದು
ಎಲ್ಲು ಇಲ್ಲದ ರೊಚ್ಚಿಗೆ.

ಮೂಕನಾದದ್ದರಿಂದ ಜನ ಅವನನ್ನು ಕಾಡುವರು.

## ಮೂಕನ ಮಕ್ಕಳು

ಅರಿಯದೆಳೆಯರು ಮಾತ್ರ ಅಲ್ಲ
ಇಂತುಗೆಯ್ವುದು: ಮುದುಕರು
ಮುಂದೆ ನಿಲುವರು, ಇಂತ ಪಾಪಿಯ
ನೋವಿನಾಳವ ಕೆದಕಲು.

ಊರಮಂದಿಯ ಪಾರುವಾಟಕೆ
ಸಿಲುಕಿ, ಚಿರತೆಯ ತೆರದಲಿ,
ಹರೆಯಕ್ಕೈದಿದ ಮೂಕ; ಕೊಲುತಿರೆ
ಸಾಯುಬಾರದ ನರಬಲಿ.

ಬಾಯನೀಡದ ದೈವ ಒಡಲಿನ
ಬೇರೆ ಆಸೆಯ ನೀಡದೆ?
ಹರೆಯ ಮೂಕಗೆ ಹೆಣ್ಣ ಹಂಬಲ
ತಾನೆ ತಂದಿತು ಬೇಡದೆ.

ಹರೆಯ ಬಂದು ಮೂಕನಿಗೆ ಹೆಣ್ಣಿನಾಸೆ ಹುಟ್ಟಿತು.

ಹರೆಯಬರೆ ನಮ್ಮಂಥ ಮಂದಿಗೆ
ಮದುವೆಗೆಯ್ವರು ಹಿರಿಯರು;
ತಾಯಿ ಮಡಿದಿಹ ಬಡವ ಮೂಕಗೆ
ಯಾರು, ಹೆಣ್ಣನು ತರುವರು?

ಮದುವೆಯಾಗುವಂತಿಲ್ಲ.

## ಮೂಕನ ಮಕ್ಕಳು

ಕೆಪ್ಪನೆನ್ನುತ ಇವನ ಎದುರಲಿ
ಸದರ ನುಡಿವರು ಹೆಂಗಳು,
ತುಟಿಯ ಕಡೆಯಲಿ ತುಳುಕುತಿರೆ ನಗೆ,
ನಕ್ಕು ಹೊಳೆದಿರೆ ಕಂಗಳು.

ಮೂಕನೆಂದು ಹೆಂಗಸರು ಇವನೆದುರಿಗೆ ಅತಿ ಸಲಿಗೆಯಿಂದ ನಡೆಯುವರು.

ಒಂದು ಹೆಣ್ಣಿಂತಾಟ ಆಡಿಸೆ
ನೋಡಿ ತಡೆಯನು ಮಾನವ;
ಹತ್ತು ಹೆಣ್ಣಿನ ನಗೆಯಲದ್ದರೆ
ಹೇಳಲೇನು ನಿದಾನವ?

ಕೇಳಲಮ್ಮದು; ಆಡಲಮ್ಮದು;
ನೋಡಲಮ್ಮದೆ ಮೂಕಗೆ?
ಮೂರು ಹೊಲಬಿನ ಹೊಗರ ಕಣ್ಣಿನ
ನೋಟ ಮಿಕ್ಕಿತು ಸೋಕಿಗೆ.

ಆಡಿಸುವ ಜನ ಸೈಗೆಮಾಡುತ
ಮದುವೆಯಹೆಯಾ ಎಂಬರು:
ನುಡಿಯೆ ನಾಚುವ ಹದನ ಕೈಯಲಿ
ಸನ್ನೆ ತೋರುತ, ಹುಂಬರು.

ಭಂಡರು ಆಸೆಯನ್ನು ಕೆರಳಿಸುವರು.

## ಮೂಕನ ಮಕ್ಕಳು

ಮದುವೆಯಾಗುವ ಬಾರ ಎಂಬರು
ಹೆಣ್ಣುಮಕ್ಕಳು, ಆಟಕೆ:
ಕಾಡಿ ಆಡಿರೆ ಅವರು, ಮೂಕನ
ಮನಸು ಹರಿವುದು ಬೇಟಕೆ.

ತಿಳಿಯದವರಿಂತಿವನ ಕಾಡಿರೆ
ನಾವು ಒಬ್ಬರು ಇಬ್ಬರು
ಬೇಡವೆಂಬೆವು: ಏನು ಫಲ? ಜನ
ನಮ್ಮ ಅಂಕೆಗೆ ಅಬ್ಬರು.

ಗೌಡರಂತವರು ಹೀಗೆ ಮಾಡಬೇಡಿ ಎಂದರು. ಆದರೂ ಕಾಟ ತಪ್ಪಲಿಲ್ಲ.

ಒಂದು ಸಲ ಸುಗ್ಗಿಯಲಿ, ನಾನು
ಗಿರಿಯ ಮುಂಗಡೆ ಹೊಳೆಯಲಿ
ಹೊಂಗೆಯಡಿ ನಡೆದಿರಲು, ಮೂಕ
ಕಂಡನೆನಗಾ ಬಳಿಯಲಿ.

ಒಂದು ಸುಗ್ಗಿಯಲ್ಲಿ ಮೂಕನಿಗೆ ಹೆಣ್ಣ ಹಂಬಲ ಬಹು ಹೆಚ್ಚಾಯಿತು.

ತನ್ನ ದನಿಯಲಿ ಕರೆದು, ಹತ್ತಿರ
ಸಾರಿ, ಎನ್ನಲಿ ತನ್ನ ಆ
ಸೈಗೆವಾತಲಿ ಒರೆದ: ಬಲ್ಲೆನು
ನಾನು ಅವನಾ ಸನ್ನೆಯ.

## ಮೂಕನ ಮಕ್ಕಳು

ಹೊಳೆಯ ಮರಳಿನಮೇಲೆ ಹೊಂಗೆಯ
ನೆರಳಿನಲಿ ನಲಿದಾಡಿದ
ಕಾದಲರ ಆಟವನು ಮೂಕ
ಎಲ್ಲೊ ನಿಲ್ಲುತ ನೋಡಿದ.

ಮದುವೆಯಾಗೆನೆ ಎಂಬ ಆಸೆ
ಮಸಗಿತವನೆದೆಗೂಡಲಿ;
ಏನಮಾಡಲಿ, ಎಲ್ಲಿ ಹೋಗಲಿ,
ಯಾರ ಹಿಡಿಯಲಿ, ಬೇಡಲಿ,

ಎಂದು ತುಡಿಯುತ ನನ್ನ ಕರೆದನು:
ಒಂದು ಹೆಣ್ಣನು ನೋಡಿಸಿ,
ಕಷ್ಟ ಸುಖ ಏನಾದರಾಗಲಿ,
ನನಗೆ ಮದುವೆಯ ಮಾಡಿಸಿ,

ಏನಾದರೂ ಮಾಡಿ ನನಗೆ ಮದುವೆ ಮಾಡು ಎಂದು ಅವನು ಗೌಡರನ್ನು ಬೇಡಿದನು.

ಎಂದು ನನ್ನನು ಬೇಡಿಕೊಂಡನು.
ಅಯ್ಯೊ ಎಂದಿತು ನನ್ನೆದೆ.
ದಿಕ್ಕುಗಾಣದ ಕುನ್ನಿ, ಪಾಪ,
ಬಿದ್ದನೆಂತಹ ಬನ್ನದೆ.

ಗೌಡರು ಅಯ್ಯೋ ಪಾಪ ಎಂದು ನೊಂದರು.

## ಮೂಕನ ಮಕ್ಕಳು

ದಿವಸ ಕಳೆದಿರೆ ನಮ್ಮ ಊರಿಗೆ
ಒಬ್ಬ ಹಿರಿ ಅವಧೂತರು
ಬಿಜಯಗೆಯ್ದರು: ಹೇಳಲಾಗದು
ಅಂಥ ಅನುಭವಿ, ವೇತ್ತರು.

ಆಗ್ಗೆ ಬೋವನಹಳ್ಳಿಗೆ ಒಬ್ಬ ಅವಧೂತರು ಬಂದರು.

ಲೋಕದಲಿ ಅವಧೂತರೆನಿಸುವ
ಬಹು ಜನದ ಅವಧೂತಿಕೆ
ನೀರು ನಿಲ್ಲದ ಸೋರು ಹರವಿ;
ಮೊದಲೆ ಕೊನೆಯೆ ತೂತಿಗೆ?

ಅವರು ಬಹು ಒಳ್ಳೆಯವರು.

ಸೋರು ಹರವಿಯೊ ನೀರು ನಿಲುವುದೊ
ಎಂತು ತಿಳಿವುದು, ಮೊದಲಲಿ?
ಸೇವೆ ಮಾಡಿಯೆ ಕಾಣಬೇಕಿದ
ಮುಗಿದ ಕೈಯಿಟ್ಟಿದೆಯಲಿ.

ಸೇವೆ ಮಾಡಿತು ಊರು ಯೋಗಿಗೆ;
ಯೋಗ್ಯನೆಂಬುದ ಕಂಡಿತು;
ಬೊಮ್ಮವನು ಕೈಮುಟ್ಟಿ ತಿಳಿದಿಹ
ಗುರು, ನಮೋ ನಮೊ, ಎಂದಿತು.

ಊರು ಅವರನ್ನು ಪೂಜಿಸಿತು.

ಅಂತೆ ನಾನೂ ಅವರ ಪಾದದಿ
ದಿಟದ ಇನಿತನು ಅರಿತೆನು.
ಆದರೊಳಿನಿಸನುಬಲ್ಲೆನೀಗಳು
ಉಳಿದ ಬಹಳವ ಮರೆತೆನು.

ಬಳಿಗೆ ಯಾರೇ ಬಂದು ಏನನೆ
ಬಿನ್ನವಿಸೆ, ಗುರುದೇವರು
ಕೇಳುವರು ಕಿವಿಗೊಟ್ಟು; ನೋವಿಗೆ
ನೊಂದು ತಾವೂ ಬೇವರು.

ಅವಧೂತರು ಕನಿಕರ ಮರುಕದ ಸ್ವಭಾವದ ಜ್ಞಾನಿಗಳು.

ಅಯ್ಯೊ, ಪಾಪವೆ, ಎಂದು ಕರಗಿ
ಮತ್ತೆ ಧೃತಿಯನು ತಳೆವರು;
ನೋವ ಸಹಿಸುವ ತೆರನ ಕಲಿಸುತ
ಮನದ ಕಶ್ಮಲ ಕಳೆವರು.

ನೊಂದ ಜನ ಬಲ್ಲವರ ಎದುರಲಿ
ಮರೆಸಿಕೊಂಬುದು ನೋವನು;
ಇಲ್ಲಿ ಮರುಗಲು ಸಲ್ಲ ಎನ್ನುತ
ಅರಸಿ ಬೇರೆಯ ತಾವನು.

## ಮೂಕನ ಮಕ್ಕಳು

ನಮ್ಮ ಗುರುವಿನ ದಾರಿ ಬೇರೆ:
ನೊಂದ ಜನ ಇವರಡಿಯನು,
ತಾಯಸಾರುವ ಕಂದನಂದದಿ
ಸಾರಿ, ಹಾದಿತು ಕಡೆಯನು.

ನೋವು ನಗೆಯನು ಸುಳ್ಳು ಎನ್ನುವ
ಕಣ್ಣುಕಟ್ಟಿನ ತತ್ತ್ವವ
ಇವರು ಒಪ್ಪರು: ಹಸಿವತಣಿಸಲು
ಅಡರು ಬರಗಿನ ಬತ್ತವ.

ಯಾವುದೋ ಚೇತನವ ಹೊರೆಯಲು
ಬಹರು ಇಂತಹ ಹಿರಿಯರು
ಅಂದು ಯಾರನು ಹೊರೆಯಬಂದರೊ
ಈ ಹದನ ಯಾರರಿವರು?

ಇಂತವರು
ಯಾರನ್ನೋ ಉದ್ಧಾ
ಮಾಡಲು ಒಂದು
ಸ್ಥಳಕ್ಕೆ ಬರುತ್ತಾರೆ.

ಕಾರದಿನ ಆಗಸವ ಮುಸುಕಿದ
ಮೋಡಗಳು ತಂತಮ್ಮಲಿ
ನುಡಿದುಕೊಂಬವು; ಕಾದ ಅವುಗಳ
ಓಡು ಬಿರಿಯುವುದೊಮ್ಮೆಲೆ.

ಕಾರದಿನದ ಮೋಡ
ಬಿರಿದು ಯಾವುದೋ
ಒಂದು ಮರದಮೇಲೆ
ಬೀಳುವ ಬಿಸಿಲಂತೆ,

## ಮೂಕನ ಮಕ್ಕಳು

ಬಿರಿದ ಬಿರುಕಲಿ ಸೂರ್ಯ ಕಿರಣ
ಒಂದೆ ರಭಸಕೆ ಸುರಿವುದು ;
ವನದ ಯಾವುದೊ ಮರದ ಶಿರದಲಿ
ಬೆಳಕ ಕೃಪೆಯನು ಕರೆವುದು.

ಇಂಥವರ ಕೃಪೆ
ಯಾರನ್ನೋ
ಕಾಯುಲು
ಬರುತ್ತದೆ.

ವನದ ಬೇರೆಯ ಮರಕೆ ಮುನ್ನವೆ
ಪಕ್ವವಾಗುವುದಿದರೆಲೆ ;
ಮಾಘ ಬರೆ, ತೊಡಗುವುದು ಈ ಎಲೆ
ಉದುರಲೆಲ್ಲಕು ಮೊದಲಲೆ.

ಯಾವ ತಪವನು ಮಾಡಿತೋ ಮರ ?
ಎಂತು ತಣಿಸಿತೊ ನೇಸರ ?
ಎಂದು ತಣಿಸಿತೊ ? ಇದನು ಬಲ್ಲರು
ಯಾರು ? ಬಲ್ಲನು ಈಶ್ವರ.

ಎಲ್ಲ ಮಂದಿಯೂ ಗುರುವಸಾರಿ
ಏನು ಏನನೊ ಪಡೆವುದ
ನೋಡುತಿದ್ದನು ಮೂಕ ; ತಾನು
ಏಕೆ ಬೇಡದೆ ಬಿಡುವುದು ?

ಎಲ್ಲರೂ ಗುರುವನ್ನು
ಆಶ್ರಯಿಸುವುದನ್ನು
ನೋಡಿ ಮೂಕನೂ

## ಮೂಕನ ಮಕ್ಕಳು

ಮೂಕ ಗುರುವಿನ ಬಳಿಯ ಸಾರಿದ;
ಮೆಯ್ಯ ಕಾಲೆಡೆ ಚಾಚಿದ.
ನುಡಿಸಿದರು: ನುಡಿ ಇಲ್ಲ ಎನ್ನುತ
ಸನ್ನೆ ಮಾಡುತ ನಾಚಿದ.

ಅವರ ಬಳಿಸಾರಿದ.

ಇವನಪರಿ ಎಲ್ಲವನು ಗುರುವಿಗೆ
ನಾನು ಹೇಳಿದೆ. ಕೇಳುತ
ಮರುಕಗೊಂಡರು. ಎನಿತು ಎನ್ನಲಿ?
ಅವರದೇ ಆ ಹಾಳತ.

ಅವನ ಆಸೆಯನ್ನು ಗೌಡರು ಗುರುಗಳಿಗೆ ತಿಳಿಸಿದರು.
ಗುರು ಕನಿಕರ ಗೊಂಡರು.

ಮರುಕಗೊಳ್ಳುತ ಒಂದು ಗಳಿಗೆ
ಮೌನದಲಿ ಕುಳಿತಿದ್ದರು;
ಯಾವ ಎಂತಹ ಗಹನಗಳನೋ
ತಮ್ಮ ಮನದಲೆ ಮೆದ್ದರು;

ಯೋಚನೆಮಾಡಿ ಇವನು ಹೀಗೆಯೇ ಉದ್ಧಾರವಾಗುತ್ತಾನೆ ಎಂದರು.

ಮೆದ್ದು ನುಡಿದರು: ಮೂಕನಾಗಿ
ಹೆಣ್ಣನಾಶಿಸಿ ಪಡೆಯದೆ
ನೊಂದ ಈತನೆ ಪುಣ್ಯಶಾಲಿ;
ಇವನ ಆಸೆಗೆ ಕಡೆಯಿದೇ.

ಪುಂಡಜನ ಬೈರಾಗಿಒಬ್ಬನ
ಅಟ್ಟಬರೆ, ಮುಂದೋಡುತ
ಯಜ್ಞವಾಟವ ಹೊಕ್ಕನವನು.
ಇಂತು ಇವನನು ಕಾಡುತ,

ಬಿಡುಗಡೆಗೆ ವಿಧಿ ಅಟ್ಟಿತಿವನನು.
ನಮ್ಮ ಸಲಹುವ ಕರುಣೆಯೆ
ಬೇರೆ ತೆರದಲಿ ಸಲಹಿತಿವನ;
ಇದು ನಿರಾಶಾಪರಿಣಯ.

ಗುರುವನೆನೆವೆನು, ಇವನ ರಕ್ಷಿಪ
ಪರಿ ಇರಲು ಅದನರಿವೆನು,
ಎನಲು, ಮೂಕಗೆ ನಾನು ತಿಳಿಸಿದೆ
ಆದನಿತು ಈ ತೆರನನು.

ಗುರುವಿನೆಡೆ ಶುಶ್ರೂಷೆಯಲಿ ನಿಲು,
ಎಂದು ಸನ್ನೆಯ ಗೆಯ್ದೆನು;
ಆಸೆ ಕೈಯನು ಸಾರಿತೆಂದೇ
ಅವನು ಮುಸಮುಸಸುಯ್ದನು.

ಗುರುವಿನ ಬಳಿ
ಶುಶ್ರೂಷೆಯಲ್ಲಿ ನಿಲ್ಲು
ಉದ್ಧಾರವಾಗು
ತ್ತೀಯೆ ಎಂದು
ಗೌಡರು ಮೂಕನಿಗೆ
ತಿಳಿಸಿದರು.

## ಮೂಕನ ಮಕ್ಕಳು

ಗುರುವಿನಡಿಯನು ಮುಟ್ಟಿ ಕಣ್ಣಿಗೆ
ಒತ್ತಿಕೊಂಡನು ; ಬಳಿಯಲಿ
ಸೇವೆ ಮಾಡುವ ಭರದಿ ನಿಂತನು,
ಮದುವೆಯುಹ ಕಳಕಳಿಯಲಿ.

ಮದುವೆಮಾಡುವ
ರೆಂದು ಅರ್ಥಮಾಡಿ
ಕೊಂಡು ಅವನು
ಹಾಗೆಯೇ ನಿಂತನು.

ಮೂರನೆಯ ದಿನ ಉದಯ, ಇವನ
ಬಳಿಗೆ ಕರೆದವಧೂತರು,
ಹಿರಿಯ ನನಗೇ ಮದುವೆ ಇಲ್ಲಲೆ,
ನಿನಗೆ ಏತಕೆ ಆತುರ,

ಕೆಲವು ದಿನದಮೇಲೆ
ಅವರು ಮೂಕನನ್ನು
ನನಗೇ ಮದುವೆ ಇಲ್ಲ
ನಿನಗೇನು ಆತುರ
ಎಂದು ಕೇಳಿದರು.

ಎಂದು ಕೇಳಿದರಂತೆ. ಮೂಕ
ಏನ ಹೇಳಲು ತೋರದೆ
ಸುಮ್ಮನಿದ್ದನು, ಹರಿಸಲಾಗದ
ಈ ಸಮಸ್ಯೆಯ ಭಾರದೆ.

ಮೂಕನಿಗೆ ಉತ್ತರ
ತೋರಲಿಲ್ಲ.

ಕ್ಷಣ ಉಳಿದು ಗುರು, ಅಣ್ಣ, ನಿನಗೆ
ಹೆಣ್ಣು ಬೇಕೊ, ಮಕ್ಕಳೊ,
ಎಂದು ಕೇಳಲು, ಮೂಕ, ತನಗೆ
ಯಾವ ಹೆಣ್ಣೂ ಸಿಕ್ಕಳು,

ಅವರು ಹೆಣ್ಣು ಬೇಕೋ
ಮಕ್ಕಳು ಬೇಕೋ,
ಎಂದರು.

ಮಕ್ಕಳಾದುವೆ ಸಾಕು, ಎಂದನು.
ಒಳಿತು, ಎಂದರು ಗುರುಗಳು ;
ಜೊತೆಗೆ ಬಾರೆಂದಿವನ ಕರೆದು
ಮೋಡಿನಲಿ ಈ ಮರಗಳು

ಇವನು, ಮಕ್ಕಳು, ಎಂದನು. ಗುರು ಇವನನ್ನು ಕರೆದೊಯ್ದು

ಈಗ ನಿಂದಿರುವೆಡೆಗೆ ಒಯ್ದರು ;
ಹೊಯಿಸಿದರು ಕುಳಿ ಮೂರನು ;
ಹೊಳೆಯ ಅಂಚಿಗೆ ಸಾರಿ ಸೊಂಪಿನ
ತೆರ ತೆರದ ಸೊಸಿ ನೂರನು

ಮೋಡಿನಲ್ಲಿ ಮೂರು ಕುಳಿ ಹೊಯಿಸಿ

ತೋರಿ, ಚೆನ್ನನ ಮೂರು ಸೊಸಿಯನು
ನೀನೆ ಆರಿಸು ಎಂದರು ;
ಅವನು ಕೋರಿದ ಮೂರ ಬೇರಿನ
ಸಹಿತ ಮೋಡಿಗೆ ತಂದರು ;

ಹೊಳೆಯ ದಂಡೆಯಿಂದ ಮೂರು ಸೊಸಿ ತರಿಸಿ

ಮೂಕನಿಂದಲೆ ಅವನು ನೆಡಿಸಿ
ನೀರೆರೆಸಿ, ಅಣ್ಣಾ, ಇವು
ನಿನ್ನ ಮಕ್ಕಳು, ಇವನು ಮುದ್ದಿಸು,
ಇನ್ನು ಇವರನು ಕಾಯುವ

ಇವನಿಂದ ನೆಡಿಸಿ, ಇವು ನಿನ್ನ ಮಕ್ಕಳು, ಇವನ್ನು ಸಾಕು, ಎಂದರು.

## ಮೂಕನ ಮಕ್ಕಳು

ಭಾರ ನಿನ್ನತುನೋಡು, ಎಂದರು.
ಒಪ್ಪಿ ತಲೆಯನು ಆಡಿಸಿ,
ಮೂಕ ಗುರುವಿಗೆ ಮಣಿದು ನಿಂದ
ಭಕ್ತಿಯಲಿ ಕೈ ಜೋಡಿಸಿ.

ಮೂಕ ಒಪ್ಪಿದ.

ಗುರುವಿನಾವ ಹಸಾದವೋ ಅದು,
ಮೂಕ ಆ ಸೊಸಿ ಮೂರನು
ಮಕ್ಕಳಿಂದೇ ಬಗೆದು ಹೊರೆದನು;
ಬೇರೆ ಭಾವವ ತೋರನು.

ಅವನ್ನು ಸಾಕಿದ.

ಬಿಸಿಲಿನಲಿ ಗಿಡ ಸೊರಗದಂದಕೆ
ಮೂಕ ನೆರಳನು ಎಸಗಿದ;
ಆಡು ದನ ಸೊಸಿಗಳನು ಮುಟ್ಟದ
ತೆರಕೆ ಮುಳ್ಳಿನ ಮುಸಕದ

ಅವಕ್ಕೆ ಬೇಲಿ ಹಾಕಿದ.

ಬೇಲಿ ಕಟ್ಟಿದ ಸುತ್ತ; ದಿನಕೆ
ಮೂರು ಸಲ ನೀರೆರೆಯುತ,
ಗುರುವಿನಾಜ್ಞೆಯ ನಡೆಸಿ ನಿಂತ
ಮಕ್ಕಳಿಂದವ ಹೊರೆಯುತ.

ನೀರು ಹೊಯ್ದು,
ಅವನ್ನು ಮಕ್ಕಳೇ
ಎಂದು,

## ಮೂಕನ ಮಕ್ಕಳು

ಯಾವ ತಾಯೂ ಹೆತ್ತ ಮಕ್ಕಳ
ಇದಕೆ ಹೆಚ್ಚಿಗೆ ಹೊರೆಯುಳು ;
ಸೊಸಿಯು ಸಲಹಿದನಂತು ಮೂಕ
ಮೇರೆ ಹರಿದಕ್ಕರೆಯೊಳು.

ಯಾವ ತಾಯಿಗಿಂತ
ಹೆಚ್ಚಾಗಿ ಈ
ಮಕ್ಕಳನ್ನುಲಾಲಿಸಿದ.

ತಾಯಿ ತಂದೆಯ ಎರಡು ಪ್ರೀತಿ
ಮೂಕನೊಂದೇ ಎದೆಯಲಿ
ಬೆರೆದು ಇಮ್ಮಡಿಯಾಯ್ತು. ಅವನಿಗೆ
ಎಲ್ಲ ಹೊತ್ತಲು ಇದೆ ಗಿಲಿ:

ಅವಕ್ಕೆ ತಾಯಿ ತಂದೆ
ಎರಡೂ ತಾನೇ ಆದ.

ಚಿಗುರು ಕಂಡಿತೊ, ಕೊಂಬು ಹುಟ್ಟಿತೊ,
ಆಡು ತಿಂದಿತೊ ಸೊಸಿಗಳ.
ಮನೆಯ ಮಕ್ಕಳ ಇಂತು ಓವರು
ಯಾರು ? ಹೇಳಲು ಅಸದಳ.

ನೀರನೆರೆವನು ; ಅಲ್ಲೆ ನಿಂತು
ಪಾತಿಯಲಿ ಅದು ಇಳಿವುದ
ನೋಡಿ ಸಂತಸದಿಂದ ತಣಿವನು ;
ಮರಳಿ ಹಳ್ಳಕೆ ತಳುವದೆ

ಮೂಕನ ಮಕ್ಕಳು

ಓಡಿಹೋಗುವನು, ನೀರ ತರುವನು,
ಮರಳಿ ಸುರಿವನು ಪಾತಿಗೆ;
ಗಿಡ ತಣಿಯೆ ತಾ ತಣಿದೆ ಎಂಬನು.
ಸಹಜವಿದು ತಾಯ್‌ಜಾತಿಗೆ.

ಕೂಸು ದಿನ ದಿನ ಇನಿಸು ಬೆಳೆವುದ
ತಾಯಿ ಕಾಣುವ ತೆರದಲಿ
ಮೂಕ ಅರಿತನು ಸೊಸಿಯ ಬೆಳವಿಯ;
ಅವನ ನರ ನರ ನರದಲಿ

ಅವು ದಿನದಿನಕ್ಕೆ ಬೆಳೆಯುವುದನ್ನು ಕಳಕಳಿಯಿಂದ ದಿಟ್ಟಿಸಿದ.

ಅದರ ಸೌಖ್ಯದ ಹಸರ ಹರಿಯಿತು;
ಅವನ ಮುಖ ಆಭಾವದ
ಬೆಳಕ ತಳೆಯಿತು. ಶ್ರದ್ಧೆಯೇ ತಪ:
ಬೇರೆ ತಪ ಇನ್ನಾವುದು?

ನಿನ್ನೆ ಇಂದಿಗೆ ತೊಗಟೆ ಬಲಿಯಿತು,
ಬಣ್ಣ ಕೂಡಿತು ತಳಿರಿಗೆ,
ಮೂಡುತಿದೆ ಹೊಸ ತಳಿರು, ಇದಕೊ,
ಹೊಸತುಕಳೆ, ಇದೊ, ಮೊಳೆತಿದೆ,

ಎಂದು ಅನುದಿನ ಅವನು ನಲಿವನು.
ನೋಡು ಬಾ ಎಂದೆನ್ನನು
ಕರೆವನೊಯ್ವನು, ತೋರಿ ನಗುವನು,
ಮರೆಯುವನು ತಾ ತನ್ನನು.

ತೊಗಟೆಯಲಿ ಕಳೆಮೂಡುವೆಡೆಯನು
ಬೆರಳ ಕೊನೆಯಲಿ ಮುಟ್ಟನು;
ಕುಡಿಗೆ ಗೆಣ್ಣನು ತೋರಬೇಕು,
ತೋರಬಾರದು ಬೆಟ್ಟನು.

ಮೂಡಿಬರುತಿಹ ಮೊಗ್ಗು ಬಾಳಿಗೆ
ಉಗುರ ಕೊನೆಯನು ತೋರುವ
ಪಾಪ ಸಮತೂಗುವುದು ಹಸುಳೆಯ
ಕಣ್ಣಚುಚ್ಚುವ ಘೋರವ.

ಹೆಣ್ಣ ಬಯಸಿದ ಮೂಕನನು ಗುರು
ತಂದೆತಾಯನು ಮಾಡಿದ
ಪರಿಯ ನೋಡಿದ ನಾನು ನಂಬುವೆ;
ನಂಬಲಾಗದು ನೋಡದೆ.

ಈ ಸಂಭ್ರಮದಲ್ಲಿ
ಹೆಣ್ಣ ಹಂಬಲನ್ನು
ಮರೆತ ಇವನನ್ನು
ನೋಡಿ ಗೌಡರು

ಅಕ್ಕಜದಿ ನಾನೊಮ್ಮೆ ಅವರನು,
ಗುರುವೆ ಅಚ್ಚರಿಯೇನಿದು?
ಹೊಟ್ಟೆನೋಯಲು ಕಣ್ಣಿಗಂಜನ!
ಅರಿಯಬಹುದೇ ನಾನಿದ,

ಗುರುವನ್ನು ಇದು ಹೇಗಾಯಿತು ಎಂದು ಕೇಳಿದರು.

ಎಂದು ಕೇಳಿದೆ. ಗುರುಗಳಂತೇ
ನನ್ನ ದಿಟ್ಟಿಸಿ ನೋಡುತ
ಸುಮ್ಮನಿದ್ದರು: ಇವನ ಯೋಗ್ಯತೆ
ಎಷ್ಟು ಎಂಬುದ ತೋಡುತ.

ಗುರು ವಿವರಿಸಿದರು.

ಅರ್ಥಗಳಿಗೆಯು ಹೊತ್ತು ನನ್ನನು
ನೋಡಿ ಕೊನೆಯಲಿ ನುಡಿದರು.
ಅವರ ಸೊಲ್ಲಪರಂಜಿ ಕೆಡದೊಲು
ಹೇಳಬಲ್ಲೆವೆ ಮಡೆಯರು?

ಅರಿತನಿತ ನಾಬಲ್ಲತೆರದಲಿ
ಒಪ್ಪಿಸುವೆ ನಿಮ್ಮಡಿಯಲಿ.
ತಪ್ಪಿತೇ ನುಡಿ, ಎಲ್ಲಿಯೂ ಇಹ
ಗುರುವೆ ನನ್ನನು ತಡೆಯಲಿ.

# ಮೂಕನ ಮಕ್ಕಳು

## ಅವಧೂತರು

ಮೂರು ಲೋಕದಿ ತಂದೆ ಎಂಬುದು
ಒಂದೆ ತತ್ತ್ವ; ಅಂತೆಯೇ
ತಾಯಿ ತತ್ತ್ವವು ಒಂದೆ; ಇದರಲಿ
ಮೂರು ಲೋಕವು ನಿಂತಿವೆ.

ಮೂರು ಲೋಕಕ್ಕೆ
ಒಂದೇ ಒಂದು
ತಂದೆತಾಯಿ.

ಒಬ್ಬ ಬೀಜಪ್ರದ; ಕಳತ್ರವು
ಒಂದೆ; ಗಂಡಲಿ ಹೆಣ್ಣಲಿ
ನಡೆಯುತಿಹ ವ್ಯವಹಾರ ನಡೆದಿದೆ,
ಅದಕೊ, ಕೂರಿಗೆ ಮಣ್ಣಲಿ.

ಗಂಡು ತಾನು ಗಂಡಲ್ಲ,
ಹೆಣ್ಣು ತಾನು ಹೆಣ್ಣಲ್ಲ;

ಕೋಟಿ ಕೋಟಿಯ ಜೀವರಾಶಿಯು
ಎಲ್ಲ ಹೆಣ್ಣಲು; ಗಿಡ ಮರ
ಬಳ್ಳಿಗಳ ಹೂವಿನಲು; ಕೃಷಿಕರು
ಉತ್ತು ಬೀಜವ ನೆಡುವರೆ

ಜೀವಂತವಾದ
ಕೂರಿಗೆ ಪಾತ್ರ ಅಷ್ಟೇ.

ಹರಗಿದಂಗೈಯುದಲನೆಲದಲಿ
ಇರುವ ಸಾವಿರ ಕುಳಿಯಲು;
ಗಾಳಿ ಹಾರಿಸಿ ತಂದ ಬಿತ್ತು
ಮೊಳೆತು ಮರವಹಬಳಿಯಲು;

ಬಿತ್ತ ಧರಿಸುತ ಬಾಳಹಡೆಯುವ
ಯಾವ ಒಂದಾ ಪಾತ್ರವೂ
ಏಕಮೇವನ ಅದ್ವಿತೀಯನ
ಏಕಮೇವ ಕಳತ್ರವು.

ಗಂಡು ಹೆಣ್ಗಳ ಒಡಲನೆನೆದು
ನಾಚಲಾಗದು ಇಂತೆನೆ.
ಬರಿಯ ತೋರಿಕೆ ಒಡಲು ; ನಿಜವನು
ನಿಲುಕಲರಿಯದು ಚಿಂತನೆ.

ಈ ಮಾತಿಗೆ ನಾಚಬಾರದು. ತೋರಿಕೆಯನ್ನು ಮೀರಿ ನಿಜಕ್ಕೆ ಮನಸ್ಸು ಕೊಟ್ಟರೆ ನಾಚಿಕೆ ಆಗುವುದೂ ಇಲ್ಲ.

ಕೂರಿಗೆಯ ಒಡಲೆಂದು ಚಿತ್ರಿಸಿ
ನಾಚಲೇತಕೆ? ಒಡಲಲಿ
ಲೋಹಮರಗಳ ಕೈದಲೂಹಿಸು ;
ಸುಳ್ಳು ನಾಚಿಕೆ ಸಡಲಲಿ.

ಉರುಟಣೆಯೊಳೆನೆ ಆಡುತಿರುವರು
ಪ್ರಕೃತಿದೇವಿಯೂ ದೇವನು ;
ದೇವ ಗಂಡನು ಎಸೆದು, ದೇವಿ
ಹೆಣ್ಣು ಎನ್ನುವ ಹೂವನು.

ಮರೆಯಲ್ಲಿರುವ ದೇವರೂ ಪ್ರಕೃತಿಯೂ ಆಡುವ ಉರುಟಣೆಯಲ್ಲಿ ಗಂಡು ಹೆಣ್ಣು ಫಲ ಪುಷ್ಪ.

## ಮೂಕನ ಮಕ್ಕಳು

ತಾನೆ ನಡೆಯುವ ಕೂರಿಗೆಯೆ ಸರಿ
ಗಂಡು: ಬಂಡಿಗೆ ಉಗಿಯನು
ತುಂಬಿ ನಡೆಸುವ ತೆರಕೆ ತುಂಬಿದೆ
ಇಲ್ಲಿ ಆಸೆಯ ಹೊಗೆಯನು.

ಉಗಿಯಿಂದ ರೈಲು ನಡೆವಂತೆ ಆಸೆಯಿಂದ ಗಂಡೆಂಬ ಕೂರಿಗೆ ನಡೆಯುತ್ತದೆ.

ಒಂದು ಬಾಳುವೆ ನಮ್ಮ ಎಲ್ಲಾ
ಬಾಳ್ಕೆಯನು ಬಾಳುತ್ತಿದೆ;
ಒಡಲ ಮರೆಯಿಸಿ ಆದಿಶೇಷ
ಹೊರಗೆ ಫಣಗಳನೆತ್ತಿದೆ.

ಅದನ್ನೆಲ್ಲ ನಡೆಸುತ್ತ ಒಂದು ಬಾಳುವೆ ಬಾಳುತ್ತಿದೆ.

ಬಿಲ ಬಿಲಕೆ ಹೆಡೆ ಬೇರೆ ಆಡಲು
ಹಾವು ಬೇರೆಯೆ? ಬಾಹ್ಯಕೆ
ಜೀವ ಜೀವರು ಬೇರೆ. ಅರಿತೆಯೊ
ಇರುವುದೊಂದೇ ಜೀವಿಕೆ.

ಹುತ್ತದಲ್ಲಿರುವ ಒಂದು ಹಾವಿನ ನೂರು ಹೆಡೆ ನೂರು ಬಿಲದಲ್ಲಿ ಬೇರೆ ಬೇರೆ ಕಾಣುವಂತೆ,

ವಿಶ್ವಜೀವನ ಅದುವೆ, ಅದುವೇ
ಬ್ರಹ್ಮ, ಅದೆ ಪುರುಷೋತ್ತಮು.
ಇದನು ಸಂತತ ನೆನೆದು ಬಾಳುವ
ಮನುಜ, ಅವನೆ ಮಹಾತುಮು.

## ಮೂಕನ ಮಕ್ಕಳು

ನಮ್ಮ ದೇಹದಿ ನೋಡು : ನಡೆಯುವ
ಶಕ್ತಿ ನೆರೆದಿದೆ ಕಾಲಿಗೆ ;
ಹಿಡಿಯುವುದು ಕೈ ; ಕಣ್ಣು ನೋಡಿತು,
ರುಚಿಯನರಿವುದು ನಾಲಗೆ.

ದೇಹದಲ್ಲಿ ಕೈ ಕಾಲು
ಕಣ್ಣು ನಾಲಗೆ ತಾವು
ತಾವು ಅನುಭವ
ಪಡೆಯುವಂತೆ,

ನಾನು ನಡೆವೆನು ಎನಲು ಕಾಲು,
ಕಣ್ಣು ನಾ ನೋಡುವೆನೆನೆ,
ಹಿಡಿವೆ ನಾನೆನೆ ಹಸ್ತ, ನಾಲಗೆ
ನಾನೆ ರುಚಿಗಳ ಸವಿಯೆನೆ

ಎಂದು ಚಿಂತಿಸೆ, ಸತ್ಯವಪ್ಪುದೆ ?
ಬ್ರಹ್ಮ ತತ್ತ್ವಕೆ ಮಾನವ
ಇಂತು ಅಂಗೋಪಾಂಗ ; ಅರೆಕ್ಷಣ
ಅರಯಿಸೆ ಇದ ಕಾಣುವ.

ಪುರಿಯು ಬ್ರಹ್ಮದ
ಕೋಟಿ ಹೆಡೆಯಾಗಿ
ಅಂಗೋಪಾಂಗವಾಗಿ
ಜೀವರಾಶಿ
ಜೀವಿಸುತ್ತಿವೆ.

ದೈವ ಬಾಳುತಲಿಹುದು, ತಾನು
ಬರಿಯ ಆಯುಧ, ಎಂದನೇ
ಹಸಿಯ ಸೌದೆಯ ಪರಿಯ ಮಾನವ
ಅಹನು ಹೊಗೆಯುದ ಇಂಧನ ;

ಇದನ್ನು ತಿಳಿದವನು
ನಿರ್ಲಿಪ್ತನಾಗಿ
ಜೀವಿಸುತ್ತಾನೆ.
ಹೀಗಾಗುವುದು
ಬಾಳಿನ ಗುರಿ.

## ಮೂಕನ ಮಕ್ಕಳು

ರುಚಿಗೆ ಬಾಯನು ಚಪ್ಪರಿಸದೆಯೆ
ಆಗ ಬಾಳಲು ಬಲ್ಲನು;
ಹೊಲಬಿನಲಿ ಹರಿತರುವ ಸುಖಗಳ
ಬೆರಗಿಗಾತ್ಮವ ಚೆಲ್ಲನು.

ಇದ ವಿಚಾರದಿ ಕೆಲವರರಿವರು;
ಕೇಳಿ ತಿಳಿವರು ಕೆಲವರು;
ಹೊಗೆಯ ಅನುಭವ ಉಸಿರ ಕಟ್ಟೆ
ಮತ್ತೆ ಅನಿಬರು ತಿಳಿವರು;

ನಮ್ಮ ಮೂಕನ ರೀತಿ ಕೆಲವರು,
ಬಯಕೆಗಳು ಕೈ ಸಾರದೆ,
ಮುಂದುಗಾಣದೆ ನಿಂತು ನವೆವರು,
ಏನಗೆಯ್ಯಲು ತೋರದೆ.

ಉಳಿದವರ ಪರಿನೋಡಿ, ತನಗದು
ಇಲ್ಲವಾಯಿತು, ಎನ್ನದೆ
ಗುರಿಯ ನೋಡಲಿ ಇಂಥ ಮನುಜ:
ಒಬ್ಬ ಒಬ್ಬಗು ತನ್ನದೆ

ಗುರಿಮುಟ್ಟುವುದಕ್ಕೆ
ಒಬ್ಬೊಬ್ಬರಿಗೆ
ಒಂದೊಂದು ದಾರಿ.

## ಮೂಕನ ಮಕ್ಕಳು

ದಾರಿ ಇಹುದನು ಅವನು ಅರಿವನು ;
ಅದ ಹಿಡಿದು ತನ್ನಿಕ್ಕೆಗೆ
ಸೇರುವನು. ಗತಿ ಬೇರೆ ಇಲ್ಲವೆ
ಮಿಗಕೆ ಹಾವಿಗೆ ಹಕ್ಕಿಗೆ ?

ಮಲೆಯು ಮೋಗಡೆ ಇಹುದು ದೇಗುಲ :
ಗಾಡಿಯಿರೆ, ಕುಳಿತದರಲಿ,
ಸಾರು ಮಾರ್ಗದಿ ; ಗಾಡಿ ಇಲ್ಲವೆ,
ನೋಡು ಮೆಟ್ಟಲು ಇದಿರಲಿ.

ಕೆಲವರಿಗೆ ಸೌಕರ್ಯ ಇರುತ್ತದೆ ; ಕೆಲವ' ಇಲ್ಲ.

ತಂದೆಯುನು ಪಡೆದಿರುವ ಬಾಲಕ
ಅವನ ಭುಜದಲಿ ಕೂಡಲಿ ;
ತಂದೆ ಇಲ್ಲದ ಹುಡುಗ ತಾನೇ
ಏರಲಾಗದೆ ನೋಡಲಿ.

ಮಧ್ಯಮಾರ್ಗದಿ ಸಾರಬಾರದ
ಬಡವ, ಅಂಚಲಿ ಮುಂದರಿ ;
ನಿನ್ನ ಮುಟ್ಟದು ಮಾರ್ಗ ಮಧ್ಯದ
ನೂಕು ನುಗ್ಗಲು ಸಂದಡಿ.

ಸೌಕರ್ಯದ ಜೊತೆಗೆ ಅದರಿಂದಲೇ ತೊಂದರೆಯೂ ಇರಬಹುದು.

ಇದೆಲ್ಲ ಅಪ್ರಕೃತ

## ಮೂಕನ ಮಕ್ಕಳು

ಬಾಳಹಾಸಂಗಿಯಲಿ ಈ ಕಡೆ
ಕಾಯು ತಡೆದಿಹ ಮಾತನು
ನೆನೆದು ನಿಲುವೆಯ ? ನಡೆಸು ಆ ಕಡೆ :
ವಂಚಿಸಂತು ವಿಧಾತನ.

ವಿಧಿ ವಂಚಿಸಿದರೆ ನೀನು ವಿಧಿಯನ್ನು ಪ್ರತಿಯಾಗಿ ವಂಚಿಸಬೇಕು.

ಆಸೆಯನು ಗೆಲಬೇಕು ಮನುಜ :
ಅನುಭವಿಸಿಯೇ ಗೆಲುವುದೋ
ಅನುಭವಿಸದೆಯೊ ? ಇದರೊಳೇನಿದೆ ?
ಎಂತು ಗೆಲಿದರು ಸಲುವುದು.

ಹೇಗೆ ? ಆಸೆಯನ್ನು ಅನುಭವಿಸುವಂತಿಲ್ಲ ; ತಪ್ಪಿಸಿಕೊ ; ಗುರಿಗೆ ನಡೆ.

ನೀನು ನಿಂತೆಡೆಯಿಂದ ಮುಂದಕೆ
ಹೋಹುದೆಂತು ? ತಿಳಿ ಇದ.
ಇದನು ಮಾಡಲಿ ಎಂದೆ ದೇವರು
ನಿನ್ನ ಆಯೆಡೆ ನಿಲಿಸಿದ.

ಗಂಡು ಹೆಣ್ಣನು ಬಯಸಿತೇತಕೆ ?
ಬಾಳಬೇಡಿಕೆಯಾವುದು ?
ನಿತ್ಯವಾಗಲಿ ಜೀವ ಎಂಬುದು :
ಇದಕೆ ಗಿಡ ಮರ ಹೂವುದು.

ಗುರಿಯೇನು ? ಗಂಡು ಹೆಣ್ಣನ್ನು ಬಯಸಿತೇಕೆ ?

## ಮೂಕನ ಮಕ್ಕಳು

ತನ್ನ ಮೂಲಕ ವಿಶ್ವಜೀವನ
ನಿತ್ಯವಾಗಲಿ ಎಂಬುದೇ
ಪ್ರಣಯದೊಳಗಣ ಮರ್ಮ. ಮಕ್ಕಳು
ಇಲ್ಲ : ಬಾಳ್ಕೆಯೆ ತುಂಬದು.

ಎಳೆಯ ಜೀವವನ್ನು ಹಡೆಯಬೇಕು ಎಂದು.

ಮಗುವ ಹಡೆ, ಹೊರೆ, ಬೆಳೆಸು, ಎಂದು
ಪ್ರಕೃತಿ ನಮ್ಮನು ಹೂಡಿದೆ;
ಹಡೆದು ಹೊರೆಯುತ ಬೆಳಸುತಿರುವೆವು
ಏಕೆ ಎಂಬುದ ನೋಡದೆ.

ತನ್ನಿಂದ ಬಾಳು ನಿತ್ಯವಾಗಲಿ ಎನ್ನುವದಕ್ಕಾಗಿ; ಇದರಿಂದ ಬರುವ ಸಂಸ್ಕಾರಕ್ಕಾಗಿ.

ಹಡೆಯಲೇಬೇಕೆಂಬುದಿಲ್ಲ
ಹೊರೆದು ಬಹ ಪರಿಪಾಕಕೆ:
ಯಾರೆ ಹಡೆಯಲಿ, ಸಲಹು ನೀನು:
ಪೋಪೆ ನೀನದೆ ಲೋಕಕೆ.

ಮಕ್ಕಳನ್ನು ಹಡೆದು ಹೊರೆಯುವುದು ವಾಡಿಕೆ. ಆದರೆ ಹೊರೆಯುವುದೇ ಮುಖ್ಯ.

ಹೊರೆಯೆ ಮಾನವ ಶಿಶುವೆ ಬೇಕು
ಎಂದು ಎಣಿಸಲು ಸಲ್ಲದು;
ಮಗುವಿನಂತೆಯೆ ಹಕ್ಕಿಮಿಗಸೊಸಿ
ಹೊರೆವ ಕೈಯನು ಬಲ್ಲದು.

ಆ ಹೊರೆಯುವ ಎಳ ಜೀವ ಮಾನವವೇ ಆಗಬೇಕೆಂದಿಲ್ಲ.

ಎಳೆ ಉಸಿರು ಯಾವುದನೆ ಆಗಲಿ
ಹೊರೆಯೆ ಮನ ಮೆದುವಪ್ಪುದು;
ಸ್ವಾರ್ಥದಲಿ ಪಾಷಾಣವಾಗಿಹ
ಹೃದಯ ಅರಳದೆ ತಪ್ಪದು.

ತನ್ನ ಸುಖವನು ಮರೆತು, ಇದಿರಿನ
ಸುಖವ ಬಯಸಲು ಮುಕ್ತಿಯ
ಮೊದಲನೆಯ ಸೋಪಾನ: ಅದುವೇ
ಮುಂದೆ ತಹುದು ವಿರಕ್ತಿಯ.

ಸ್ವಾರ್ಥ ಹೋಗ ಬೇಕು; ಪರಾರ್ಥ ಸಿದ್ಧಿಸಬೇಕು.

ಹಡೆದು ಬಹ ಸಂಸ್ಕಾರವನು ಈ
ಹೊರೆದ ಬಾಳುವೆ ಪಡೆವುದು;
ಅಟ್ಟು ಉಂಡರೆ ತಣಿವ ತೆರನೇ
ಅಡದೆ ಉಂಡರು ನಡೆವುದು.

ಅಟ್ಟು ಉಂಡರೇನು, ಅಡದೆ ಉಂಡರೇನ?

ಮೊದಲ ಪಾಠವ ಬಿಟ್ಟು ಬಾಲಕ
ಎರಡನೆಯುದನು ಕಲಿತನೆ?
ಕಷ್ಟವಾಯಿತು ಕಲಿವು: ಆದರೆ
ಮೊದಲ ಕಲಿಯದೆ ಉಳಿದನೆ?

ಮೊದಲ ಪುಸ್ತಕ ಕಲಿತು ಎರಡನೆಯುದನ್ನು ಕಲಿತರೇನು? ಹಾಗೆಯೇ ಎರಡನೆಯುದನ್ನು ಕಲಿತರೇನು?

### ಮೂಕನ ಮಕ್ಕಳು

ಮೊದಲ ಪಾಠವ ಕಲಿತನೆಲ್ಲಿ?
ಈ ಹವಣ ಜನ ಕಾಣದು :
ಎರಡನೆಯುದನು ಕಲಿಯೆ ಮೊದಲದು
ಜೊತೆಗೆ ಬಾರದೆ ಮಾಣದು.

ಸೂತ್ರವನೆ ಅಭ್ಯಾಸ ಮಾಡಿದ
ಶಾಸ್ತ್ರಿಗಳು ಲಘು ಕೌಮುದಿ
ಬರದೆಹೋಯಿತು ಎಂಬರೇ? ಲಘು
ಅಡಗಿ ನಿಂತಿದೆ ಭೂಮದಿ.

ದೊಡ್ಡ ಗ್ರಂಥವನ್ನು ಕಲಿತವನು ಅದರ ಸಂಗ್ರಹ ಬರಲಿಲ್ಲ ವೆನ್ನಬೇಕೆ?

ಮೊದಲು ಹೂವುದು ಆಚೆ ಕಾವುದು
ಮರದ ಜಾತಿಗೆ ವಾಡಿಕೆ;
ಹೂವ ತೋರದೆ ಅತ್ತಿ ಕಾವುದು
ಯಾವ ಮಾಯೆಯ ಕಾಡಿಗೆ?

ಹೂವುದು ಕಾವುದ ಕ್ಕಾಗಿ; ಹೂವದೆ ಕಾತರೆ ತಪ್ಪೇನು?

ಹೂವತೋರದು ಅಷ್ಟೆ: ಹೂವಿನ
ಕಂಪ ತಳೆಯದೆ ಸಾಗದು.
ಹೊರೆವ ಪುಣ್ಯವ ಗಳಿಸು; ಹಡೆಯದ
ಕುಂದು ನಿನ್ನನು ತಾಗದು

ಹಡೆಯದೆ ಹೊರೆಯು ವುದು ಇದರಂತೆ.

ಹಡೆವ ಅಧಿಕೃತಿ ಕಿರಿದು, ಒಡಲದು;
ಹೊರೆವುದಾತ್ಮನ ಅಧಿಕೃತಿ;
ಕಿರಿದು ಇಲ್ಲದೆಹೋಯ್ತೆ? ಬೇಡ,
ಹಿರಿದು ಇರಲೆನೆ ಅದು ಮತಿ.

ಹೊಲನ ಬಿತ್ತಲು ಮರನ ಕೂರಿಗೆ;
ಮಿಗದ ಜಾತಿಗೆ ಗಂಡದು:
ಮನುಜ ಇಷ್ಟಕೆ ಮುಗಿದರಾಗದು;
ಏನು ಮುಂದಕೆ ಕಂಡುದು?

ಹೆಣ್ಣ ಜೊತೆಯಲಿ ನಿಂತು ತಾಯೂ
ಆಗಿ ಎಳೆಯದ ಕಾಯುವ
ನಿಟ್ಟು ಮನುಜಗೆ. ಇದನು ಮರೆತನು
ಬಾಳ್ವ ಹೊತ್ತಲೆ ಸಾಯುವ.

ಮನುಜಜಾತಿಯಲ್ಲಿ ತಂದೆಯಾದದ್ದು ತಾಯೂ ಆಗಬೇಕು.

ತಂದೆ ಯುಚ್ಚುಗದೊಡನೆ ತಾಯ
ಎಳಮನಸು ಅಳವಟ್ಟುದೇ
ಮೃತ್ಯು ತಹ ಪಾಶದಲಿ ಅವನನೆ
ಅಂದೆ ನೀನೇ ಕಟ್ಟದೆ.

ಆಗ್ಗೆ ಮನುಷ್ಯನು ಅಮರನಾಗುತ್ತಾನೆ.

## ಮೂಕನ ಮಕ್ಕಳು

ಮದುವೆಯಾಗೆನು ನಾನು; ಮದುವೆಯ
ಸೌಖ್ಯ ತಪ್ಪಿತು ಎಂಬೆನೆ?
ಒಡಲ ಮಿಕ್ಕುದನುಂಡು, ಮೂಕಗೆ
ತೋರಿದೆನು ಅದೆ ಇಂಬನೆ.

ಅವಧೂತರು ಮದುವೆಯಾಗಲಿಲ್ಲ ಆದರೆ ಗುರು ಕೃಪೆಯಿಂದ ಒಡಲ ಸುಖಕ್ಕಿಂತ ಹಿರಿದಾದ ಸುಖವನ್ನು ಕಂಡರು.

ಗುರುಗಳಡಿ ಹಿಡಿದೆನು: ಅನುಗ್ರಹ
ಮಾಡಿ ಉಳಿಸಿದರೆನ್ನನು.
ಗುರು ಅನುಗ್ರಹಿಸಿದರೆ ಇವನೂ
ಕಾದುಕೊಂಬನು ತನ್ನನು.

ಮೂಕನೂ ಹೀಗೆಯೇ ಉಜ್ಜೀವಿಸುವನು.

### ಗೌಡರು

ಎಂದರವಧೂತರು. ಮಹಾತ್ಮರ
ಮಾತ ಗಿಳಿಯವೊಲೋದಿ ನಾ,
ಒಡೆಯರೆದುರಲಿ ಗುರುವನೆನೆಯುತ,
ಧನ್ಯನಾದೆನು ಈ ದಿನ.

ಎಂದು ಗುರುವಿನ ಮಾತನ್ನು ಹೇಳಿ ಗೌಡರು ಗುರುವನ್ನು ನೆನೆದರು.

### ಕತೆಗಾರ

ಇಂತು ನುಡಿದುದೆ ಜವರಗೌಡರು
ನೆನೆದು ಕುಳಿತರು ಅರೆಕ್ಷಣ;
ಮನಕೆ ಗುರುವನು ಬಿಜಯಗೆಯಿಸಿ
ಪಡೆದರಹುದಾ ದರುಶನ.

### ಮೂಕನ ಮಕ್ಕಳು

ಅಂತು ಸುಮ್ಮನೆ ಕುಳಿತು ಅರೆಕ್ಷಣ
ಮತ್ತೆ ಗೌಡರು ನುಡಿದರು;
ಧ್ಯಾನದಲಿ ನಿಲಿಸಿದ್ದ ತಮ್ಮ
ಕತೆಯ ಸೂತ್ರವ ಹಿಡಿದರು.

ಕ್ಷಣಬಿಟ್ಟು ಕತೆಯನ್ನು ಮುಂದರಿಸಿದರು.

### ಗೌಡರು

ಹುರುಳು ಕಾಣದೆ ನಾನು ಗುರುವನು
ಬೆಳ್ಳನೆಯ ಬರಿಮಾತಿಗೆ
ಹಿರಿಯರೆಂಬವನಲ್ಲ: ಅವರದು
ನಿಷ್ಠೆಯರಿತವಧೂತಿಕೆ.

ಆರು ತಿಂಗಳು ನಮ್ಮೊಳಿದ್ದು
ಅವರು ಮುಂದಕೆ ನಡೆದರು;
ಬಿಟ್ಟು ಬಾಳೆವು ಜೊತೆಗೆ ಬಹೆವೆನೆ
ಒಂದು ಮಾತಲಿ ತಡೆದರು.

ಆರು ತಿಂಗಳಮೇಲೆ ಗುರುಗಳು ಎತ್ತಲೋ ಹೊರಟರು.

"ಜೊತೆಗೆ ಬರುವುದು ಉಂಟೆ, ಅಣ್ಣ?
ನಿಜದಿ ಬಯಸುವೆಯಪ್ಪರೆ,
ಜೊತೆಯೊಳಿರುವುದ ಕಲಿ; ಕಳೇಬರ
ಉಡಿದರೂ ಜೊತೆ ತಪ್ಪದು.

"ಒಡಲು ಒಡಲನು ನೋಡಿ ಜೊತೆಯಲಿ
 ನಡೆಯುವುದು ಲಘು ಕೌಮುದಿ;
ಮನವ ಜೊತೆಯಲಿ ನಿಲಿಸು; ಸೂತ್ರದ
 ಪಾಠವಪ್ಪುದು ನೇಮದಿ."

ಮತ್ತೆ ಅವರನು ಕಾಂಬ ಪುಣ್ಯ
 ಇಲ್ಲವಾಯ್ತೀ ಜನ್ಮಕೆ;
ಆದರವರಾ ನಡೆಯ ಸತ್ವ
 ಅಂದೆ ಊರಿತು ಮರ್ಮಕೆ.

ಮರಳಿ ಬರಲಿಲ್ಲ.

ನುಡಿವನಿತ ನಡೆವುದಕೆ ಬಾರದು
 ನಿಮ್ಮ ಸೇವಕ ಜವರಗೆ;
ನುಡಿಗೆ ನಿಲುಕದ ನಡೆಯ ಚೆಲುವಿಕೆ
 ಸಿದ್ಧಿಸಿದ್ದಿತು ಅವರಿಗೆ.

ಎಂತ ಹಿರಿಯ
ಚೇತನ ಅವರದು!

ಎಷ್ಟು ಭವದಲಿ ಯಾವ ತೆರದಲಿ
 ಎನಿತು ಏನನು ನೋತರೆ
ದೊರೆವುದೋ ಆ ಸಿದ್ಧಿ! ಇಲ್ಲದೆ
 ಸುಮ್ಮನೆಯೆ ಅವಧೂತರೆ?

## ಮೂಕನ ಮಕ್ಕಳು

ಹೋಹ ಮೊದಲಲಿ ಗುರು ಅದೆಲ್ಲಾ
ಮಂದಿಯಲಿ ನಗೆ ನುಡಿದರು;
ಮನದ ವ್ಯಾಕುಲ ಏನೆ ಇದ್ದರು
ಕೊಡವಿ ಎಲ್ಲವ ತೊಡೆದರು;

ಹೋಗುವ ಮೊದಲು
ಗುರು ಮೂಕನಿಗೆ

ನಮ್ಮ ಮೂಕನ ಬಳಿಗೆ ಕರೆದರು;
ಸನ್ನೆವಾತಲಿ, ಮರವನು
ರಕ್ಷಿಸಿಕೊ, ಜೋಪಾನ, ಇಂತೇ
ಮೆಚ್ಚಿಸುವೆ ನೀ ಗುರುವನು,

ಮರಗಳನ್ನು
ಜೋಪಾನವಾಗಿ
ಸಾಕು, ಬದುಕಿ
ಕೋಳ್ಳುತ್ತೀಯೆ,
ಎಂದು ಶಾಸನ
ಮಾಡಿದರು.

ಮೆಚ್ಚಿಸುವೆ ದೇವರನು, ಹೆಣ್ಣಿಗೆ
ಮರುಳು ಹೋಗದ ಕಾಯದೆ
ಹೆಣ್ಣು ನೀಡದ ಸುಖವ ಬೆಳೆಯುವೆ,
ನಿನಗೆ ಪಥ, ತಮ್ಮಾ, ಇದೇ,

ಎಂದು ಒಮ್ಮೆಗೆ ಇಮ್ಮೆ ವಿವರಿಸಿ
ಬೀಳುಕೊಟ್ಟರು ಮೂಕನ.
ಎನಿತ ತಿಳಿದನೊ, ಅವನು ತಲೆಗೆ
ಗುರುಗಳಡಿಗಳ ಸೋಕಿನ

ಮೂಕ ಒಪ್ಪಿದ.

## ಮೂಕನ ಮಕ್ಕಳು

ಸುಖವನಿತ್ತನು—ಯಾವ ಹೆಣ್ಣಿನ
ಸೋಕು ಆ ಸುಖ ಈವುದು?
ಗುರುವಿನಡಿ ಸುಖವೀವುದಲ್ಲದೆ
ಜನ್ಮಜನ್ಮಕು ಕಾವುದು.

ಆವರಿಗೆ ಮೊಕ್ಕಿದ.

ಕರಣ ಮನಗಳ ಕೆದರಿ ನಲಿಸುವ
ಸೌಖ್ಯವಿದೆ ಸಂಸಾರದೆ;
ಅವರ ಜೋಡಿಸಿ ನಿಲಿಸಿ ತಣಿಸುವ
ಗುರುವಿನಡಿ ಅದ ಮೀರಿದೆ.

ಅದಕ್ಕಿಂತ ಹೆಚ್ಚಿನ
ಸುಖ ಉಂಟೆ?

ಕ್ಷೋಭೆಗೊಳಿಸುತ ಸುಖವನೀಡುವ
ಲೋಕ ಉಳ್ಳಿಯ ಕಂಪನು
ಹೋಲುವುದು; ಹೋಲುವನು ಗುರು ನೊರೆ
ಹಾಲ ಗಮಗಮದಿಂಪನು.

ಊಟ ಔಷಧ ಒಂದೆ ಅಪ್ಪುದು
ಗುರುವ ಮೆಚ್ಚಿದ ಜೀವಗೆ;
ಎಲ್ಲ ಸುಖದುಗ್ರಾಣ ಅವನಿಗೆ
ಅವರು ಮೆಟ್ಟಿದ ಹಾವುಗೆ.

ಗುರುಗಳಿಲ್ಲಿಯೊ ಹೊರಟುಹೋಹರು,
ಮರಳಿ ಬಾರರು, ಎಂಬುದು
ಮೊದಲು ಮೂಕನ ಮನಕೆ ಮುಟ್ಟಿದು;
ಮುಟ್ಟಿದೊಡನೆಯೆ, ತುಂಬಿದ

ಗುರು ಹೊರಟು ಹೋಗುವರೆಂದು ತಿಳಿದು ಗೋಳುಗರೆದ.

ಜನದ ಮಧ್ಯದಿ ಕೂಗಿಕೊಂಡನು;
ತಾಯನಗಲುವ ಬಾಲನೋ,
ಗಂಡನಗಲುವ ಹೊಸಬಿಯೋ, ಎನೆ
ಹಿರಿವ ಬೇನೆಯ ತಾಳನು;

ಸಾಯಲಾರದೆ ಹಂದಿ ಊಳುವ
ತೆರನ ಮೂಕಸ್ವರದಲಿ
ಗೋಳುಗರೆದನು; ನೋಡುವರ ಮನ
ಕರಗಿ ಹರಿಯುವ ಭರದಲಿ.

ಗುರುಗಳೈದಿದಮೇಲೆ ಮೂಕನ
ಶ್ರದ್ಧೆ ಇಮ್ಮಡಿಯಾಯಿತು;
ಮನಕೆ ಮನವೇ ಮಾರುಹೋಗಿರೆ
ಅವನು ಮರ ಇವ ಕಾಯುತ

ಅವರು ಹೊರಟು ಹೋದಮೇಲೆ ಇಮ್ಮಡಿಯಾದ ಶ್ರದ್ಧೆಯಿಂದ ಮರವನ್ನು ಕಾದು ಸಲಹಿದ.

## ಮೂಕನ ಮಕ್ಕಳು

ತಾನೆ ಮರ ಮರ ತಾನೆ ಎಂಬೊಲು
ಇವನು ಬೆಳಸುತ ಬೆಳೆದನು ;
ಮಕ್ಕಳನು ಹಡೆದವರು ತಳೆಯುವ
ತೃಪ್ತಿದೃಷ್ಟಿಯ ತಳೆದನು.

ಮದುವೆಯಾದವರೆಲ್ಲ ಪಡೆಯುವ
ಸುಖದ ಪದವಿ ಅದಾವುದು ?
ಕನಸ ರತಿ ನಿಜಗತಿಗೆ ಅಂತರ
ಒಂದು ನೂರೇ ಗಾವುದ.

ಮಕ್ಕಳಾದವರೆಲ್ಲ ಪಡೆಯುವ
ತಣಿವು ಎಂಥದು ಕಾಣೆವೆ ?
ಒಳಿತು ಬೆಳೆದವೆ ಒಳಿತು ; ಇಲ್ಲವೆ
'ಹೋಗೆ ಏತಕೆ ಪ್ರಾಣವೇ ?'

ಗಾಸಿಗೊಳಿಸುವ ಹೆಂಡರಿಲ್ಲದೆ,
ಎಂತೊ ಎನಿಸದ ಮಕ್ಕಳ
ಪಡೆದ, ತೃಪ್ತಿಯ ನೆಲೆಯ ಹೋದುದು
ನಮ್ಮ ಮೂಕನ ಹೆಕ್ಕಳ.

### ಮೂಕನ ಮಕ್ಕಳು

ತರುಣಗಡಸಿದ ಹೆಣ್ಣಹಂಬಲ
ಮಧ್ಯಪ್ರಾಯದಿ ತೊಲಗಿತು ;
ಗುರುವನುಗ್ರಹವಿತ್ತ ಮಕ್ಕಳ
ಸೇವೆ ತಣಿವಲಿ ಪಳಗಿತು.

ಅಂದು ಹೆಣ್ಣನ್ನು ಬಯಸಿದ ಇವನು ಪ್ರಾಯದಲ್ಲಿ ಆ ಬಯಕೆಯನ್ನು ತಪ್ಪಿಸಿಕೊಂಡ.

ಯಾರೆ, ಆಟಕೆ, ಮದುವೆ ಅಹೆಯಾ
ಎನಲು ಇವನನು ಆಚೆಗೆ,
ಮಕ್ಕಳಿಗೆ ಮಲತಾಯ ತರಲಾ
ಏನು ಎಂತಹ ನಾಚಿಗೆ ?

ಎಂದು ಕೈಯಲಿ ಕಣ್ಣು ಹುಬ್ಬಲಿ
ಸನ್ನೆಗೆಯ್ವನು. ಗೊಂಬೆಯೇ
ದೇವರಾಯಿತು ; ಅಂತು ನಿಚ್ಚಳ,
ಅವನ ಮನಸಿನ ನಂಬಿಕೆ.

ಹತ್ತಿರಕೆ ಮೂವತ್ತು ವರುಷದ
ದಿವಸ ಮರಗಳ ಬೆಳೆಸುತ
ಮೆಯ್ಯನುಳಿದನು ಮೂಕ, ನೆಲದಲಿ
ತನ್ನ ಹೆಸರನು ನಿಲಿಸುತ.

ಮೂವತ್ತು ವರುಷ ಈ ಮರಗಳನ್ನು ಸಾಕಿ

**ಮೂಕನ ಮಕ್ಕಳು**

ಇರುವ ದಿನ ಈ ಮರಗಳಡಿಯಲಿ
ಜಗಲಿಯೊಂದನು ಕಟ್ಟಿದ;
ಏಸೊ ಜನ ನೆರಳಿನಲಿ ಆಡಿ
ನಿಂತು ಕೂತುದು ಪಟ್ಟಿದ

ಅವುಗಳಡಿ ಒಂದು ಜಗಲಿ ಕಟ್ಟಿ

ನೋಡಿ, ಎನಿತೋ ಸುಖವನಾಂತು,
ಮನೆಯನಾಳ್ವ ಗೃಹಸ್ಥರ
ಪದವನನುಭವಿಸಿದನು; ಇಂತಿದು
ಅವನ ಚರಿತೆಯ ವಿಸ್ತರ.

ಆ ನೆರಳಲ್ಲಿ ಜನ ನಲಿದದ್ದನ್ನು ನೋಡಿ ತೃಪ್ತನಾದ.

**ಕತೆಗಾರ**

ಮಾತ ಮುಗಿಸಿದ ಗೌಡರಿಗೆ ನಾ
ವಂದನೆಯ ನುಡಿ ಹೇಳಿದೆ;
"ಗೌಡರೇ ಈ ಕತೆಗೆ ನನ್ನದೆ
ತುಂಬು ಸಂತಸ ತಾಳಿದೆ.

"ಎಂಥ ಹಿರಿಯರು ನಿಮ್ಮ ಗುರುಗಳು!
ನಿಮ್ಮ ನುಡಿ ಈ ತೂಕಕೆ
ಎಂತುಬಂದಿತು, ಬಂದಿತೆಂತು
ಮನಸು ಈ ಪರಿಪಾಕಕೆ,

ಕತೆಗಾರನು ಗೌಡರನ್ನು ಮೆಚ್ಚಿ ವಂದಿಸಿದನು.

“ಎಂದು ಅಂದೇ ಚಿಂತಿಸುತ್ತಲಿ
ಅರ್ಥಹರಿಯದೆ ಬಿಟ್ಟೆನು ;
ಗುರುಗಳೀ ಕತೆ ಕೇಳಿ ಅರಿತೆನು
ನಿಮ್ಮ ತಿಳಿವಿನ ಹುಟ್ಟನು.

“ಅವರ ಆ ಹಿರಿನಡೆಯ ಚೆಲುವಿಕೆ
ಮಾತಮಿಕ್ಕಿತು ಎಂಬಿರೇ
ಅಂತೆ ನಿಮ್ಮಾ ನಡೆಯು ನುಡಿಯು
ನನ್ನ ತಣಿಸಿವೆ ನಂಬಿರಿ.”

ನುಡಿದೆ ಮನವನೆ: ಮೊದಲ ದಿವಸದ
ಇವರ ಪರಿವೆಯ ನೋಡುತ
ಆಯಿತೆಂತಿದು ಎಂಬ ಯೋಚನೆ
ನನ್ನ ಊಹೆಯ ಕಾಡಿತು.

ಜವರಗೌಡರು ವಿನಯನುಡಿದರು :
“ಏನಿಹುದು, ಅದು ಗುರುವಿನ
ಕರುಣೆ ಬೆಳಸಿದ ಪೈರು, ಉಳಿದುದು
ಹೊಗಳಿತೆನ್ನಯ ಮರೆವನು.

ಗೌಡರು ವಿನಯ.
ನುಡಿದು ಮತ್ತೆ
ಅತ್ತ ಬಂದಾಗ ಆ
ಮರಗಳನ್ನ ನೊ ಗಿ
ಎಂದರು.

ಮೂಕನ ಮಕ್ಕಳು

“ಗಾಳಿಹನುಮನಗಿರಿಯ ಮುಂಗಡೆ
ಮತ್ತೆ ಸುಳಿಯುವ ಹೊತ್ತಲಿ,
ನೋಡಿ, ಒಡೆಯರು, ನಮ್ಮ ಮೂಕನ
ಮಕ್ಕಳನು: ಈ ಸುತ್ತಲಿ

“ಬೇರೆಯಾವುದೆ ಮರವು ಇಂತು
ಮೆಚ್ಚಿ ಸೊಗಸವು ನೋಟಕೆ;
ನಿಲುವ ಚೆಲುವಿಕೆ ಒಪ್ಪಲಪ್ಪುದು
ದೇವಲೋಕದ ತೋಟಕೆ.

“ಮುಗನ ಹೆಸರಿನ ಮಲೆಯಹಾಯುತ
ಗಾಳಿಹರಿತರೆ ತಿಟ್ಟಗೆ,
ಅದರೊಳಾಡುವ ಮರನ ಸಪ್ಪುಳು
ಕೇಳುವರೆ ಬಹು ನೆಟ್ಟಗೆ.”

“ನಾಳೆಯೋ ನಾ ಮರಳಿ ಗಿರಿಯೆಡೆ
ನಡೆಯುಹೋಹೆನು, ಗೌಡರೆ;
ಮೂಕನನು ಗುರುಗಳನು ನೆನೆಸುವ
ನಿಮ್ಮ ಮರವನು ನೋಡದೆ

ಕತೆಗಾರನು ಅಗಲಿ ಎಂದು ನಿಂತರು.

ತಪ್ಪೆನೆನ್ನುತ ನಾನು ನಿಂತೆನು.
  ಜವರಗೌಡರು ನಿಲ್ಲುತ,
ಹೋಗಿಬನ್ನಿರಿ, ಒಡೆಯ, ನಿಮಗೆ
  ದೇವರೆಂದೂ ಒಳ್ಳಿತ

ಪರಸ್ಪರ ಬೀಳ್ಕೊಳುವೆಯಾಯಿತು.

ನೀಡಿ ಸಲಹಲಿ, ಎಂದು ನುಡಿಯುತ
  ನಗು ನಗುತ ಕೈಮುಗಿದರು.
ಏನು ಚೆಲುವಾ ನಿಲುವು, ಆ ನಗೆ!
  ಸಾಲದೆನಿತದ ಬಗೆದರೂ.

ಮನೆಗೆ ಬಂದವನಿದನು ಗೃಹಿಣಿಗೆ
  ಹೇಳಿದೆನು ಮೆಚ್ಚಾಡುತ;
ಹೆಣ್ಣು ಒಪ್ಪದು ಇಂತ ಮಾತಿಗೆ;
  ಅವರ ನುಡಿ ಹುಚ್ಚೋಡಿತು.

ಕತೆಗಾರನು ಮನೆಗೆ ಬಂದು ಮೂಕನ ಸಂಗತಿಯನ್ನು ಗೃಹಿಣಿಗೆ ಹೇಳಿದನು.

“ಹಾಲ ಬೇಡಿತು ಕೂಸು; ಆ ಗುರು
  ಹಾಲು ಇಲ್ಲದ ಪಾಡಿಗೆ
ಕಚ್ಚು ಕುಡಿಸಿದ. ಏನು ಚದುರಿದು?
  ಬಯಲಿಗೇ ಮನೆ ಬಾಡಿಗೆ!

ಹಾಲು ಬೇಡಿದ ಕೂಸಿಗೆ ಕಲಗಚ್ಚು ಕೊಟ್ಟರು ಗುರು;

## ಮೂಕನ ಮಕ್ಕಳು

“ ಮೂಕ ಬಯಸಲು ಮೂಕಿಯೊಬ್ಬಳ
ತಂದು ಕೊಟ್ಟಿರಲಾಗದೆ?
ಆರು ತಿಂಗಳ ದಿವಸ ಬಾಳಲು
ಸಾಕು. ಬಾಳುವೆ ಸಾಗದೆ

“ ಹಿರಿದರೂ ಒಳಿತಾಯಿತೆಂಬೆನು.
ಬದುಕು ಮಕ್ಕಳ ಆಟವೆ?
ಗೊಂಬೆಯನು ಮಗುವೆಂದು ನಂಬಿಸಿ
ಹೊರೆಯಿಸುವ ಬರಿ ಮಾಟವೆ?

“ ಪಾಪಿ ನಾಲಗೆ ಕಿವಿಗಳಿಲ್ಲದ
ನಡೆವ ಮರನನು ಹೆತ್ತರೆ,
ನಡೆಯದುದನವನಿಂದ ಹಡೆಯಿಸಿ
ನೀವಿದನು ಹೊಗಳುತ್ತಿರಿ.”

ನಡೆಯುವ ಮರ
ವಾಗಿದ್ದ ಮೂಕ,
ನಡೆಯದ ಮರ
ಅವನ ಮಕ್ಕಳು ;
ಎಂದರು ಆಕೆ.

ಅಂದಿನಂದದಿ ಮಗಳು ಅಳಿಯ
ಮನೆಯಲಿದ್ದರೆ ಏನನು
ಹೇಳುತಿದ್ದರೊ? ಈಗ ನಾನು
ಸವಿದೆನೀ ಕಹಿ ಜೇನನು.

## ಮೂಕನ ಮಕ್ಕಳು

ಮೂಕ ಎಲ್ಲರ ಬಾಳ ಬಾಳನು
ಎಂಬುದನು ನಾನರಿಯೆನೆ?
ಕೆಟ್ಟತೋಹದ, ಎಂದ ಬಾಳುವೆ
ಕೆಡದೆ ಉಳಿದಾ ಪರಿಯನೆ

ಕತೆಗಾರನು ಈ ಪಕ್ಷವನ್ನು ಬಲ್ಲನು.

ನೋಡುವೆನು ನಾ ನಿಲ್ಲಿ. ಬಾಳಲಿ
ಎಲ್ಲ ರೀತಿಯ ಜನವಿದೆ:
ಯಾವನೂ ಪಥಗೆಡದೆ ಬಾಳುವ
ದಾರಿ ತೋರಿಸಿ; ಘನ ಅದೆ.

ಮೂಕನ ಆಸೆ ತುಂಬ ಲಿಲ್ಲ ನಿಜ. ಆದರೆ ಅವನು ಗುರಿ ಮುಟ್ಟದ.

ಎಲ್ಲರಿಗು ಗುರಿ ಒಂದೆ: ಸಾರಲು
ಬಟ್ಟೆ ನನ್ನದು ಯಾವುದು?
ತೋರಲಮ್ಮರು ಎಲ್ಲ. ಗುರುವಿನ
ಕರುಣೆ ತೋರಿಸಿ ಕಾವುದು.

ಅದೇ ಮುಖ್ಯ.

ಆಸೆಯನು ಗೆಲು: ಆಕ್ಷಣದಲೇ
ಗೆಲಿದೆ ನೀ ಮೂಲೋಕವ:
ಸಿಳ್ಳೆಹಾಕುತ ನೋಡು, ನಾಯ್ ಎನೆ
ಬಳಿಗೆ ಸಾರುವ ನಾಕವ.

ಆಸೆ ಹೋಗಬೇಕು.

ಮೂರು ಲೋಕವ ಗೆಲಿದೆ: ಆಚೆಗೆ
  ಒಂದು ನಿಲುವುದು ಗೆಲುವೊಡೆ:
ನಾನು ಎಂಬದು: ಅದನು ಗೆಲ್ಲದೆ
  ಇಲ್ಲ ಬ್ರಹ್ಮದಿ ನಿಲುಕಡೆ.

ಸ್ವಾರ್ಥಹೋಗಬೇಕು.

ನಾನು ಎನೆ ಸಂಸಾರ, ಅಂತೇ
  ನೀನೆನಲು ಸುಖಸಾರವೋ,
ಎನರೆ ಹರಿಸೇವಕರು? ಇಲ್ಲಿಯೆ
  ಇಹುದು ಆಚೆಯು ತೀರವೂ.

ಇದೇ ಮುಕ್ತಿ. ಇದು ಹತ್ತಿರವೇ ಇದೆ.

ತೀರ ಇಲ್ಲಿಯೆ ಇಹುದು; ಒಯ್ಯುವ
  ನಾವೆಯೂ ಇಹುದಿಲ್ಲಿಯೆ;
ನಿನ್ನ ಬಿಟ್ಟರೆ ಎಲ್ಲ ಸಿದ್ಧ;
  ಬಿಟ್ಟುಳಿಯೆ ನೀ ಒಲ್ಲೆಯೋ!

ಜೀವವೇ ಉದ್ಧಾರಬೇಡವೆ
  ನಿನಗೆ? ಗುರಿಯನು ಮರೆಯದೆ
ಸಾಗು; ಇಂಬನು ಕುರಿತು ಸಾಗು;
  ಅಲ್ಲಿ ಸುಖದೈಸಿರಿ ಇದೆ.

ದೈವ ಒಲಿದರೆ ಸಿದ್ಧಿಸುತ್ತದೆ.

ಮೂಕನ ಮಕ್ಕಳು

ಹರಿಯು ಕೃಪೆ ಗುರುವಾಗಿ ಬಂದಿತೆ
ಮುಟ್ಟಬಲ್ಲೆನು ಇಂಬನು ;
ಅಂತರಿಂದಲೆ ಶಿವವೆ ರಕ್ಷಿಸು
ಗುರು ನಮೋ ಬಾ ಎಂಬೆನು.



1100—43. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು.

# ಶ್ರೀನಿವಾಸ ರಚಿತ

ಕೆಲವು ಸಣ್ಣ ಕತೆಗಳು
ಬಿನ್ನಹ (ಗೀತೆಗಳು)
ಶಾಂತಾ (ಸಣ್ಣ ದೃಶ್ಯ)
ಸಾವಿತ್ರಿ ( ,, )
ಸಣ್ಣ ಕತೆಗಳು
ಸಾಹಿತ್ಯ (ಉಪನ್ಯಾಸ)
ಅರುಣ (ಪದ್ಯಗಳು)
ವಿಮರ್ಶೆ ೧ (ಲೇಖನಗಳು)
ಉಷಾ (ಸಣ್ಣ ದೃಶ್ಯ)
ಸುಬ್ಬಣ್ಣ (ಕತೆ)
ತಾಳೀಕೋಟೆ (ಐತಿಹಾಸಿಕ ದೃಶ್ಯ)
ವಿಮರ್ಶೆ ೨ (ಲೇಖನಗಳು)
ನಾಲ್ಕು ಸಣ್ಣ ಕತೆಗಳು
ಕನ್ನಡದ ಸೇವೆ (ಭಾಷಣ)
ಮಂಜುಳಾ (ಸಾಮಾಜಿಕ ದೃಶ್ಯ)
ತಾವರೆ (ಪದ್ಯಗಳು)
ಕರ್ನಾಟಕದ ಜನತೆಯ ಸಂಸ್ಕೃತಿ
ಚೆಲುವು (ಪದ್ಯಗಳು)
ಶಿವ ಛತ್ರಪತಿ (ಐತಿಹಾಸಿಕ ದೃಶ್ಯ)
ವಿಮರ್ಶೆ ೩ (ಲೇಖನಗಳು)
ಯಶೋಧರಾ (ನಾಟಕ)
ಮಲಾರ (ಪದ್ಯಗಳು)
ಸಣ್ಣ ಕತೆಗಳು ೪
ರವೀಂದ್ರನಾಥ ಠಾಕೂರರು
ಸಣ್ಣ ಕತೆಗಳು ೫
ಶ್ರೀ ರಾಮಕೃಷ್ಣ
ತಿರುಪಾಣಿ
ಕರ್ಣಾಟಕದ ಜನಪದ ಸಾಹಿತ್ಯ
ಕಾಕನಕೋಟೆ
ಆದಿಕವಿ ವಾಲ್ಮೀಕಿ
ವಿಮರ್ಶೆ ೪ (ಲೇಖನಗಳು)
ಸಣ್ಣ ಕತೆಗಳು ೬
ಗೌಡರ ಮಲ್ಲಿ
ರಾಮನವಮಿ

(ಇಂಗ್ಲೀಷಿನಲ್ಲಿ)

Popular Culture in Karnataka
The Poetry of Valmiki
Short Stories (4 Vols.)
Subbanna

ಈ ಪುಸ್ತಕಗಳು ದೊರೆಯುವ ಸ್ಥಳಗಳು :—

ಶ್ರೀನಿವಾಸ ಪುಸ್ತಕ ಭಂಡಾರ, ವಿಶ್ವೇಶ್ವರಪುರ, ಬೆಂಗಳೂರು ಸಿಟಿ
ಬೆಂಗಳೂರು ಪ್ರೆಸ್, ಮೈಸೂರು ರೋಡ್, ಬೆಂಗಳೂರು ಸಿಟಿ
೪೩–೪೪, ಗವಿಪುರದ ವಿಸ್ತರಣ, ಬಸವನಗುಡಿ ಟಪಾಲು
ಮನೋಹರ ಗ್ರಂಥ ಭಾಂಡಾರ, ಧಾರವಾಡ